# ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳು ಒಂದು ಅಧ್ಯಯನ



ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಹೆಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾ ಪ್ರಬಂಧ

ಸುಜಾತ ಮಲ್ಲನಗೌಡ

ಮಾರ್ಗದರ್ಶಕರು
ಡಾ. ಚನ್ನಬಸಪ್ಪ ಎಸ್. ಪಾಟೀಲ
ಉಪ ನಿರ್ದೇಶಕರು
ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ
ಮೈಸೂರು




ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬
೨೦೦೦

# ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳು
# ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಹೆಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾ ಪ್ರಬಂಧ



ಸುಜಾತ ಮಲ್ಲನಗೌಡ



ಮಾರ್ಗದರ್ಶಕರು

**ಡಾ. ಚನ್ನಬಸಪ್ಪ ಎಸ್. ಪಾಟೀಲ**

ಉಪ ನಿರ್ದೇಶಕರು

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ

ಮೈಸೂರು

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೦

# ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳು
# ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಹೆಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾ ಪ್ರಬಂಧ



ಸುಜಾತ ಮಲ್ಲನಗೌಡ



ಮಾರ್ಗದರ್ಶಕರು
**ಡಾ. ಚನ್ನಬಸಪ್ಪ ಎಸ್. ಪಾಟೀಲ**
ಉಪ ನಿರ್ದೇಶಕರು
ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ
ಮೈಸೂರು

ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೦

# ಘೋಷಣಾ ಪತ್ರ

ನಾನು "ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳು. ಒಂದು ಅಧ್ಯಯನ" ಎಂಬ ಮಹಾ ಪ್ರಬಂಧವನ್ನು ಡಾ. ಚನ್ನಬಸಪ್ಪ ಎಸ್. ಪಾಟೀಲ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಈ ಮುಂಚೆ ಇದನ್ನು ಇಡೀಯಾಗಿ ಇಲ್ಲವೆ ಬಿಡಿಯಾಗಿ ಎಲ್ಲಿಯೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗೆ ಸಾದರಪಡಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಈ ಮಹಾ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಹೆಚ್.ಡಿ. ಪದವಿಗಾಗಿ ಸಾದರ ಪಡಿಸುತ್ತಿದ್ದೇನೆ.

ಸುಜಾತ

(ಸುಜಾತ ಮಲ್ಲನಗೌಡ)

ಸ್ಥಳ : ಹಂಪಿ

ದಿನಾಂಕ : ೩೦-೬-೨೦೦೦

# ಪ್ರಮಾಣ ಪತ್ರ

ಸುಜಾತ ಮಲ್ಲನಗೌಡ ಇವರು ನನ್ನ ಮಾರ್ಗದರ್ಶನದಲ್ಲಿ "ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳು : ಒಂದು ಅಧ್ಯಯನ" ಎಂಬ ಮಹಾ ಪ್ರಬಂಧವನ್ನು ಪಿಹೆಚ್.ಡಿ., ಪದವಿಗಾಗಿ ಸಿದ್ದಪಡಿಸಿದ್ದು, ಈ ಮೊದಲು ಇದುನ್ನು ಇಡೀಯಾಗಿ ಇಲ್ಲವೆ ಬಿಡಿಯಾಗಿ ಎಲ್ಲಿಯೂ ಪ್ರಕಟಿಸಿಲ್ಲವೆಂದು ಮತ್ತು ಯಾವುದೇ ಪದವಿಗಾಗಿ ಸಲ್ಲಿಸಿಲ್ಲವೆಂದೂ ಪ್ರಮಾಣೀಕರಿಸುತ್ತೇನೆ.

**(ಡಾ. ಚನ್ನಬಸಪ್ಪ ಎಸ್. ಪಾಟೀಲ)**
ಉಪ ನಿರ್ದೇಶಕರು
ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ
ಮೈಸೂರು.

## ಕೃತಜ್ಞತೆಗಳು

ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳ ಕೋಟೆಗಳು : ಒಂದು ಅಧ್ಯಯನ ಈ ವಿಷಯದ ಮೇಲೆ ಸಂಶೋಧನೆ ಕೈಗೊಳ್ಳಲು ಸೂಚಿಸಿದ ನನ್ನ ಪೂಜ್ಯ ಗುರುಗಳಾದ ಡಾ. ಚನ್ನಬಸಪ್ಪ ಎಸ್. ಪಾಟೀಲರವರಿಗೆ ಮೊದಲ ಕೃತಜ್ಞತೆ ತಿಳಿಸುವೆ, ಯಾಕೆಂದರೆ ಇಂತಹ ಒಂದು ವಿಶೇಷ ಹಾಗೂ ಒಳ್ಳೆಯ ವಿಷಯವನ್ನು ಕೊಟ್ಟು ನನ್ನಿಂದ ಸಂಶೋಧನೆ ಮಾಡಿಸಿದ್ದು, ನಿಜಕ್ಕೂ ಹೆಮ್ಮೆಯ ಸಂಗತಿ. ಈ ಮುಂಚೆ ನಾನು ಶಾಸನಗಳ ಮೇಲೆ ಸಂಶೋಧನೆ ಮಾಡಬೇಕೆಂದು ಅವರೊಡನೆ ಚರ್ಚಿಸಿದೆ. ಆದರೆ ಅವರು ಹೇಳಿದ್ದು ಹೀಗೆ, ಶಾಸನಗಳ ಮೇಲೆ ಸಾಕಷ್ಟು ಕೆಲಸ ಹಿಂದೆನಡೆದಿದೆ. ಈಗಲೂ ನಡೆಯುತ್ತಿದೆ ಅದಕ್ಕೆ ಬದಲಾಗಿ ಕೋಟೆಗಳ ಬಗ್ಗೆ ಸಂಶೋಧನೆ ಮಾಡಿ, ಯಾಕೆಂದರೆ ಕರ್ನಾಟಕದಲ್ಲಿ ಕೋಟೆಗಳ ಬಗ್ಗೆ ಸಂಶೋಧನೆ ಮಾಡಿರುವವರು ಕಡಿಮೆ. ನಿಮ್ಮಂತ ವಿದ್ಯಾರ್ಥಿಗಳು ಇಂಥ ಸಂಶೋಧನೆ ಮಾಡಿದರೆ ಸಮಾಜಕ್ಕೆ ಒಂದು ಕೊಡುಗೆ ಕೊಟ್ಟಂತೆ ಆಗುವುದು, ಅಂತ ಹೇಳಿದಾಗ ತಕ್ಷಣ ನಾನು ನನ್ನ ಮನೆಯಲ್ಲಿ ಹಿರಿಯರ ಸಮ್ಮತಿ ತೆಗೆದುಕೊಂಡು ನಮ್ಮ ಜಿಲ್ಲೆಯ ಕೋಟೆಗಳನ್ನು ಆಯ್ಕೆ ಮಾಡಿಕೊಂಡೆ. ಇಲ್ಲಿ ಪ್ರತಿಯೊಂದು ಊರುಗಳ ಕ್ಷೇತ್ರಕಾರ್ಯ ಕೈಗೊಂಡು ವಿಷಯ ಸಂಗ್ರಹಣೆ ಮಾಡಿ ಇಲ್ಲಿನ ಕೋಟೆಗಳ ಕಾಲ ಮತ್ತು ಬೆಳವಣಿಗೆ ಬಗ್ಗೆ ಬೆಳಕು ಬೀರಲು ಯತ್ನಿಸಲಾಗಿದೆ. ನನ್ನ ಕ್ಷೇತ್ರ ಕಾರ್ಯದ ವಿಷಯ ಸಂಗ್ರಹಣೆಯನ್ನು ತುಂಬಾ ತಾಳ್ಮೆಯಿಂದ ಪರಿಶೀಲಿಸಿದ್ದಾರೆ. ಜೊತೆಗೆ ಪ್ರತಿಯೊಂದು ಅಧ್ಯಾಯವನ್ನು ಕೂಲಂಕಷವಾಗಿ ಓದಿ ವಿಚಾರ ಮಾಡಿ ವಿಮರ್ಶಿಸಿದ್ದಾರೆ. ಅಲ್ಲದೆ ನನಗೆ ಅನೇಕ ಸಲಹೆಗಳನ್ನು ಕೊಟ್ಟಿದ್ದಾರೆ. ನನ್ನಿಂದ ತಪ್ಪುಗಳಾದಾಗ ಅವುಗಳನ್ನು ತಿದ್ದಿದ್ದಾರೆ. ಒಟ್ಟಿನಲ್ಲಿ ನನ್ನಿಂದ ಒಂದು ಒಳ್ಳೆಯ ಕೆಲಸ ಮಾಡಿಸಿದನನ್ನ ಮಾರ್ಗದರ್ಶಕರಿಗೆ ಈ ಮೂಲಕ ಗೌರವಪೂರ್ವಕ ಪ್ರಣಾಮ ಸಲ್ಲಿಸುತ್ತಿದ್ದೇನೆ.

ಕನ್ನಡ ವಿಶ್ವವಿದ್ಯಾಲಯದ ಶಾಸನ ವಿಭಾಗದ ಮುಖ್ಯಸ್ಥರಾದ ಡಾ. ದೇವರಕೊಂಡಾರೆಡ್ಡಿ, ಕನ್ನಡ ವಿಭಾಗದ ಉಪನ್ಯಾಸಕರಾದ ಡಾ. ಅಮರೇಶ ನುಗಡೋಣಿ, ಭಾಷಾಂತರ ವಿಭಾಗದ ಡಾ. ಮೋಹನ ಕುಂಟಾರ್, ಚರಿತ್ರೆ ವಿಭಾಗದ ಡಾ. ಕೆ. ಎಂ. ಸುರೇಶ್, ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಶ್ರೀ ಸುಬ್ರಮಣ್ಯಂ, ಶ್ರೀ ಮಲ್ಲೇಪುರಂ ವೆಂಕಟೇಶ್ ಅವರು ನನ್ನ ಅಧ್ಯಯನದಲ್ಲಿ ಒಳ್ಳೆಯಸಲಹೆ-ಸೂಚನೆ ಕೊಟ್ಟಿದ್ದಾರೆ. ಅವರೆಲ್ಲರಿಗೂ ನಾನು ಕೃತಜ್ಞತೆ ಸಲ್ಲಿಸುತ್ತಿದ್ದೇನೆ.

ನಂತರ ನನ್ನ ಮತ್ತೊಬ್ಬ ಗುರುಗಳಾದ ಶ್ರೀ ಮಹಮ್ಮದ್ ಹನೀಫ್ ಕಾಜಿ ಅವರು ನನಗೆ ಧೈರ್ಯ ತುಂಬಿ, ನನ್ನಲ್ಲಿ ಹೊಸ ಚೈತನ್ಯ ಹುಟ್ಟುವಂತೆ ಮಾಡಿದ್ದಾರೆ. ಅವರಿಗೆ ನಾನು ಗೌರವಪೂರ್ವಕವಾಗಿ ಪ್ರಣಾಮ ಸಲ್ಲಿಸುತ್ತಿದ್ದೇನೆ. ಅದೇ ರೀತಿ ಸಹೋದರಿ ಶ್ರೀಮತಿ ಮೀನಾಕ್ಷಿ ಖಂಡಿಮಠ ಉಪನ್ಯಾಸಕರು, ಇವರು ಕೂಡ

ನನಗೆ ಆಗಾಗ ಒಳ್ಳೆಯ ಸಲಹೆ ಕೊಡುತ್ತಾ ಬಂದಿದ್ದಾರೆ. ಹವ್ಯಾಸಿ ಸಂಶೋಧಕರಾದ ದುರ್ಗಜಗದೀಶ್ ಅವರು ನಾನು ರಾಯಚೂರಿನ ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಸಾಕಷ್ಟು ಸಲ ನೆರವಾಗಿದ್ದಾರೆ. ಇವರಿಗೂ ನಾನು ತುಂಬು ಹೃದಯದ ಕೃತಜ್ಞತೆ ಸಲ್ಲಿಸುವೆ. ಶ್ರೀ ಮಹಮ್ಮದ್ ಅಲಿ P.W. D ಇಂಜಿನಿಯರ್ ಇವರು ನನಗೆ ಒಂದು ಉರ್ದು ಪುಸ್ತಕವನ್ನು ಇಂಗ್ಲಿಷ್‌ಗೆ ಅನುವಾದ ಮಾಡಿಕೊಟ್ಟಿದ್ದಾರೆ. ಅವರ ಉಪಕಾರವನ್ನು ನಾನು ಯಾವತ್ತು ಮರೆಯುವುದಿಲ್ಲ. ಅವರಿಗೆ ಈ ಮೂಲಕ ಕೃತಜ್ಞತೆ ತಿಳಿಸುವೆ. ಪುಸ್ತಕ ಮಾರಾಟಗಾರರಾದ ಶ್ರೀ ಖಲೀಲ್ ಅಹ್ಮದ್ ನನಗೆ ರಾಯಚೂರಿನ ಕೆಲವು ಬುರುಜುಗಳನ್ನು ಗುರುತಿಸುವಲ್ಲಿ ನೆರವಾಗಿದ್ದಾರೆ. ಇವರಿಗೂ ನಾನು ಈ ಮೂಲಕ ಕೃತಜ್ಞತೆ ತಿಳಿಸುವೆ. ಅಲ್ಲದೆ ಶ್ರೀ ವೀರಭದ್ರಪ್ಪ, ಅಧ್ಯಾಪಕರು ಮತ್ತು ಕೊಪ್ಪಳದ ಶ್ರೀ ಬಿ.ಸಿ. ಪಾಟೀಲರು ಇವರು ನನಗೆ ಅನೇಕ ಉತ್ತಮ ಸಲಹೆಗಳನ್ನು ಕೊಟ್ಟಿದ್ದಕ್ಕೆ ಇವರಿಗೂ ನಾನು ಕೃತಜ್ಞತೆ ತಿಳಿಸುವೆ.

ನನ್ನ ಅಧ್ಯಯನದ ಪ್ರಮುಖ ಭಾಗ ತಲನಕ್ಷೆ (drawings) ಪ್ರತಿಯೊಂದು ಕೋಟೆಯ ತಲನಕ್ಷೆಯನ್ನು ಅಲ್ಲದೆ ಬಾಗಿಲು, ಕೊತ್ತಳ, ಬಾವಿ, ನಿಟ್ಟುಗಳ ತಲನಕ್ಷೆಗಳನ್ನು ಅಂದವಾಗಿ ಚಿತ್ರಿಸಿಕೊಟ್ಟ ಸಹೋದರ ಚಂದ್ರಶೇಖರ ಖಂಡಿಮಠ, ಇಂಜಿನಿಯರ್ ಇವರಿಗೆ ನಾನು ತುಂಬು ಹೃದಯದ ಕೃತಜ್ಞತೆ ತಿಳಿಸುವೆ. ಅದೇ ರೀತಿ ಈ ಅಧ್ಯಯನದ ಪ್ರಮುಖ ಆಕರ್ಷಣೆ ಎಂದರೆ ಕೋಟೆಗಳ ಛಾಯಾಚಿತ್ರಗಳು. ಈ ಛಾಯಾಚಿತ್ರಗಳನ್ನು ಅಂದವಾಗಿ ಸೆರೆ ಹಿಡಿದುಕೊಟ್ಟಿರುವ ಸಹೋದರ ಬಸವರಾಜ ಅವರಿಗೆ ನಾನು ತುಂಬು ಹೃದಯದ ಕೃತಜ್ಞತೆ ತಿಳಿಸುವೆ.

ನನ್ನ ಅಧ್ಯಯನಕ್ಕೆ ಅಗತ್ಯವಿರುವ ಪುಸ್ತಕಗಳನ್ನು ಸಕಾಲಕ್ಕೆ ಒದಗಿಸಿ ಕೊಟ್ಟಂತಹ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಗ್ರಂಥಾಲಯದ ಸಿಬ್ಬಂದಿಯವರಿಗೆ, ಹಾಗೂ ಕುಮ್ಮಟದುರ್ಗದ ಛಾಯಾಚಿತ್ರಗಳನ್ನು ಒದಗಿಸಿಕೊಟ್ಟ ಇಲಾಖೆಯ ನಿರ್ದೇಶಕರಿಗೆ ನಾನು ಕೃತಜ್ಞತೆ ಸಲ್ಲಿಸುವೆ. ಅದೇ ರೀತಿ ನಿರ್ದೇಶಕರು, ಶಾಸನ ವಿಭಾಗ, ಭಾರತೀಯ ಪುರಾತತ್ವಸರ್ವೇಕ್ಷಣ ಇಲಾಖೆ, ಮೈಸೂರು ಇವರು ನನಗೆ ಅಗತ್ಯವಿದ್ದ ಪುಸ್ತಕಗಳನ್ನು ದೊರಕಿಸಿಕೊಟ್ಟಿದ್ದಾರೆ. ಅವರಿಗೂ ಮತ್ತು ಗ್ರಂಥಾಲಯದ ಸಿಬ್ಬಂದಿಯವರಿಗೂ ಕೂಡ ಕೃತಜ್ಞತೆ ತಿಳಿಸುವೆ.

ಈ ಅಧ್ಯಯನದ ಪ್ರಮುಖ ಪ್ರೇರಕರು ಎಂದರೆ ನನ್ನ ಹಿರಿಯ ಸಹೋದರಿ ಶ್ರೀಮತಿ ಮಲ್ಲಮ್ಮ ಬಸವರಾಜಗೌಡ, ಇವರಿಗೆ ನಾನು ಪಿಹೆಚ್.ಡಿ. ಮಾಡುವುದು ಹಿರಿದಾದ ಆಸೆ ಆಗಿತ್ತು, ಅವರಿಗೆ ಮೊದಲಿನಿಂದಲೂ ನನ್ನ ಮೇಲೆ ಅಕ್ಕರೆ. ಅವರು ನನಗೆ ತೋರಿಸಿದ ಪ್ರೀತಿ, ಪ್ರೋತ್ಸಾಹಕ್ಕೆ ನಾನು ಯಾವತ್ತು

ಋಣಿಯಾಗಿರುತ್ತೇನೆ. ನನ್ನ ಮತ್ತೊಬ್ಬ ಸಹೋದರಿಯಾದ ಶ್ರೀಮತಿ ಸುವರ್ಣ ನಿರಂಜನ್ ಹಾಗೂ ಶ್ರೀಮತಿ ಚನ್ನಮ್ಮ ಶರಣೇಗೌಡ ಇವರು ಕೂಡ ನನ್ನ ಅಧ್ಯಯನಕ್ಕೆ ಸಾಕಷ್ಟು ನೆರವಾಗಿದ್ದಾರೆ. ನನ್ನ ಯಶಸ್ಸನ್ನೇ ಸದಾ ಬಯಸುವ ನನ್ನ ಸಹೋದರಿಯರಿಗೆ ನಾನು ತುಂಬು ಹೃದಯದ ಕೃತಜ್ಞತೆ ತಿಳಿಸುವೆ. ಈ ಅಧ್ಯಯನದ ಪ್ರಮುಖ ಬೆನ್ನೆಲುಬು ಅಂದರೆ ನನ್ನ ತಂದೆ-ತಾಯಿಗಳು ನನ್ನ ಅಧ್ಯಯನದ ಅವಧಿ ದೀರ್ಘವಾಗಿದ್ದರೂ ಕೂಡ ಒಂದಿಷ್ಟು ಬೇಸರಿಸಿಕೊಳ್ಳದೆ ನನಗೆ ಬೇಕಾದ ಎಲ್ಲಾ ಅನುಕೂಲಗಳನ್ನು ಮಾಡಿಕೊಟ್ಟಿರುವ ನನ್ನ ಪೂಜ್ಯ ತಂದೆ-ತಾಯಿಗಳಿಗೆ ನಾನು ಮನಪೂರ್ವಕವಾಗಿ ಕೃತಜ್ಞತೆ ಸಲ್ಲಿಸುವೆ. ಅದೇ ರೀತಿ ನನ್ನ ಸಹೋದರರಾದ ವಿಶ್ವನಾಥ ಹಾಗೂ ದೀಪಕ್ ನನ್ನ ಅಧ್ಯಯನದಲ್ಲಿ ತುಂಬಾ ನೆರವಾಗಿದ್ದಾರೆ. ಅವರಿಗೂ ನನ್ನ ಕೃತಜ್ಞತೆಗಳು. ಅದೇ ರೀತಿ ನನ್ನ ಹಿತ ಚಿಂತನೆಗಳನ್ನು ಸದಾ ಬಯಸಿದ ನನ್ನ ಮಾವಂದಿರಿಗೆ ಹಾಗೂ ಸೋದರಮಾವಂದರಿಗೂ, ಅಕ್ಕಂದರಿಗೆ ಅವರ ಮಕ್ಕಳಿಗೂ ನಾನು ತುಂಬು ಹೃದಯದ ಕೃತಜ್ಞತೆ ಸಲ್ಲಿಸುವೆ.

ನನ್ನ ಮದುವೆ ಆದ ಮೇಲೂ ನನ್ನ ಗಂಡನ ಮನೆಯಲ್ಲಿ ನನ್ನ ಅತ್ತೆಯವರು ಹಾಗೂ ನನ್ನ ಪತಿಯ ಸಹೋದರರಾದ ಶ್ರೀ ಭೀಮನಗೌಡ, ಶ್ರೀ ಶರಣೇಗೌಡ, ಶ್ರೀ ದಿ. ಶಂಕರಗೌಡ ಮತ್ತು ಶ್ರೀ ಶಿವನಗೌಡ ಮೈದುನ ವೀರೇಶ ಗೊರೆಬಾಳ ಹಾಗೂ ಅಕ್ಕಂದಿರು ನನಗೆ ಅಧ್ಯಯನ ಕೈಗೊಳ್ಳಲು ತುಂಬಾ ಪ್ರೋತ್ಸಾಹ ನೀಡಿದ್ದಾರೆ. ಅವರೆಲ್ಲರಿಗೂ ನಾನು ತುಂಬು ಹೃದಯದ ಕೃತಜ್ಞತೆ ಸಲ್ಲಿಸುವೆ. ಅದೇ ರೀತಿ ನನ್ನ ಕಕ್ಕಂದಿರಾದ ನೀಲಕಂಠಗೌಡ ಗೊರೆಬಾಳ, ಹಾಗೂ ಶ್ರೀ ಹನುಮನಗೌಡ ಬೆಳಗುರ್ಕಿ ಇವರು ನನಗೆ ಸಕಾಲದಲ್ಲಿ ಒಳ್ಳೆಯ ಸಲಹೆ ಸೂಚನೆಗಳನ್ನು ಕೊಡುತ್ತಾ ಬಂದಿದ್ದಾರೆ. ಹಾಗೂ ನನ್ನ ಕಕ್ಕಿಯರು ಕೂಡ ನನಗೆ ತುಂಬಾ ಪ್ರೋತ್ಸಾಹ ಕೊಟ್ಟಿದ್ದಕ್ಕೆ ಅವರಿಗೂ ಕೂಡ ತುಂಬು ಹೃದಯದ ಕೃತಜ್ಞತೆ ಸಲ್ಲಿಸುವೆ.

ನನ್ನ ಅಧ್ಯಯನದಲ್ಲಿ ನನಗೆ ಯಾವಾಗಲೂ ಪ್ರೋತ್ಸಾಹ, ಸ್ಫೂರ್ತಿಗಳನ್ನು ನೀಡುತ್ತಾ ಬಂದಿರುವ ನನ್ನ ಎಲ್ಲಾ ಆತ್ಮೀಯರಿಗೂ ಹಾಗೂ ಸ್ನೇಹಿತರಿಗೂ ಅದರಲ್ಲೂ ನನ್ನೊಡನೆ ಕ್ಷೇತ್ರಕಾರ್ಯಕ್ಕೆ ಬಂದಿದ್ದ ಸ್ನೇಹಿತೆ ಶಾರದ ಖಂಡಿಮಠ ಇವರಿಗೆ ನನ್ನ ಮನಪೂರ್ವಕ ಕೃತಜ್ಞತೆ ತಿಳಿಸುವೆ, ಅಲ್ಲದೆ ನನ್ನ ಅಧ್ಯಯನದಲ್ಲಿ ಉತ್ತಮ ಸಲಹೆ ಹಾಗೂ ಪ್ರೋತ್ಸಾಹ ಕೊಟ್ಟಂತ ನನ್ನ ಪತಿಯ ಸ್ನೇಹಿತರಿಗೂ ಮತ್ತು ಅವರ ಪತ್ನಿಯರಿಗೂ ಈ ಮೂಲಕ ಕೃತಜ್ಞತೆ ತಿಳಿಸುವೆ.

ಅದೇ ರೀತಿ ಈ ಅಧ್ಯಯನಕ್ಕೆ ಸಂಬಂಧ ಪಟ್ಟಂತಹ ಛಾಯಾಚಿತ್ರಗಳನ್ನು ಅಂಟಿಸಿಕೊಟ್ಟ ಶೋಭಾ ಪಾಟೀಲ ನೀರಮಾನ್ವಿ ಇವರಿಗೆ ಹಾಗೂ ಉತ್ತಮ ಸಲಹೆಗಳನ್ನು ಕೊಟ್ಟಿರುವ ನನ್ನ ಮಾರ್ಗದರ್ಶಕರ ಪತ್ನಿಯಾದ ಶ್ರೀಮತಿ ವಿನೋದ ಪಾಟೀಲ ಇವರಿಗೆ ನನ್ನ ತುಂಬು ಹೃದಯದ ಕೃತಜ್ಞತೆ ಸಲ್ಲಿಸುವೆ.

ನನ್ನ ಮಹಾ ಪ್ರಬಂಧವನ್ನು ತುಂಬಾ ಕಡಿಮೆ ಅವಧಿಯಲ್ಲಿ ಅಂದವಾಗಿ ಬೆರಳಚ್ಚು ಮಾಡಿ ಕೊಟ್ಟಂತಹ ಶ್ರೀ ಎಂ. ಮಹಾದೇವ ಹಾಗೂ ಅವರ ಪತ್ನಿಯಾದ ಶ್ರೀಮತಿ ಭಾಗ್ಯ ಅವರಿಗೆ ನಾನು ತುಂಬು ಹೃದಯದ ಕೃತಜ್ಞತೆ ಸಲ್ಲಿಸುವೆ.

ಕೊನೆಯದಾಗಿ ನನ್ನ ಅಧ್ಯಯನದ ಕೊನೆಹಂತದಲ್ಲಿ ನನಗೆ ತುಂಬಾ ನೆರವಾಗಿ ಯಾವಾಗಲೂ ಪ್ರೋತ್ಸಾಹಿಸುತ್ತಾ ಬಂದಿರುವ ನನ್ನ ಪತಿ ಶ್ರೀ ಸೋಮನಗೌಡ ಪಾಟೀಲ ಅವರಿಗೆ ನಾನು ಮನಪೂರ್ವಕವಾಗಿ ಕೃತಜ್ಞತೆ ಸಲ್ಲಿಸುವೆ.

ಅದೇ ರೀತಿ ಈ ಮಹಾಪ್ರಬಂಧ ರಚನಾ ಕಾರ್ಯದಲ್ಲಿ ನನ್ನ ಹಿತ ಚಿಂತನೆ ಬಯಸಿ, ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ನನಗೆ ಸಹಾಯ-ಸಹಕಾರ ನೀಡಿದ ಎಲ್ಲಾ ಮಹನೀಯರಿಗೂ, ಬಂದುಗಳಿಗೂ ಮತ್ತು ನಾನು ಕ್ಷೇತ್ರಕಾರ್ಯ ಕೈಗೊಂಡ ಸಮಯದಲ್ಲಿ ಪ್ರತಿಯೊಂದು ಊರುಗಳಲ್ಲಿ ಆ ಊರಿನ ಜನರು ನನಗೆ ತುಂಬು ಹೃದಯದಿಂದ ಆಧರಿಸಿ, ವಿಷಯ ಸಂಗ್ರಹಣೆಗೆ ಸಹಕರಿಸಿದ್ದಾರೆ. ಅವರೆಲ್ಲರಿಗೂ ನಾನು ಈ ಮೂಲಕ ಕೃತಜ್ಞತೆ ಸಲ್ಲಿಸುವೆ.

ಸುಜಾತ ಮಲ್ಲನಗೌಡ

# ಪರಿವಿಡಿ

## ಚಿತ್ರಗಳ ಪಟ್ಟಿ

೨೫. ರಾಯಚೂರು, ಕಾಟೀ ದರ್ವಾಜ, ಒಳಭಾಗ

೨೬. ರಾಯಚೂರು, ಕಾಟೀ ದರ್ವಾಜ, ಕೈಸಾಲೆಯ ಮೇಲಿನ ಕೊಠಡಿ

೨೭. ರಾಯಚೂರು, ದಿಡ್ಡಿ ದರ್ವಾಜ

೨೮. ರಾಯಚೂರು, ದಿಡ್ಡಿ ದರ್ವಾಜ

೨೯. ರಾಯಚೂರು, ಬಂಡಾಬೌಡಿ

೩೦. ರಾಯಚೂರು, ದಿಡ್ಡಿ ದರ್ವಾಜ

೩೧. ರಾಯಚೂರು, ಸಿಕಂದರೀ ದರ್ವಾಜ

೩೨. ರಾಯಚೂರು, ಪರಕೋಟ ದರ್ವಾಜ

೩೩. ರಾಯಚೂರು, ಬಸವನ ಕೋಟ ದರ್ವಾಜ

೩೪. ರಾಯಚೂರು, ತಾಜ್ ಬಂಗಲೆ

೩೫. ರಾಯಚೂರು, ತಾಜ್ ಬಂಗಲೆ

೩೬. ರಾಯಚೂರು, ಮಂಟಪ

೩೭. ರಾಯಚೂರು, ರಾಜವಾಡೆ ಮಸೀದಿ

೩೮. ರಾಯಚೂರು, ತೋಪು

೩೯. ಮಲಿಯಾಬಾದ ಕೋಟೆ

೪೦ ಮಲಿಯಾಬಾದ, ಕೋಟೆಯ ರಚನೆ ೧

೪೧ ಮಲಿಯಾಬಾದ, ಕೋಟೆಯ ರಚನೆ ೨

೪೨. ಮಲಿಯಾಬಾದ, ಒಳಕೋಟೆ

೪೩. ಮಲಿಯಾಬಾದ, ಕೋಟೆ ಮತ್ತು ಕೊತ್ತಳ

೪೪. ಮಲಿಯಾಬಾದ, ರೇಖಾ ಚಿತ್ರಗಳು: ಆಂಜನೇಯ ಮತ್ತು ರಥ

೪೫. ಮಲಿಯಾಬಾದ, ರೇಖಾಚಿತ್ರ: ಕಲ್ಲನ್ನು ಸಾಗಿಸುತ್ತಿರುವುದು

೪೬. ಮಲಿಯಾಬಾದ, ಒಳಕೋಟೆ, ಪೂರ್ವ ಬಾಗಿಲು

೪೭. ಮಲಿಯಾಬಾದ, ಪೂರ್ವ ಬಾಗಿಲ ಮೇಲಿನ ಗಣೇಶ

೪೮. ಮಲಿಯಾಬಾದ, ದಕ್ಷಿಣ ಬಾಗಿಲ ಹತ್ತಿರದ ಬಂಡೆಯ ಮೇಲಿನ ಗಣೇಶ

೪೯. ಮಲಿಯಾಬಾದ, ಒಳಕೋಟೆಯ ಒಳಗಿನ ಆನೆಗಳು

೫೦. ಮಲಿಯಾಬಾದ, ಹೊರಕೋಟೆಯ ಆಗ್ನೇಯ ಬಾಗಿಲು

೫೧. ಮಲಿಯಾಬಾದ, ಹೊರಕೋಟೆಯ ಹೊರಗೆ ಆಗ್ನೇಯಕ್ಕಿರುವ ಗೋಡೆಯಲ್ಲಿಯ ಬಾಗಿಲು

೫೨. ದೇವದುರ್ಗ ಕೋಟೆ

೫೩. ದೇವದುರ್ಗ, ಉತ್ತರ ದಿಕ್ಕಿನ ಗೋಡೆ

೫೪. ದೇವದುರ್ಗ, ಕೋಟೆಯ ಪೂರ್ವ ಭಾಗದ ಕಟ್ಟಡ

೫೫. ದೇವದುರ್ಗ, ದಕ್ಷಿಣ ಭಾಗದ ಕಟ್ಟಡಗಳು

೫೬. ದೇವದುರ್ಗ, ನೀರಿನ ತೊಟ್ಟಿ

೫೭. ಗಬ್ಬೂರು ಕೋಟೆ

೫೮. ಗಬ್ಬೂರು, ದಕ್ಷಿಣ ದಿಕ್ಕಿನ ಕೋಟೆ

೫೯. ಗಬ್ಬೂರು, ಪೂರ್ವ ದಿಕ್ಕಿನ ಕೋಟೆ

೬೦. ಗಬ್ಬೂರು, ರಾಯಚೂರು ಅಗಸಿ

೬೧. ಗಬ್ಬೂರು, ವೀರಭದ್ರೇಶ್ವರ ಅಗಸಿ

೬೨. ರಾಮದುರ್ಗ ಕೋಟೆ

೬೩. ರಾಮದುರ್ಗ, ಉತ್ತರ ದಿಕ್ಕಿನ ಕೊತ್ತಳ

೬೪. ರಾಮದುರ್ಗ, ರಾಮಲಿಂಗೇಶ್ವರ ದೇವಾಲಯ

೬೫. ಮಾನ್ವಿ ಕೋಟೆ

೬೬. ಮಾನ್ವಿ, ಪೂರ್ವ ದಿಕ್ಕಿನ ಬಾಗಿಲು

೬೭. ಮಾನ್ವಿ, ಬೆಟ್ಟದ ಮೇಲಿನ ಕಾವಲು ಗೋಪುರ

೬೮. ಮಾನ್ವಿ, ಬೆಟ್ಟದ ಮೇಲಿನ ಕಾವಲು ಗೋಪುರದ ಒಳಗಿನ ಮೆಟ್ಟಿಲುಗಳು

೬೯. ಮಾನ್ವಿ, ಪೂರ್ವ ದಿಕ್ಕಿನ ಕೋಟೆ

೭೦. ಮಾನ್ವಿ, ಉತ್ತರ ದಿಕ್ಕಿನ ಮಧ್ಯದ ಕೋಟೆ

೭೧. ಮಾನ್ವಿ, ಪೂರ್ವ ದಿಕ್ಕಿನ ಕೋಟೆಯಲ್ಲಿಯ ದಿಡ್ಡಿ

೭೨. ಮಾನ್ವಿ, ಬೆಟ್ಟದ ಮೇಲಿನ ನೀರಿನ ಕೊಳ

೭೩. ಮಾನ್ವಿ, ಉತ್ತರ ದಿಕ್ಕಿನ ಹೊರಕೋಟೆಯ ಒಳಗಿನ ಬಾವಿ

೭೪. ಕೋಟೆಕಲ್ಲು ಕೋಟೆ

೭೫. ಕೋಟೆಕಲ್ಲು, ಪಶ್ಚಿಮ ದಿಕ್ಕಿನ ಬಾಗಿಲು

೭೬. ಕೋಟೆಕಲ್ಲು, ಪಶ್ಚಿಮ ದಿಕ್ಕಿನ ಕೋಟೆ

೭೭. ಕುರುಕುಂದ ಕೋಟೆ

೭೮. ಕುರುಕುಂದ, ಕೋಟೆ ಗೋಡೆ

೭೯. ಕುರುಕುಂದ, ಕೋಟೆಯೊಳಗಿನ ಕಟ್ಟಡ

೮೦. ಗೋಲಪಲ್ಲಿಕೋಟೆ

೮೧. ಗೋಲಪಲ್ಲಿ, ಬಾಗಿಲು

೮೨. ಗೋಲಪಲ್ಲಿ, ಪೂರ್ವದಿಕ್ಕಿನ ಬಾಗಿಲು

೮೩. ಗೋಲಪಲ್ಲಿ, ಪೂರ್ವದಿಕ್ಕಿನ ಕೋಟೆ

೮೪. ಗುಡಗುಂಟಿ ಕೋಟೆ

೮೫. ಗುಡಗುಂಟಿ, ಮೂಡಲಗಸಿ

೮೬. ಗುಡಗುಂಟಿ, ಕಕ್ಕೇರಿ ಅಗಸಿ

೮೭. ಗುಡಗುಂಟಿ ಮೂಡಲಗಸಿಯ ಮುಂದಿನ ಕೊತ್ತಳಗಳು

೮೮. ಗುಡಗುಂಟಿ, ಮೂಡಲಗಸಿ

೮೯. ಗುಡಗುಂಟಿ, ನೈರುತ್ಯ ಭಾಗದ ಕೋಟೆ

೯೦. ಗುಡಗುಂಟಿ, ಪಶ್ಚಿಮ ಭಾಗದ ಕೊತ್ತಳ

೯೧. ಗುಡಗುಂಟಿ, ಗುಡ್ಡದ ಅಗಸಿ

೯೨. ಗುಡಗುಂಟಿ, ಕಾವಲು ಗೋಪುರ

೯೩. ಕೋತಾ ಕೋಟೆ

೯೪. ಕೋತಾ, ಬಾಗಿಲು

೯೫. ಕೋತಾ, ಬಾವಿ

೯೬ ಹೊನ್ನಹಳ್ಳಿ ಕೋಟೆ

೯೭. ಹೊನ್ನಹಳ್ಳಿ, ಬಾಗಿಲು

೯೮. ಹೊನ್ನಹಳ್ಳಿ, ಬಾಗಿಲಮುಂದಿನ ಗೋಡೆ

೯೯. ಹೊನ್ನಹಳ್ಳಿ, ಬಾಗಿಲು

೧೨೫. ಮುದುಗಲ್ಲು, ಕಾಟೀ ದರ್ವಾಜ, ಕದ

೧೨೬. ಮುದುಗಲ್ಲು, ಕಾಟೀ ದರ್ವಾಜ, ಮಧ್ಯ ಬಾಗಿಲು

೧೨೭. ಮುದುಗಲ್ಲು, ಕಾಟೀ ದರ್ವಾಜ ಮೊಗಸಾಲೆಯ ಒಳಭಾಗ

೧೨೮. ಮುದುಗಲ್ಲು, ಕಾಟೀ ದರ್ವಾಜ, ಮಧ್ಯ ಬಾಗಿಲಿನ ಕದ

೧೨೯. ಮುದುಗಲ್ಲು, ಕದದ ಮೇಲಿನ ಶಾಸನ

೧೩೦. ಮುದುಗಲ್ಲು, ಕಾಟೀ ದರ್ವಾಜ, ಮಧ್ಯ ಬಾಗಿಲು, ರಾಜವಂಶದವರ ವ್ಯಕ್ತಿ ಶಿಲ್ಪ

೧೩೧. ಮುದುಗಲ್ಲು, ಕಾಟೀ ದರ್ವಾಜ ಮುಂಚಾಚು (projecting balcony)

೧೩೨. ಮುದುಗಲ್ಲು, ಕಾಟೀ ದರ್ವಾಜ, ಬಾಗಿಲ ಛಾವಣಿ ಮೇಲಿನ ಕಾವಲುಗಾರನ ಕೊಠಡಿ

೧೩೩. ಮುದುಗಲ್ಲು, ಫತೇ ದರ್ವಾಜ

೧೩೪. ಮುದುಗಲ್ಲು, ಫತೇ ದರ್ವಾಜ, ಪೂರ್ವ ದಿಕ್ಕಿನಿಂದ

೧೩೫. ಮುದುಗಲ್ಲು, ಫತೇ ದರ್ವಾಜ ಮಲಿಕ್ ಮುರಾದನ ಶಾಸನ ಮತ್ತು ರೇಖಾಚಿತ್ರಗಳು

೧೩೬. ಮುದುಗಲ್ಲು, ಫತೇ ದರ್ವಾಜ, ಪಶ್ಚಿಮ ದಿಕ್ಕಿನ ಹೊರಬಾಗಿಲು

೧೩೭. ಮುದುಗಲ್ಲು, ಶಾಸನ, ಮಲಿಕ್‌ಮುರಾದ ಕಟ್ಟಿದ ಅಗುಸೆ

೧೩೮. ಮುದುಗಲ್ಲು, ಫತೇ ದರ್ವಾಜ, ಒಳಬಾಗಿಲು ಹೊರಗಿಂದ

೧೩೯. ಮುದುಗಲ್ಲು, ಫತೇ ದರ್ವಾಜ, ಒಳಬಾಗಿಲು ಒಳಗಿನಿಂದ

೧೪೦. ಮುದುಗಲ್ಲು, ದಿಡ್ಡಿಯ ಮುಂದಿನ ವರ್ತುಲಾಕಾರದ ಗೋಡೆ

೧೪೧. ಮುದುಗಲ್ಲು, ದಿಡ್ಡಿ

೧೪೨. ಮುದುಗಲ್ಲು, ಶಾಸನ, ಮಲಿಕ್ ಮುರಾದ ಕಟ್ಟಿಸಿದ ದಿಡಿ

೧೪೩. ಮುದುಗಲ್ಲು, ನಿಟುಗಳು

೧೪೪. ಮುದುಗಲ್ಲು, ಶಾಸನ, ಬಸವನ ನಿಟು

೧೪೫. ಮುದುಗಲ್ಲು, ಶಾಸನ, ಮಲಿಕ್ ಮುರಾದ ಕಟ್ಟಿಸಿದ ನಿಟು

೧೪೬. ಮುದುಗಲ್ಲು, ಶಾಸನ, ಯೆದುಲ ಶಾಹನ ಶೂರ ಪ್ರತಾಪ ಮಲಿಕ್ ಮುರಾದ ಕಟ್ಟಿಸಿದ ನಿಟು

೧೪೭. ಮುದುಗಲ್ಲು, ಶಾಸನ, ರಣದೊಳು ಓಂದ್ಮೆಟುವ ಹೇಡಿಗಳರಸ ಮಲಿಕ ಮುರಾದ ಕಟಿಸಿದ ನಿಟು

೧೪೮. ಮುದುಗಲ್ಲು, ನಿಟುಗಳು

೧೪೯. ಮುದುಗಲ್ಲು, ಫತೇ ದರ್ವಾಜದ ಬುರುಜು

೧೫೦. ಮುದುಗಲ್ಲು, ಫತೇ ದರ್ವಾಜದ ಬುರುಜಿನ ಮೇಲಿನ ತೋಪು

೧೫೧. ಮುದುಗಲ್ಲು, ಕಾವಲು ಗೋಪುರ

೧೫೨. ಮುದುಗಲ್ಲು, ಕಾವಲು ಗೋಪುರ

೧೫೩. ಮುದುಗಲ್ಲು, ಗಗನಮಹಲ್

೧೫೪. ಮುದುಗಲ್ಲು, ವಕ್ರಾಣಿ

೧೫೫. ಮುದುಗಲ್ಲು, ಚಾರಮಹಲ್ ಬಾವಿ

೧೫೬. ಮುದುಗಲ್ಲು, ಅಲಿ ಬುರುಜು

೧೫೭. ಕಲಮಂಗಿ, ಬಾಗಿಲು

೧೫೮. ಕಲಮಂಗಿ, ದಕ್ಷಿಣ ದಿಕ್ಕಿನ ಬುರುಜು

೧೫೯. ರೌಡಕುಂದ, ಕೋಟೆಯ ನೈರುತ್ಯ ಭಾಗ

೧೬೦. ರೌಡಕುಂದ, ಕಾವಲು ಗೋಪುರ

೧೬೧. ರೌಡಕುಂದ, ಕಾವಲು ಗೋಪುರದ ಒಳಬಾಗಿಲು

೧೬೨. ರೌಡಕುಂದ, ಕಾವಲು ಗೋಪುರ

೧೬೩. ಮುಕ್ಕುಂದ ಕೋಟೆ

೧೬೪. ಮುಕ್ಕುಂದ, ಕೋಟೆ, ಈಶಾನ್ಯದಿಂದ

೧೬೫. ಮುಕ್ಕುಂದ, ಕೋಟೆಯ ದಕ್ಷಿಣಭಾಗ

೧೬೬. ಕಾಟಾಪುರ ಕೋಟೆ

೧೬೭. ಕಾಟಾಪುರ, ದಕ್ಷಿಣ ಕೋಟೆ ಮತ್ತು ಆಗ್ನೇಯ ಬುರುಜು

೧೬೮. ಕಾಟಾಪುರ, ಕೋಟೆಯೊಳಗಿನ ಕಟ್ಟಡ

೧೬೯. ಹನಮಸಾಗರ ಕೋಟೆ

೧೭೦. ಹನಮಸಾಗರ, ಹೊರಕೋಟೆ ಬಾಗಿಲು

೧೭೧. ಹನಮಸಾಗರ, ಹೊರಕೋಟೆಯ ಬಾಗಿಲು

೧೭೨. ಹನಮಸಾಗರ, ಹೊರಕೋಟೆ

೧೭೩. ಹನಮಸಾಗರ, ಒಳಕೋಟೆ

೧೭೪. ಹನಮಸಾಗರ, ಒಳಕೋಟೆಯ ಬುರುಜು

೧೭೫. ಚಳಗೇರಿ

೧೭೬. ಚಳಗೇರಿ, ಕೋಟೆ

೧೭೭. ಚಳಗೇರಿ, ಬುರುಜು

೧೭೮. ಕುರುಬನಾಳ, ಬಾಗಿಲು

೧೭೯. ಕುರುಬನಾಳ, ಬುರುಜು

೧೮೦. ಮುಧೋಳ ಕೋಟೆ

೧೮೧. ಮುಧೋಳ, ಕೋಟೆ

೧೮೨. ಮುಧೋಳ, ಬುರುಜು

೧೮೩. ಕುಕನೂರ, ಕೋಟೆ

೧೮೪. ಕುಕನೂರ, ಬುರುಜು

೧೮೫. ಚಿಕ್ಕಮ್ಯಾಗೇರಿ ಕೋಟೆ

೧೮೬. ಚಿಕ್ಕಮ್ಯಾಗೇರಿ, ಕೋಟೆ

೧೮೭. ಚಿಕ್ಕಮ್ಯಾಗೇರಿ, ಬುರುಜು

೧೮೮. ಮುರಡಿ ಕೋಟೆ

೧೮೯. ಮುರಡಿ, ಕೋಟೆ

೧೯೦. ಮುರಡಿ, ಬುರುಜು

೧೯೧. ಗುನ್ನಾಳ ಕೋಟೆ

೧೯೨. ಗುನ್ನಾಳ, ಮೊದಲನೇ ಬಾಗಿಲು

೧೯೩. ಗುನ್ನಾಳ, ಹೊರಕೋಟೆ

೧೯೪. ಗುನ್ನಾಳ, ಒಳಕೋಟೆ ಬಾಗಿಲು

೧೯೫. ಗುನ್ನಾಳ, ಒಳಕೋಟೆ ನೈರುತ್ಯ ಬುರುಜು

೧೯೬. ಚಿಲಕಮುಖಿ, ಕೋಟೆಯ ಪಶ್ಚಿಮ ಭಾಗ

೧೯೭. ಚಿಲಕಮುಖಿ, ಸಂಸ್ಥಾನಿಕರ ಮನೆ

೧೯೮. ಇರಕಲಗಡ ಕೋಟೆ

೧೯೯. ಇರಕಲಗಡ, ಕೋಟೆಯ ಉತ್ತರ ಭಾಗ

೨೦೦. ಇರಕಲಗಡ, ನೈರುತ್ಯ ಭಾಗ

೨೦೧. ಇರಕಲಗಡ, ಬಾಗಿಲು

೨೦೨. ಇರಕಲಗಡ, ದಿಡ್ಡಿ

೨೦೩. ಇರಕಲಗಡ, ಕಾವಲುಗಾರರ ಗೂಡು

೨೦೪. ಇರಕಲಗಡ, ಕಣಜ

೨೦೫. ಇರಕಲಗಡ, ಕಣಜ

೨೦೬. ಇರಕಲಗಡ, ಬಾವಿ

೨೦೭. ಕೊಪ್ಪಳ ಕೋಟೆ

೨೦೮. ಕೊಪ್ಪಳ, ಆಗ್ನೇಯದಿಂದ

೨೦೯. ಕೊಪ್ಪಳ, ಅಷ್ಟಭುಜಾಕೃತಿಯ ಬುರುಜು

೨೧೦. ಕೊಪ್ಪಳ, ಸಿದ್ದಿಬುರುಜು ಬಾಗಿಲು

೨೧೧. ಕೊಪ್ಪಳ, ಜೋಗಿಬಂಡೆ ಬುರುಜುಗಳ ಸಮೂಹ

೨೧೨. ಕೊಪ್ಪಳ, ಜೋಗಿಬಂಡೆ ಬಾವಿ, ಕೈಪಿಡಿಗೋಡೆ

೨೧೩. ಕೊಪ್ಪಳ, ಜೋಗಿಬಂಡೆಯ ಬುರುಜಿನ ಮೇಲಿನ ತೋಪು

೨೧೪. ಕೊಪ್ಪಳ, ಜೋಗಿಬಂಡೆ ಬಾವಿ

೨೧೫. ಕೊಪ್ಪಳ, ಚಾಂದ್‌ಕುಂಟಾ ಬಾವಿ

೨೧೬. ಕೊಪ್ಪಳ, ಡಣಕನ ಬಾವಿ

೨೧೭. ಕೊಪ್ಪಳ, ಹಾಲಬಾವಿ

೨೧೮. ಕೊಪ್ಪಳ, ಹಾಲಬಾವಿ

೨೧೯. ಕೊಪ್ಪಳ, ನೀರಿನ ಕಾಲುವೆ ಮತ್ತು ತೊಟ್ಟಿ

೨೨೦. ಕೊಪ್ಪಳ, ಸುಲ್ತಾನ ಬಾಗಿಲು

೨೨೧. ಕೊಪ್ಪಳ, ಬೆಟ್ಟದ ತುದಿಯಲ್ಲಿಯ ಬತೇರಿ

೨೨೨. ಕೊಪ್ಪಳ, ಸುಲ್ತಾನ ಬಾಗಿಲು

೨೨೩. ಕೊಪ್ಪಳ, ಮೂರನೇ ಸುತ್ತಿನಲ್ಲಿಯ ಬಾವಿಯ ಮುಂದಿನ ಬಾಗಿಲು

೨೨೪. ಕೊಪ್ಪಳ, ಮೂರನೇ ಸುತ್ತಿನಲ್ಲಿಯ ಕಾವಲುಗಾರರ ಮಂಟಪ ಮತ್ತು ಕೊಠಡಿ

೨೫೦. ಕುಮ್ಮಟದುರ್ಗ, ಕುದುರೆ ಕಲ್ಲುಗಳು

೨೫೧. ಕುಮ್ಮಟದುರ್ಗ, ಕುದುರೆ ಕಲ್ಲುಗಳು

೨೫೨. ಕುಮ್ಮಟದುರ್ಗ, ಕುಮಾರರಾಮನ ಗುಡ್ಡದ ಮೇಲಿರುವ ಕೋಟೆಯ ಪೂರ್ವ ದಿಕ್ಕಿನ ಬಾಗಿಲು

೨೫೩. ಕುಮ್ಮಟದುರ್ಗ, ಕಡೆಗಾಪು (citadel)

೨೫೪. ಕುಮ್ಮಟದುರ್ಗ, ಅರಮನೆಯ ಅವಶೇಷಗಳು

೨೫೫. ಕುಮ್ಮಟದುರ್ಗ, ಅರಮನೆಯಂತಹ ಕಟ್ಟಡ

೨೫೬. ಕುಮ್ಮಟದುರ್ಗ, ಮದ್ದಿನ ಮನೆ

೨೫೭. ಕುಮ್ಮಟದುರ್ಗ, ಆನೆಸಾಗ (elephant stables)

೨೫೮. ಕುಮ್ಮಟದುರ್ಗ, ನೀರಿನ ದೋಣಿ

೨೫೯. ಕುಮ್ಮಟದುರ್ಗ. ಮಸ್ಜಿದ್

೨೬೦. ಕುಮ್ಮಟದುರ್ಗ, ಹಾಲಬಾವಿ

೨೬೧. ಕುಮ್ಮಟದುರ್ಗ, ಜೈನ ಬಸದಿ

೨೬೨. ಕುಮ್ಮಟದುರ್ಗ, ಈಶ್ವರ ದೇವಾಲಯ

೨೬೩. ಕುಮ್ಮಟದುರ್ಗ ರಾಮಸ್ವಾಮಿ ದೇವಾಲಯ

೨೬೪. ಕುಮ್ಮಟದುರ್ಗ, ಶಾಸನವುಳ್ಳ ವೀರಗಲ್ಲು

೨೬೫. ಕುಮ್ಮಟದುರ್ಗ, ಶಾಸನವುಳ್ಳ ವೀರಗಲ್ಲು

೨೬೬. ಕುಮ್ಮಟದುರ್ಗ. ವೀರಗಲ್ಲು

೨೬೭. ಕುಮ್ಮಟದುರ್ಗ, ಕುಮಾರರಾಮನ ಕುದುರೆ ಬೊಲ್ಲ

೨೬೮. ಕುಮ್ಮಟದುರ್ಗ. ಕುಮಾರರಾಮನ ಶಿಲ್ಪ

೨೬೯. ಕುಮ್ಮಟದುರ್ಗ. ಕಾವಲು ಗೋಪುರ

೨೭೦. ಶಿವಪುರ ಕೋಟೆ

೨೭೧. ಶಿವಪುರ, ಕಡೆಗಾಪಿನ ಬಾಗಿಲು

೨೭೨. ಶಿವಪುರ, ಕಡೆಗಾಪು

೨೭೩. ಶಿವಪುರ, ಹೊರಕೋಟೆಯ ಬಾಗಿಲಿನ ಹತ್ತಿರದ ಕೊಳ

೨೭೪. ಶಿವಪುರ, ಕಡೆಗಾಪಿನ ಬಾಗಿಲು

೩.೦೦. ಆನೆಗೊಂದಿ, ಪಶ್ಚಿಮ ಬೆಟ್ಟದ ಮೇಲ್ಭಾಗದ ಕೋಟೆಯ ಮೂರನೇ ಬಾಗಿಲು

೩.೦೧. ಆನೆಗೊಂದಿ, ಪಶ್ಚಿಮ ಬೆಟ್ಟದ ಮಧ್ಯದ ಕೋಟೆಯ ಮೊದಲನೇ ಬಾಗಿಲು

೩.೦೨. ಆನೆಗೊಂದಿ, ಪಶ್ಚಿಮ ಬೆಟ್ಟದ ಮಧ್ಯದ ಕೋಟೆಯ ಎರಡನೇ ಬಾಗಿಲು

೩.೦೩. ಆನೆಗೊಂದಿ, ಪಶ್ಚಿಮ ಬೆಟ್ಟದ ಮಧ್ಯದ ಕೋಟೆಯೊಳಗಿನ ದೊಡ್ಡ ಕಣಜ

೩.೦೪. ಆನೆಗೊಂದಿ, ದೊಡ್ಡ ಕಣಜ

೩.೦೫. ಆನೆಗೊಂದಿ, ಪಶ್ಚಿಮ ಬೆಟ್ಟದ ಮಧ್ಯದ ಕೋಟೆಯೊಳಗಿನ ದೊಡ್ಡ ಕಣಜದ ಒಳಭಾಗ

೩.೦೬. ಆನೆಗೊಂದಿ, ಪಶ್ಚಿಮ ಬೆಟ್ಟದ ಮೇಲ್ಭಾಗದ ಕೋಟೆಯೊಳಗಿನ ವೃತ್ತಾಕಾರದ ಕಣಜ

## ಸಂಕ್ಷೇಪಗಳು

ಶಾ.ಪ : ಶಾಸನ ಪರಿಚಯ

APGAS : Andhra Pradesh Government Archaeological Series

ARADND : Annual Reports of the Archaeological Department of HEH the Nizam's Dominions

ARIE : Annual Report on Indian Epigraphy

ARSIE : Annual Report on South Indian Epigraphy

EC : Epigraphia carnatica

EIAPS : Epigraphia Indica, Arabic and persian supplement

EIM : Epigraphia Indo - moslemica

HAS : Hyderabad Archaeological series

IA : Indian Antiquary

JAPSARI : Itihas : Journal of the Andhara Pradesh State Archives & Research Institute

JHAS : Journal of the Hyderbad Archaeological Society

MAR : Annual Reports of the Mysore Archaeological Depertment

QJMS : Quarterly journal of the mythic society

SII : South Indian Inscriptions

VPR : Vijayanagar progress Research

## ಅಧ್ಯಾಯ ಒಂದು

# ಪೀಠಿಕೆ

ಭಾರತ ದೇಶವು ಇಂದು ಪ್ರಪಂಚದ ಇತಿಹಾಸದಲ್ಲಿ ಒಂದು ಮಹೋನ್ನತ ಸ್ಥಾನವನ್ನು ಪಡೆದಿರುವದಕ್ಕೆ ಕಾರಣವೇನೆಂದರೆ ಭರತ ಖಂಡವು ತನ್ನ ಪ್ರಾಚೀನ ಕಾಲದ ಪರಂಪರೆಯನ್ನು ಉಳಿಸಿಕೊಂಡು ಬಂದಿರುವದು. ಅದರಲ್ಲಿ ಮುಖ್ಯವಾಗಿ ಸುಂದರ ಮತ್ತು ಭವ್ಯವಾದಂತಹ ಸ್ಮಾರಕಗಳನ್ನುಇಂದಿಗೂ ಸಂರಕ್ಷಿಸಿಕೊಂಡು ಬಂದಿರುವದು ಕಾರಣವಾಗಿದೆ. ಉದಾಹರಣೆಗೆ ಕ್ರಿಸ್ತಪೂರ್ವ ಕಾಲದಲ್ಲಿನ ಹರಪ್ಪ, ಮಹೆಂಜೋದಾರೋ, ಕಾಲಿಬಂಗನ್, ಲೋಥಲ್ ಇತ್ಯಾದಿ. ಪ್ರಾಚೀನ ಕಾಲದ ಸ್ಥಳಗಳಲ್ಲಿ ಅಂದಿನ ಸಾಂಸ್ಕೃತಿಕಪರಂಪರೆಯ ಕುರುಹುಗಳನ್ನು ನಾವು ಇಂದಿಗೂ ಕಾಣಬಹುದಾಗಿದೆ. ಇಂಥ ಭವ್ಯವಾದ ಸಾಂಸ್ಕೃತಿಕಪರಂಪರೆಯನ್ನು ಹೊಂದಿರುವ ಭಾರತದಲ್ಲಿ ಕರ್ನಾಟಕ ರಾಜ್ಯವು ಒಂದಾಗಿದೆ. ಆದಿಶಿಲಾಯುಗದಿಂದ ಹಿಡಿದು ಆಧುನಿಕ ಯುಗದವರೆಗಿನ ಅಂದಿನ ಅವಶೇಷಗಳು ಇಲ್ಲಿವೆ. ಉದಾಹರಣೆಗೆ ಲಿಂಗಸುಗೂರು ತಾಲೂಕಿನ ಪಿಕ್ಲಿಹಾಳು, ಮಸ್ಕಿ, ಮಾನ್ವಿ ತಾಲೂಕಿನ ವಟಗಲ್ ಉತ್ಖನನಗಳಲ್ಲಿ ಪ್ರಾಗೈತಿಹಾಸಿಕ ಅವಶೇಷಗಳು ಲಭ್ಯವಾಗಿವೆ. ಅಲ್ಲದೆ ವಾಸ್ತು ಶಿಲ್ಪಗಳಲ್ಲಿ ಹೆಸರಾದಂತಹ ಮಹತ್ವದ ದೇವಾಲಯಗಳು ಕುಕನೂರು, ಇಟಗಿ, ಹಂಪಿ, ಬಾದಾಮಿ, ಪಟ್ಟದಕಲ್ಲು, ಐಹೊಳೆ, ಇತ್ಯಾದಿ ಸ್ಥಳಗಳಲ್ಲಿ ಇವೆ. ಅಲ್ಲದೆ ಬಲಿಷ್ಠವಾದಂತಹ ಕೋಟೆ-ಕೊತ್ತಳಗಳು ಕರ್ನಾಟಕದಲ್ಲಿ ಇಂದಿಗೂ ಉಳಿದುಕೊಂಡು ಬಂದಿದೆ. ಹೀಗೆ ಕರ್ನಾಟಕದಲ್ಲಿ ಆಳಿದಂತಹ ಅರಸರೆಲ್ಲರೂ ಅಂದು ಕಲೆ, ವಾಸ್ತು ಶಿಲ್ಪ, ಸಂಗೀತ, ಧರ್ಮದ ಬೆಳವಣಿಗೆಗೆ ತುಂಬಾ ಪ್ರೋತ್ಸಾಹ ಕೊಟ್ಟಿದ್ದಾರೆ.

ಅಂದು ಸಾಮ್ರಾಜ್ಯಗಳ ನಿರ್ಮಾಣ ಮತ್ತು ಅವುಗಳ ನಿರ್ವಹಣೆಯಲ್ಲಿ ಶಿಲ್ಪ ಸಂಗೀತಾದಿಗಳ ಕಲೋಪಾಸನೆಯಲ್ಲಿ, ಹೀಗೆ ಜೀವನದ ಎಲ್ಲಾ ರಂಗಗಳಲ್ಲಿ ಕರ್ನಾಟಕದ ಸಾಧನೆ ಸಾರ್ಥಕತೆ ಪಡೆದಿದೆ. ಅತೀ ಪ್ರಾಚೀನ ಕಾಲದಿಂದಲೂ ಭಾರತೀಯ ಸಂಸ್ಕೃತಿಗೆ ತನ್ನದೇ ಆದ ಉಜ್ವಲ ಪರಂಪರೆಯನ್ನಿತ್ತು ಅದನ್ನು ಬೆಳಸಿಕೊಂಡು ಬಂದಿದೆ.

ಈ ಪ್ರಪಂಚದೊಳಗೆ ಮನುಷ್ಯನನ್ನು ಬಿಟ್ಟು ಇತರೆ ಜೀವರಾಶಿಗಳಿಗೆ ಸಹಜವಾಗಿ ತಮ್ಮನ್ನು ತಾವು ರಕ್ಷಿಸಿಕೊಳ್ಳುವ ಸಾಧನೋಪಾಯಗಳು ಪ್ರಕೃತಿದತ್ತವಾಗಿ ಬಂದಿವೆ. ಉದಾಹರಣೆಗೆ ಆನೆ, ಆಮೆ, ಹಂದಿ, ಸಿಂಹ, ಇತ್ಯಾದಿ ಪ್ರಾಣಿಗಳಿಗೆ ದಪ್ಪನೆಯ ಚರ್ಮವೇ ರಕ್ಷಕವಚವಾಗಿದೆ. ಇದರಿಂದ ಯಾವುದೇ ಮಳೆ ಚಳಿ,

ನೆರೆಹಾವಳಿ, ಇತರೇ ಭೀತಿ, ಭಯಕ್ಕೆ ಅವುಗಳು ಅಂಜುವುದಿಲ್ಲ. ಆದರೆ ಅದೇ ಮನುಷ್ಯನಿಗೆ ಈ ಭಯ, ಭೀತಿ, ಹೆಚ್ಚು. ಕಾರಣ ಅವನಿಗೆ ಸಹಜವಾದಂತ ರಕ್ಷಣಾ ಸಾಧನೆಗಳಿಲ್ಲ. ಆದರೆ ಪ್ರಕೃತ್ತಿದತ್ತವಾಗಿ ಮನುಷ್ಯನಿಗೆ 'ವಿವೇಚನಾ ಶಕ್ತಿ' ಇದೆ. ಆ ವಿವೇಚನಾ ಶಕ್ತಿಯಿಂದ ಮನುಷ್ಯ ಕೃತಕವಾದಂತಹ ಸಾಧನ ತಂತ್ರಗಳನ್ನು ಬಳಸಿಕೊಳ್ಳಲು ಪ್ರಾರಂಭಿಸಿದನು. ಉದಾಹರಣೆಗೆ ಆದಿಶಿಲಾಯುಗದಲ್ಲಿ ಮಾನವ ಕಲ್ಲಿನಿಂದ ಆಯುಧಗಳನ್ನು ಸಿದ್ದಪಡಿಸಿದನು. ಮೊದಲು ತನ್ನೊಬ್ಬನಿಗಾಗಿ ತನ್ನನ್ನು ರಕ್ಷಿಸಿಕೊಳ್ಳುತ್ತಿದ್ದ. ಕಾಲಾಂತರದಲ್ಲಿಮಾನವ ಸಮಾಜದಲ್ಲಿ ಜೀವನ ಮಾಡಲು ಪ್ರಾರಂಭಿಸಿದ ಮೇಲೆ ಸಮಾಜಕ್ಕಾಗಿ ರಕ್ಷಣೆ ಮಾಡಿದನು. ಪುನಃ ತನ್ನ ರಾಜ್ಯಕ್ಕಾಗಿ ರಕ್ಷಣಾ ಸಾಮಾಗ್ರಿಗಳನ್ನು ಉಪಯೋಗಿಸಲು ಪ್ರಾರಂಭಿಸಿದನು. ಹೀಗೆ ಗ್ರಾಮಗಳು ಸೇರಿ ಪಟ್ಟಣಗಳಾಗಿ, ಈ ಪಟ್ಟಣಗಳು ಒಂದಾಗಿ ರಾಜ್ಯದ ಉಗಮವಾಯಿತು. ಈ ರಾಜ್ಯದ ಸಂರಕ್ಷಣೆಗೆ ಕೋಟೆಗಳು ಉಗಮವಾದವು. ರಾಜ್ಯದ ಅತ್ಯವಶ್ಯಕ ಸಪ್ತಾಂಗಗಳಲ್ಲಿ ದುರ್ಗ ಅಥವಾ 'ಕೋಟೆ' ಒಂದು ಎಂದು ರಾಜನೀತಿ ಹೇಳುವುದು. ಇದರಲ್ಲಿ ಭದ್ರವಾದ ಕೋಟೆ ಇಲ್ಲದ ರಾಜನನ್ನು ಬಿರುಗಾಳಿಗೆ ಸಿಕ್ಕಿದ ಮೋಡಕ್ಕೆ ಸಮಾನನೆನ್ನಲಾಗಿದೆ.

ಚಿದಾನಂದಮೂರ್ತಿಯವರು ಹೇಳುವಂತೆ ಕನ್ನಡಿಗರ ಜನಜೀವನದಲ್ಲಿ ತ್ಯಾಗಕ್ಕೆ ಇರುವಷ್ಟು ಮೌಲ್ಯ ವೀರತ್ವಕ್ಕೂ ಇದೆ.[೨] ಈ ಮಾತು ಕೇವಲ ಕನ್ನಡಿಗರಿಗೆ ಮಾತ್ರವಲ್ಲದೆ ಸಮಸ್ತ ಭಾರತೀಯರಿಗೂ ಅನ್ವಯಿಸುತ್ತದೆ. ಇಂತಹ ವೀರತ್ವವನ್ನು ಪ್ರದರ್ಶಿಸುವಂತಹ ಸ್ಥಳಗಳಲ್ಲಿ ಕೋಟೆ-ಕೊತ್ತಳಗಳು ಪ್ರಮುಖವಾದವು. ಭಾರತ ಚರಿತ್ರೆಯಲ್ಲಿ ಕೋಟೆ-ಕೊತ್ತಳಗಳು ಹಿಂದಿನಿಂದಲೂ ಮಹತ್ವದ ಪಾತ್ರವನ್ನು ವಹಿಸುತ್ತಾ ಬಂದಿರುವದು ಗಮನಾರ್ಹವಾದ ವಿಷಯವಾಗಿದೆ. ಕೋಟೆ-ಕೊತ್ತಳಗಳ ಇತಿಹಾಸವು ತುಂಬಾ ಪ್ರಾಚೀನ ತಮವಾದದು. ಮಾನವನ ನಾಗರೀಕತೆಯೊಂದಿಗೆ ಇವು ಹುಟ್ಟಿಕೊಂಡು ಬಂದವು. ಭಾರತದ ಪ್ರಾಚೀನತಮವೆನಿಸಿದ ವೈದಿಕ ಸಾಹಿತ್ಯದಲ್ಲಿಯೂ ಈ ಬಗ್ಗೆ ಅನೇಕ ಮಾಹಿತಿಗಳಿವೆ. ಕೌಟಿಲ್ಯನ ಅರ್ಥಶಾಸ್ತ್ರವನ್ನು ಒಳಗೊಂಡಂತೆ ಅನೇಕ ಗ್ರಂಥಗಳು ಪ್ರದೇಶದ ಆಯ್ಕೆ, ಕೋಟೆಯ ರಚನೆ, ಮೊದಲಾದ ವಿಷಯಗಳ ಬಗ್ಗೆ ಚರ್ಚಿಸಿವೆ. ಹಿಂದಿನ ಕಾಲದ ನಮ್ಮ ರಾಜಕೀಯ ವ್ಯವಸ್ಥೆಗೆ ಪಟ್ಟಣ, ಗ್ರಾಮಗಳ ಸಂರಕ್ಷಣೆಯ ಸಾಧನಗಳಾಗಿದ್ದ ಕೋಟೆ ಕೊತ್ತಳ ತುಂಬಾ ಅವಶ್ಯಕವೆನಿಸುತ್ತಿದ್ದವು. ಕಾರಣ ಶತ್ರುಗಳು ತಮ್ಮ ಮೇಲೆ ನುಗ್ಗಿ ಬರದಂತೆ, ತಡೆಯುವುದಕ್ಕೆ ಮತ್ತು ಸುಭದ್ರವಾದ ಸ್ಥಿತಿಯಲ್ಲಿ ನಿಂತು ಅವರನ್ನು ಸದೆಬಡಿಯುವುದಕ್ಕೆ ಈ ಕೋಟೆಗಳು ತುಂಬಾ ಸಹಾಯಕ ವಾಗುತ್ತಿದ್ದವು. ಅನುಭವ, ಯುದ್ಧತಂತ್ರ, ಆಯುಧ ಬಳಕೆ, ನಿವೇಶನ ಪರಿಸರ, ಮುಂತಾದುವು ಗಳನ್ನು

ಅನುಸರಿಸಿ ಕೋಟೆಗಳ ರಚನೆಯಲ್ಲಿ ಕಾಲಾಂತರದಲ್ಲಿ ಅನೇಕ ಬದಲಾವಣೆ ಆಗಿರುವುದನ್ನು ಗುರುತಿಸಬಹುದು. ಕನ್ನಡ ನಾಡಿನ ರಾಜ ಮನೆತನಗಳ ಆಗು ಹೋಗುಗಳಲ್ಲಿ ಮಹತ್ತರ ಪಾತ್ರವನ್ನು ವಹಿಸಿದ ಈ ಕೋಟೆಗಳು ಅಂದಿನ ಶಕ್ತಿಯ ಸಾಧನೆಯ ಸಂಕೇತಗಳಾಗಿ ನಾನಾಕಡೆ ಚದುರಿನಿಂತಿವೆ.

೧. ಅಧ್ಯಯನದ ಅಗತ್ಯ : ಸೈನಿಕ ಕಾರ್ಯಾಚರಣೆ ದೃಷ್ಟಿಯಿಂದ ಆಯಕಟ್ಟಿನ ಪ್ರದೇಶವಾದ ಕೃಷ್ಣ-ತುಂಗಭದ್ರ ನದಿಗಳ ಮಧ್ಯದ ಫಲವತ್ತಾದ ಪ್ರದೇಶದ ಮಹತ್ವವನ್ನು ಕ್ರಿಸ್ತ ಪೂರ್ವ ಮೂರನೇ ಶತಮಾನದಷ್ಟು ಪೂರ್ವದಲ್ಲೆ ಗುರುತಿಸಲಾಗಿದೆ. ಇದು ಮೌರ್ಯರಿಂದ ಪ್ರಾರಂಭವಾಗಿ ಬಾದಾಮಿ ಚಾಲುಕ್ಯ, ಗಂಗ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಹೊಯ್ಸಳ ಕಲಚೂರಿ, ಯಾದವ, ವಿಜಯನಗರ, ಬಹಮನಿ, ಆದಿಲ್‌ಶಾಹಿ, ಹೀಗೆ ಅನೇಕ ಪ್ರಮುಖ ಅರಸು ಮನೆತನಗಳ ಮತ್ತು ಸಾಮಂತ ಮನೆತನಗಳ ಆಳ್ವಿಕೆಗೆ ಒಳಪಟ್ಟಿದೆ. ಈ ಪ್ರದೇಶದಲ್ಲಿ ಹನ್ನೊಂದನೇ ಶತಮಾನದಿಂದ ಇಪ್ಪತ್ತನೇ ಶತಮಾನದವರೆಗೆ ನಿರ್ಮಾಣಗೊಂಡ ಅನೇಕ ವೈವಿಧ್ಯಮಯವಾದ ಕೋಟೆಗಳಿವೆ. ಇವುಗಳಲ್ಲಿ ಕೆಲವು ಸ್ಥಲ ದುರ್ಗಗಳಾದರೆ, ಕೆಲವು ಗಿರಿದುರ್ಗಗಳು, ಒಂದು ಜಲದುರ್ಗವೂ ಇದೆ. ಕೆಲವು ಬೃಹದಾಕಾರ ದಲ್ಲಿದ್ದರೆ ಕೆಲವು ಬಹಳ ಚಿಕ್ಕವಾಗಿವೆ. ಕೆಲವನ್ನು ಅರಸರು, ಕೆಲವನ್ನು ಸಾಮಂತರು ಕಟ್ಟಿಸಿದರೆ ಹೆಚ್ಚಿನವುಗಳನ್ನು ಚಿಕ್ಕ ಸಂಸ್ಥಾನಿಕರು ಕಟ್ಟಿಸಿದ್ದಾರೆ. ಕೋಟೆಗೆ ಬಳಸಿದ ಕಲ್ಲುಗಳಲ್ಲೂ ವೈವಿಧ್ಯತೆಯಿದೆ. ಎರಡನ್ನು ಬಹಳ ದೊಡ್ಡ ಕಲ್ಲಿನಿಂದ, ಕೆಲವನ್ನು ಮಧ್ಯಮ ಗಾತ್ರದ ಕಲ್ಲಿನಿಂದ ಮತ್ತು ಏನೇಕ ಕೋಟೆಗಳನ್ನು ಚಿಕ್ಕ ಕಲ್ಲಿನಿಂದ ಕಟ್ಟಿದೆ. ಹಿಂದು ಅರಸರು ಹಿಂದು ಶೈಲಿಯಲ್ಲಿ ಕಟ್ಟಿಸಿದರೆ, ಮುಸ್ಲಿಮ್ ಅರಸರು ಮುಸ್ಲಿಮ್ ಶೈಲಿಯಲ್ಲಿ ಕಟ್ಟಿಸಿದ್ದಾರೆ. ಈ ಕೋಟೆಗಳ ಅಧ್ಯಯನಕ್ಕೆ ಉಪಯುಕ್ತ ಮಾಹಿತಿ ನೀಡುವ ನೂರಾರು ಶಾಸನಗಳು ಕೋಟೆಗಳ ಮೇಲಿವೆ. ಇಂತಹ ಮಹತ್ವಪೂರ್ಣವಾದ ಕೋಟೆಗಳ ಅಧ್ಯಯನವನ್ನು ಇಲ್ಲಿ ಮಾಡಲಾಗಿದೆ.

ರಾಜ್ಯದ ಪಟ್ಟಣದ ಮತ್ತು ನಗರದ ಜನತೆಯನ್ನು ಶತ್ರುಗಳಿಂದ ರಕ್ಷಿಸಿ, ತಲೆ ಎತ್ತಿ ನಿಲ್ಲುತ್ತಿದ್ದ ಕೋಟೆಗಳು ಬದಲಾದ ರಾಜಕೀಯ ಮತ್ತು ಯುದ್ಧ ನೀತಿಗಳಿಂದ ತಮ್ಮ ಮಹತ್ವವನ್ನು ಕಳೆದುಕೊಂಡು ಕೇವಲ ಗತವೈಭವದ ಕುರುಹುಗಳಾಗಿ ನಿಂತಿವೆ. ಗ್ರಾಮ, ನಗರ ಮತ್ತು ಪಟ್ಟಣಗಳು ಆಧುನಿಕ ಕಾಲದಲ್ಲಿ ಶೀಘ್ರವಾಗಿ ಬೆಳೆಯುತ್ತಿರುವುದರಿಂದ ಹೊಸ ಕಟ್ಟಡಗಳನ್ನು ಕಟ್ಟಲು ನಿವೇಶನಕ್ಕಾಗಿ ಕೋಟೆಗಳ ಸ್ಥಳಗಳನ್ನೇ ಬಳಸಲಾಗುತ್ತಿದೆ ಮತ್ತು ಬೀಳಿಸಿದ ಕೋಟೆಯ ಕಲ್ಲುಗಳಿಂದಲೆ ಮನೆಗಳ ನಿರ್ಮಾಣವಾಗುತ್ತಿದೆ. ಹೀಗಾಗಿ ಕೋಟೆಗಳು ದಿನೇ ದಿನೇ ಕ್ಷೀಣಿಸುತ್ತಿವೆ. ಕಣ್ಮರೆಯಾಗುವ ಮೊದಲು ಇವನ್ನು ದಾಖಲಿಸುವುದು ಅವಶ್ಯಕವಾಗಿದೆ.

೨. ಹಿಂದಿನ ಅಧ್ಯಯನ : ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳಲ್ಲಿಯ ಕೋಟೆಗಳಿಗೆ ಸಂಬಂಧಿಸಿದಂತೆ ಎಂಬತ್ತು ವರ್ಷಗಳ ಹಿಂದೆಯೇ ಅಧ್ಯಯನ ಪ್ರಾರಂಭವಾಗಿದೆ. ೧೯೧೫ರಲ್ಲಿ ರಾಯಚೂರಿಗೆ ಜಿಲ್ಲಾಧಿಕಾರಿಯಾಗಿ ಬಂದಿದ್ದ ಬಷೀರುದ್ದೀನ್ ಅಹ್ಮದ್ ಅವರು ಬಿಜಾಪುರದ ಆದಿಲ್ ಶಾಹಿ ಇತಿಹಾಸ ಕುರಿತು 'ವಾಕೀಯತ್-ಎ-ಮುಮಲಿಕತ್ ತಾರೀಕ್-ಎ-ಬಿಜಾಪುರ' ಎಂಬ ಉರ್ದು ಕೃತಿಯಲ್ಲಿ ರಾಯಚೂರು ಕೋಟೆಗೆ ಸಂಬಂಧ ಪಟ್ಟಂತಹ ಅರೇಬಿಕ್ ಪರ್ಶಿಯನ್ ಶಾಸನಗಳನ್ನು ಪ್ರಕಟಿಸಿದ್ದಾರೆ. ಅಲ್ಲದೆ ಕೋಟೆಯ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.[೧] ನಂತರ ೧೯೧೬ರಲ್ಲಿ ಅಲೆಕ್ಸಾಂಡರ್ ಪಿನೇ ಅವರು ಒಂದು ಲೇಖನದಲ್ಲಿ ಕೊಪ್ಪಳ ಕೋಟೆ ಹಾಗೂ ಅಲ್ಲಿಯ ಶಾಸನಗಳ ಬಗ್ಗೆ ವಿವರಿಸಿದ್ದಾರೆ. ಜೊತೆಗೆ ಬಹದ್ದೂರಬಂಡ ಕೋಟೆ ಹಾಗೂ ಅಲ್ಲಿಯ ಶಾಸನಗಳ ಬಗ್ಗೆ ಮಾಹಿತಿಯನ್ನು ಕೊಟ್ಟಿದ್ದಾರೆ.[೨] ೧೯೨೯-೩೦ರಲ್ಲಿ ಹೈದರಾಬಾದ್ ಪುರಾತತ್ವ ಇಲಾಖೆಯವರು ರಾಯಚೂರು ಕೋಟೆಯ ಬಗ್ಗೆ ಮಾಹಿತಿ ಒದಗಿಸಿದ್ದಾರೆ. ಅದರಲ್ಲಿ ನವರಂಗ ದರ್ವಾಜದ ಶಿಲ್ಪಗಳ ಬಗ್ಗೆ ಹಾಗೂ ರಾಯಚೂರಿನಲ್ಲಿರುವ ಹೆಚ್ಚಿನ ಶಾಸನಗಳನ್ನು ಪ್ರಕಟಿಸಿದ್ದಾರೆ. ಜೊತೆಗೆ ಕೋಟೆಯ ನಕಾಶೆಯನ್ನು ಚಿತ್ರಿಸಿದ್ದಾರೆ.[೩] ಮುಂದೆ ೧೯೩೦ರಲ್ಲಿ ರಾಮಶರ್ಮರು ಕುಮ್ಮಟದುರ್ಗದ ಬಗ್ಗೆ ಒಂದು ಲೇಖನ ಬರೆದಿದ್ದಾರೆ.[೪] ೧೯೩೫-೩೬ರಲ್ಲಿ ಪುನಃ ಹೈದರಾಬಾದ ಪುರಾತತ್ವ ಇಲಾಖೆಯವರು ಮುದುಗಲ್ಲು ಕೋಟೆಯ ಬಗ್ಗೆ ಸಂಕ್ಷಿಪ್ತ ವಿವರಣೆ ಕೊಟ್ಟಿದ್ದಾರೆ.[೫] ೧೯೫೭ರಲ್ಲಿ ಮತ್ತು ೧೯೬೫ರಲ್ಲಿ ಸಿಡ್ನಿ ಟಾಯ್ ಅವರು ಭಾರತದಲ್ಲಿನ ಕೆಲವು ಕೋಟೆಗಳ ಬಗ್ಗೆ ಅಧ್ಯಯನ ಮಾಡಿದ್ದಾರೆ. ಕ್ರಮವಾಗಿ 'ದಿ ಸ್ಟ್ರಾಂಗ್ ಹೋಲ್ಡ್ಸ್ ಆಫ್ ಇಂಡಿಯಾ' ಹಾಗೂ 'ದಿ ಫೋರ್ಟಿಫೈಡ್ ಸಿಟೀಸ್ ಆಫ್ ಇಂಡಿಯಾ' ಎರಡನೇ ಪುಸ್ತಕದಲ್ಲಿ ರಾಯಚೂರು ಕೋಟೆಯ ಬಗ್ಗೆ ಸಂಕ್ಷಿಪ್ತ ವಿವರಣೆ ಇದೆ. ಅದರಲ್ಲಿ ಕೋಟೆಯ ನಕಾಶೆ, ರಾಜವಾಡೆ ಹಾಗೂ ಒಂದು ಬಾಗಿಲಿನ ನಕಾಶೆಯನ್ನು ಪ್ರಕಟಿಸಿದ್ದಾರೆ.[೬] ಇವರು ಪ್ರಕಟಿಸಿದ ಕೋಟೆಯ ನಕಾಶೆ ೧೯೨೯-೩೦ರಲ್ಲಿ ಹೈದರಾಬಾದ್ ಪುರಾತತ್ವ ಇಲಾಖೆಯವರು ಪ್ರಕಟಿಸಿದ ನಕಾಶೆಗಳಿಗಿಂತ ಭಿನ್ನವಾಗಿದ್ದು, ದೋಷ ಪೂರಿತವಾಗಿದೆ. ಹಾಗೆ ೧೯೭೦ರಲ್ಲಿ ಪ್ರಕಟವಾದ ರಾಯಚೂರು ಗೆಝೆಟಿಯರ್‌ನಲ್ಲಿ ರಾಯಚೂರು ಕೊಪ್ಪಳ ಹಾಗೂ ಮುದುಗಲ್ಲು ಕೋಟೆಗಳ ಬಗ್ಗೆ ಸಂಕ್ಷಿಪ್ತ ಮಾಹಿತಿ ಒದಗಿಸಿದ್ದಾರೆ.[೭] ೧೯೮೫ರಲ್ಲಿ ಎಸ್.ಕೆ. ಜೋಶಿ ಅವರು ಮೊದಲ ಬಾರಿಗೆ ಕರ್ನಾಟಕ ಕೋಟೆಗಳ ಬಗ್ಗೆ ಅಧ್ಯಯನ ಮಾಡಿದ್ದು, ಅದರ ವ್ಯಾಪ್ತಿಯಲ್ಲಿ ರಾಯಚೂರು ಜಿಲ್ಲೆಯ ಕೋಟೆಗಳು ಬರುವುದಿಲ್ಲ. ಆದರೆ ಅವರು ಇತರ ಕೋಟೆಗಳ ಬಗ್ಗೆ ಅಧ್ಯಯನ ಮಾಡುವಾಗ ರಾಯಚೂರು ಕೋಟೆಯನ್ನು ಹೋಲಿಸಿಕೊಂಡು ಅಧ್ಯಯನ ಮಾಡಿದ್ದಾರೆ.[೮] ೧೯೮೫ರಲ್ಲಿ ವರದರಾಜರಾವ್ ಅವರು 'ಕುಮ್ಮಟ ದುರ್ಗ

ಎಂಬ ಕಿರು ಹೊತ್ತಿಗೆಯನ್ನು ಪ್ರಕಟಿಸಿದ್ದಾರೆ.[೧೦] ಅದರಲ್ಲಿ ಇಡೀ ಕೋಟೆಯ ಬಗ್ಗೆ ಪೂರ್ಣ ಮಾಹಿತಿ ಇಲ್ಲ. ೧೯೮೦ರ ದಶಕದಲ್ಲಿ ಸುಗಂಧ ಅವರು 'ಹಿಸ್ಟರಿ ಅಂಡ್ ಆರ್ಕಿಯಾಲೊಜಿ ಆಫ್ ಆನೆಗೊಂದಿ' ಎಂಬ ವಿಷಯದಲ್ಲಿ ಮಹಾ ಪ್ರಬಂಧ ಬರೆದಿದ್ದು ಅದರಲ್ಲಿ ಆನೆಗೊಂದಿ ಕೋಟೆಯ ಬಗ್ಗೆ ವಿವರವಾದ ಅಧ್ಯಯನ ಮಾಡಿದ್ದಾರೆ.[೧೧] ೧೯೮೭-೮೮ರಲ್ಲಿ 'ವಿಜಯನಗರ : ಪ್ರೊಗ್ರೆಸ್ ಆಫ್‌ರಿಸರ್ಚ್' ಎಂಬ ಕೃತಿಯಲ್ಲಿ ಚನ್ನಬಸಪ್ಪ ಪಾಟೀಲರು ಕುಮ್ಮಟದುರ್ಗದ ವಿವರವಾದ ಅಧ್ಯಯನ ಮಾಡಿದ್ದಾರೆ.[೧೨] ಹಾಗೆ ೧೯೯೦-೯೧ರಲ್ಲಿ ಪುನಃ 'ವಿಜಯನಗರ : ಪ್ರೊಗ್ರೆಸ್ ಆಫ್ ರಿಸರ್ಚ್' ಕೃತಿಯಲ್ಲಿ ಚನ್ನಬಸಪ್ಪ ಪಾಟೀಲರು ಮುದುಗಲ್ಲು ಕೋಟೆಯ ಬಗ್ಗೆ ಒಂದು ಲೇಖನವನ್ನು ಬರೆದಿದ್ದು, ಅದು ತುಂಬಾ ಮಾಹಿತಿಗಳನ್ನು ಒಳಗೊಂಡಿದೆ.[೧೩] ಕೋಟೆಯ ಶಾಸನಗಳ ವಿಶ್ಲೇಷಣೆಗೆ ಹೆಚ್ಚು ಮಹತ್ವ ಕೊಟ್ಟು ಕೋಟೆಯ ವಾಸ್ತುವಿನ ವಿವರಗಳನ್ನು ಸಂಕ್ಷಿಪ್ತವಾಗಿ ಕೊಟ್ಟಿದ್ದಾರೆ. ೧೯೯೩-೯೪ರಲ್ಲಿ ದಿಕ್ಸೂಚಿ ಮಾಸ ಪತ್ರಿಕೆಯಲ್ಲಿ ಚನ್ನಬಸಪ್ಪ ಪಾಟೀಲರು ರಾಯಚೂರು, ಕೊಪ್ಪಳ ಜಿಲ್ಲೆಗಳಿಗೆ ಸಂಬಂಧಪಟ್ಟ ರಾಯಚೂರು, ಕುಮ್ಮಟ, ಮುದುಗಲ್ಲು ಕೋಟೆಗಳ ಬಗ್ಗೆ ಚಿಕ್ಕ ಚಿಕ್ಕ ಲೇಖನಗಳನ್ನು ಬರೆದಿದ್ದಾರೆ.[೧೪] ಅಲ್ಲದೆ ರಾಯಚೂರು ಉತ್ಸವ ಸವಿ ಸಂಚಿಕೆಯಲ್ಲಿ ರಾಯಚೂರು, ಕೊಪ್ಪಳ ಜಿಲ್ಲೆಗಳಿಗೆ ಸಂಬಂಧಪಟ್ಟ ಕೋಟೆಗಳ ಬಗ್ಗೆ ಲೇಖನ ಬರೆದಿದ್ದಾರೆ.[೧೫] ೧೯೯೫ರಲ್ಲಿ ಶರಣಬಸಪ್ಪ ಕೊಲ್ಕರ್ ಅವರು ತಮ್ಮ M. Phil. ಅಧ್ಯಯನ ವಿಷಯವಾದ 'ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿ ಶಿಲ್ಪಗಳು' ಎಂಬ ಪ್ರಬಂಧದಲ್ಲಿ ಕನಕಗಿರಿ ಕೋಟೆಯ ಬಗ್ಗೆ ಕೆಲವು ವಿವರಗಳನ್ನು ಕೊಟ್ಟಿದ್ದಾರೆ.[೧೬] ನಂತರ ೧೯೯೭ರಲ್ಲಿ ರಡ್ಡೆಪ್ಪ ಅವರು ತಮ್ಮ M.Phil. ಅಧ್ಯಯನಕ್ಕಾಗಿ 'ರಾಯಚೂರು ಕೋಟೆ' ಎಂಬ ಪ್ರಬಂಧದಲ್ಲಿ ರಾಯಚೂರು ಕೋಟೆಯ ರಾಜಕೀಯ ಇತಿಹಾಸವನ್ನೇ ಪ್ರಧಾನವಾಗಿಟ್ಟುಕೊಂಡು ಕೋಟೆಯ ವಾಸ್ತು ವಿವರಣೆಗೆ ಹೆಚ್ಚಿನ ಮಹತ್ವವನ್ನು ಕೊಟ್ಟಿಲ್ಲ.[೧೭] ನಂತರ ೧೯೯೮ರಲ್ಲಿ ಸುಗುಣ ಶರ್ಮ ಅವರು 'ಹಿಸ್ಟರಿ ಅಂಡ್ ಆಂಟಿಕ್ಯೂಟಿಸ್ ಆಫ್ ರಾಯಚೂರು ಫೋರ್ಟ್' ಎಂಬ ಪುಸ್ತಕದಲ್ಲಿ ರಾಯಚೂರು ಕೋಟೆಯ ಬಗ್ಗೆ ಸಂಕ್ಷಿಪ್ತ ಮಾಹಿತಿ ಕೊಟ್ಟಿದ್ದಾರೆ.[೧೮] ಹೈದರಾಬಾದ್ ಪುರಾತತ್ವ ಇಲಾಖೆಯ ವರದಿಯ ಪುನರಾವರ್ತನೆಯಾಗಿದೆ. ಅಲ್ಲದೆ ಕೋಟೆಗೆ ಸಂಬಂಧಿಸಿದ ಅನೇಕ ಶಾಸನಗಳನ್ನು ಪರಿಗಣಿಸಿಲ್ಲ. ೧೯೯೮ರಲ್ಲಿ ಬಿ.ಸಿ. ಪಾಟೀಲರು 'ಕೊಪ್ಪಳ : ಸಾಂಸ್ಕೃತಿಕ ಪರಂಪರೆ' ಎಂಬ ಪುಸ್ತಕದಲ್ಲಿ ಕೊಪ್ಪಳ ಕೋಟೆಯ ಬಗ್ಗೆ ಸಂಕ್ಷಿಪ್ತ ಮಾಹಿತಿಯನ್ನು ಒದಗಿಸಿದ್ದಾರೆ.[೧೯] ನಂತರ ೨೦೦೦ರಲ್ಲಿ ಚನ್ನಬಸಪ್ಪ ಪಾಟೀಲರು 'ಕರ್ನಾಟಕ ಕೋಟೆಗಳು' ಎಂಬ ಕೃತಿಯಲ್ಲಿ ಕೊಪ್ಪಳ, ಆನೆಗೊಂದಿ, ಕುಮ್ಮಟ್ಟದುರ್ಗ, ರಾಯಚೂರು, ಮುದುಗಲ್ಲು ಕೋಟೆಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು

ಕೊಟ್ಟಿದ್ದಾರೆ.[೨೦] ಅಲ್ಲದೆ ಇತರೇ ದಿನಪತ್ರಿಕೆಗಳಲ್ಲಿ ರಾಯಚೂರು ಕೊಪ್ಪಳ ಜಿಲ್ಲೆಗಳಿಗೆ ಸಂಬಂಧಪಟ್ಟ ಕೋಟೆಗಳ ಬಗ್ಗೆ ಲೇಖನಗಳು ಬಂದಿವೆ.

೩. ಪ್ರಸ್ತುತ ಅಧ್ಯಯನ : ಒಂದೆ ಕೆಲವು ಕೋಟೆಗಳ ಬಗ್ಗೆ ಮಾತ್ರ ಅಧ್ಯಯನ ಮಾಡಲಾಗಿದೆ. ಈ ಭಾಗದ ಇತರ ಅನೇಕ ಕೋಟೆಗಳ ಬಗ್ಗೆ ಅಧ್ಯಯನ ನಡೆದಿಲ್ಲ. ಅದಕ್ಕಾಗಿ ಇಲ್ಲಿ ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಬರುವಂತಹ, ಈಗಲೂ ಅಳಿದುಳಿದಿರುವಂತಹ, ಹನ್ನೊಂದರಿಂದ ಇಪ್ಪತ್ತನೇ ಶತಮಾನಗಳ ಕಾಲಮಾನದ, ಹೊಂದಿರುವ ವಿಶಾಲವಾದ ಮತ್ತು ಚಿಕ್ಕ ನಾಲ್ವತ್ತು ಕೋಟೆಗಳ ಬಗ್ಗೆ ವಿವರವಾದ ಅಧ್ಯಯನ ನಡೆಸಲಾಗಿದೆ. ಈ ಭಾಗದ ಅಧ್ಯಯನದ ಪ್ರಮುಖವಾದಂತಹ ಕೋಟೆಗಳೆಂದರೆ ರಾಯಚೂರು, ಮಲಿಯಾಬಾದ್, ಆನೆಗೊಂದಿ, ಕುಮ್ಮಟ, ಕೊಪ್ಪಳ, ಹಾಗೂ ಇತರೆ ಮೂವತ್ತೈದು ವಿವಿಧ ಗಾತ್ರದ ಚಿಕ್ಕ ಕೋಟೆಗಳಾಗಿವೆ.

ಈ ಅಧ್ಯಯನವು ಮುಖ್ಯವಾಗಿ ಕ್ಷೇತ್ರಕಾರ್ಯವನ್ನು ಅವಲಂಬಿಸಿದೆ. ಕ್ಷೇತ್ರ ಕಾರ್ಯದಲ್ಲಿ ಗೋಡೆ, ಕೊತ್ತಳ, ಬಾಗಿಲು, ದಿಡ್ಡಿ ಬಾಗಿಲು, ತೆನೆ, ಕಾವಲುಗೋಪುರ, ಕಾವಲುಗಾರರ ಮನೆ, ಮದ್ದಿನ ಮನೆ, ಉಗ್ರಾಣ, ಕೊಳ, ಬಾವಿ, ಇತ್ಯಾದಿ ವಿವರಗಳನ್ನು ಸಂಗ್ರಹಿಸಿ ಅವುಗಳ ಛಾಯಾಚಿತ್ರಗಳನ್ನು ತೆಗೆದುದಲ್ಲದೆ ನಕಾಶೆಗಳನ್ನು ತಯಾರಿಸಿದೆ.

ಕೋಟೆಗಳನ್ನು ಕಾಲಮಾನದ ಚೌಕಟ್ಟಿನಲ್ಲಿ ಅಳವಡಿಸಲು ಕೋಟೆಗಳ ವಾಸ್ತು ವಿನ್ಯಾಸ, ಶಾಸನಗಳನ್ನು ನೀಡುವ ಮಾಹಿತಿ ಮತ್ತು ಐತಿಹಾಸಿಕ ಘಟನೆಗಳನ್ನು ಪರಿಗಣಿಸಲಾಗಿದೆ. ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಯ ಕೋಟೆಗಳಿಗೆ ಸಂಬಂಧಪಟ್ಟ ಅನೇಕ ಶಾಸನಗಳು ವಿವಿಧವರದಿ ಮತ್ತು ಗ್ರಂಥಗಳಲ್ಲಿ ಪ್ರಕಟವಾಗಿವೆ. 'ಇಂಡಿಯನ್ ಆಂಟಿಕ್ವೆರಿ'[೨೧] 'ಎಪಿಗ್ರಾಫಿ ಇಂಡಿಕಾ'[೨೨] 'ಎಪಿಗ್ರಾಫಿಯಾ ಇಂಡೋ ಮುಸ್ಲಾಮಿಕ್'[೨೩] 'ಎಪಿಗ್ರಾಫಿಯಾ ಇಂಡಿಕಾ ಅರೇಬಿಕ್ ಅಂಡ್ ಪರ್ಶಿಯನ್ ಸಪ್ಲಿಮೆಂಟ್'[೨೪]ಗಳಲ್ಲಿ ಶಾಸನಗಳ ಪಾಠ ಮತ್ತು ಇಂಗ್ಲೀಷ್ ಭಾಷಾಂತರವಿದೆ. ಹಾಗೆ 'ಹೈದರಾಬಾದ್ ಆರ್ಕಿಯಾಲಾಜಿಕಲ್ ಸಿರೀಸ್'[೨೫] 'ಆಂದ್ರಪ್ರದೇಶ ಗವರ್ನಮಿಂಟ್ ಆರ್ಕಿಯಾಲಾಜಿಕಲ್ ಸಿರೀಸ್'[೨೬] 'ಶಾಸನ ಪರಿಚಯ'[೨೭] 'ಕೊಪ್ಪಳ ಜಿಲ್ಲೆಯ ಶಾಸನಗಳು'[೨೮] ಇವುಗಳಲ್ಲಿ ಶಾಸನ ಪಾಠ ಮತ್ತು ಸಾರಾಂಶಗಳನ್ನು ಕೊಡಲಾಗಿದೆ. 'ಇನ್ಸ್‌ಕ್ರಿಪ್‌ಶನ್ಸ್ ಆಫ್ ರಾಯಚೂರು ಡಿಸ್ಟ್ರಿಕ್ಟ್'[೨೯] ಮತ್ತು 'ಇನ್ಸ್‌ಕ್ರಿಪ್‌ಶನ್ಸ್ ಆಫ್ ಕೊಪ್ಪಳ ಡಿಸ್ಟ್ರಿಕ್ಟ್'[೩೦] ಮತ್ತು 'ಆ್ಯನುವಲ್ ರಿಪೋರ್ಟ್ ಆನ್ ಇಂಡಿಯನ್ ಎಪಿಗ್ರಾಫಿ'[೩೧]ಗಳಲ್ಲಿ ಶಾಸನಗಳ ಸಾರಾಂಶಗಳನ್ನು ಕೊಡಲಾಗಿದೆ.

೪. ಭೂಗೋಳ : ಭಾರತದ ಒಕ್ಕೂಟದಲ್ಲಿ ಕರ್ನಾಟಕವು ಪ್ರಮುಖ ರಾಜ್ಯವಾಗಿದೆ. ಇದು ಭಾರತದ ದಕ್ಷಿಣ ಭಾಗಕ್ಕಿದೆ. ಇದು ಅಕ್ಷಾಂಶ ೧೧° ೪೦' ಮಧ್ಯ ೧೮° ೨೫' ಉತ್ತರ ಮಧ್ಯದಲ್ಲಿ ರೇಖಾಂಶ ೭೪° ೫'ರ ಮತ್ತು ೭೮° ೩೫' ಪೂರ್ವಮಧ್ಯದಲ್ಲಿ ಇದೆ. ಇದರಲ್ಲಿ ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳು ಅಕ್ಕಪಕ್ಕದ ಜಿಲ್ಲೆಗಳಾಗಿದ್ದು, ಈ ಎರಡು ಜಿಲ್ಲೆಗಳು ಕರ್ನಾಟಕದ ಈಶಾನ್ಯ ಭಾಗಕ್ಕಿವೆ. ರಾಯಚೂರು ೧೬° ೧೨' ಉತ್ತರ ಅಕ್ಷಾಂಶ ಮತ್ತು ೭೭° ೨೧' ಪೂರ್ವ ರೇಖಾಂಶದಲ್ಲಿದೆ. ಕೊಪ್ಪಳವು ೧೬° ೧' ಉತ್ತರ ಅಕ್ಷಾಂಶ ಮತ್ತು ೭೬° ೨೯' ಪೂರ್ವ ರೇಖಾಂಶದಲ್ಲಿದೆ.

ಈ ಎರಡು ಜಿಲ್ಲೆಗಳನ್ನು ಉತ್ತರಕ್ಕೆ ಗುಲಬರ್ಗಾ ಜಿಲ್ಲೆ, ಪಶ್ಚಿಮಕ್ಕೆ ಧಾರವಾಡ ಮತ್ತು ಬಿಜಾಪುರ ಜಿಲ್ಲೆಗಳು, ಪೂರ್ವಕ್ಕೆ ಆಂದ್ರಪ್ರದೇಶದ ಮೆಹಬೂಬನಗರ ಜಿಲ್ಲೆ, ದಕ್ಷಿಣಕ್ಕೆ ಬಳ್ಳಾರಿ ಜಿಲ್ಲೆ, ಹಾಗೂ ಆಂದ್ರಪ್ರದೇಶದ ಕರ್ನೂಲು ಜಿಲ್ಲೆ ಸುತ್ತುವರೆದಿವೆ. ಈ ಎರಡು ಜಿಲ್ಲೆಗಳ ಪ್ರಮುಖವಾಗಿ ಕೃಷ್ಣ ಹಾಗೂ ತುಂಗಭದ್ರ ನದಿಗಳು ಹರಿಯುತ್ತಿವೆ. ಕೃಷ್ಣ ನದಿಯು ಪಶ್ಚಿಮದಿಂದ ಪೂರ್ವಕ್ಕೆ ಉತ್ತರ ಗಡಿಯಲ್ಲಿ ಹರಿಯುತ್ತಿದೆ. ಹಾಗೆ ತುಂಗಭದ್ರ ನದಿಯು ದಕ್ಷಿಣ ಭಾಗದಲ್ಲಿ ನೈರುತ್ಯದಿಂದ ಈಶಾನ್ಯಕ್ಕೆ ಹರಿದು, ಸುಮಾರಾಗಿ ಅದು ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳ ನಡುವಿನ ಮೇರೆಯಾಗಿದೆ. ಈ ಭಾಗದ ಪ್ರಮುಖವಾದ ಹಳ್ಳಗಳೆಂದರೆ ಕೊಪ್ಪಳದ ಹತ್ತಿರ ಹರಿಯುವ ಹಳ್ಳ ಹಾಗೂ ಮಸ್ಕಿಯ ಸಮೀಪ ಹರಿಯುವ ಹಳ್ಳ.

ರಾಯಚೂರು ಜಿಲ್ಲೆಯು ಒಟ್ಟು ಐದು ತಾಲೂಕುಗಳನ್ನು ಒಳಗೊಂಡಿದೆ. ಅವುಗಳೆಂದರೆ, ರಾಯಚೂರು, ದೇವದುರ್ಗ, ಮಾನ್ವಿ, ಲಿಂಗಸುಗೂರು, ಸಿಂಧನೂರು, ಮತ್ತು ಕೊಪ್ಪಳ ಜಿಲ್ಲೆಯಲ್ಲಿ ಗಂಗಾವತಿ, ಕುಷ್ಟಗಿ, ಯಲಬುರ್ಗ, ಮತ್ತು ಕೊಪ್ಪಳ ತಾಲೂಕು ಕೇಂದ್ರಗಳಾಗಿವೆ.

**ಸಸ್ಯ ಮತ್ತು ಪ್ರಾಣಿ :** ಈ ಭಾಗದಲ್ಲಿ ಅರಣ್ಯ ಪ್ರದೇಶವು ೧೦,೩೯,೯೭೬ ಹೆಕ್ಟರ್‌ಗಳಷ್ಟು ವಿಸ್ತಾರವಾಗಿದೆ. ಈ ಅರಣ್ಯಪ್ರದೇಶದಲ್ಲಿ ಜಾವಾರಿ, ಹೊನ್ನೆ, ಅಳಲೆ, ಹುಣಸೆ, ಬಾಗಿ, ಮರಡಿ, ಸೀತಾಫಲ, ಬೇವು, ಇತ್ಯಾದಿ ಮರಗಿಡಗಳನ್ನು ಕಾಣಬಹುದು. ವನ್ಯ ಪ್ರಾಣಿಗಳಲ್ಲಿ ಮುಖ್ಯವಾಗಿ ಬ್ಲಾಕ್‌ಬಕ್ ಜಿಂಕೆಗಳು ಚಿಕ್ಕ ಚಿಕ್ಕ ಹಿಂಡುಗಳಲ್ಲಿ ಇರುತ್ತಿದ್ದುದು ಕಂಡು ಬರುತ್ತಿತು. ಈಗ ಇವು ವಿರಳವಾಗಿವೆ. ನರಿ, ತೋಳ, ಮಂಗಗಳು, ಮೊಲಗಳು, ಹಂದಿಗಳು, ಇಲ್ಲಿಯ ಇತರ ಕಾಡು ಪ್ರಾಣಿಗಳಾಗಿವೆ.




೧. ಕರ್ನಾಟಕ ರಾಜ್ಯದ ನಕಾಶೆ

೧. ಬೀದರ, ೨. ಗುಲಬರ್ಗಾ, ೩. ಬಿಜಾಪುರ, ೪. ರಾಯಚೂರು, ೫. ಕೊಪ್ಪಳ, ೬. ಬಾಗಲಕೋಟೆ, ೭. ಬೆಳಗಾವಿ, ೮. ಧಾರವಾಡ, ೯. ಗದಗ, ೧೦. ಉತ್ತರ ಕನ್ನಡ, ೧೧. ಹಾವೇರಿ, ೧೨. ಬಳ್ಳಾರಿ, ೧೩. ದಾವಣಗೆರೆ, ೧೪. ಶಿವಮೊಗ್ಗ, ೧೫. ಉಡುಪಿ, ೧೬. ಚಿಕ್ಕಮಗಳೂರು, ೧೭. ಚಿತ್ರದುರ್ಗ, ೧೮. ದಕ್ಷಿಣ ಕನ್ನಡ, ೧೯. ಹಾಸನ, ೨೦. ತುಮಕೂರು, ೨೧. ಕೋಲಾರ, ೨೨. ಬೆಂಗಳೂರು, ೨೩. ಮಂಡ್ಯ, ೨೪. ಮೈಸೂರು, ೨೫. ಕೊಡಗು, ೨೬. ಚಾಮರಾಜನಗರ.




೨. ರಾಯಚೂರು ಜಿಲ್ಲೆಯ ಕೋಟೆಗಳು

೧. ರಾಯಚೂರು, ೨. ಮಲಿಯಾಬಾದ, ೩. ದೇವದುರ್ಗ, ೪. ಗಬ್ಬೂರು, ೫. ರಾಮದುರ್ಗ, ೬. ಕಲ್ಲೂರು, ೭. ಮಾನ್ವಿ, ೮. ಮಲ್ಲಟ, ೯. ಕೋಟೆಕಲ್ಲು, ೧೦. ಕುರುಕುಂದ, ೧೧. ಗೋಲಪಲ್ಲಿ, ೧೨. ಗುಡಗುಂಟಿ, ೧೩. ಕೋಠಾ, ೧೪. ಹೊನ್ನಹಳ್ಳಿ, ೧೫. ಜಲದುರ್ಗ, ೧೬. ಹಾಲಬಾವಿ, ೧೭. ಮುದುಗಲ್ಲು, ೧೮. ಕಲಮಂಗಿ, ೧೯. ರೌಡಕುಂದ, ೨೦. ಮುಕ್ಕುಂದ.

೫. **ಭೂ-ವಿಜ್ಞಾನ** : ಭೂ ವೈಜ್ಞಾನಿಕವಾಗಿ ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳು ದಕ್ಷಿಣ ಪೀಠಭೂಮಿಯ ಒಂದು ಭಾಗವಾಗಿವೆ. ಇಲ್ಲಿಯ ಶಿಲೆಗಳು ಪ್ರಪಂಚದ ಪ್ರಾಚೀನ ಶಿಲೆಗಳಲ್ಲಿ ಪರಿಗಣಿಸಲ್ಪಡುತ್ತವೆ.

ಶಿಲೆಗಳು : ಮುಖ್ಯವಾಗಿ ಐದು ವಿವಿಧ ಮಾದರಿಯ ಕಲ್ಲುಗಳು ಈ ಭಾಗವನ್ನು ಆವರಿಸಿಕೊಂಡಿವೆ.

(i) ಧಾರವಾಡ ಪದರು ಶಿಲೆ

(ii) ಪೆನಿನ್‌ಸುಲಾರ್ ಸಂಕೀರ್ಣ

(iii) ಸಾಲೋರೈಟ್ ಡೈಕ್

(iv) ಕಲಾದಗಿ ಶ್ರೇಣಿ

(v) ವಿವಿಧ ಮಣ್ಣುಗಳು

**(i) ಧಾರವಾಡ ಪದರ ಶಿಲೆ :** ಈ ಪದರು ಶಿಲೆಗಳುನ್ನು ಮೂರು ಭಾಗಗಳನ್ನಾಗಿ ವಿಂಗಡಿಸಲಾಗಿದೆ :

(i) ಕುಷ್ಟಗಿಶ್ರೇಣಿ, (ii) ಮಸ್ಕಿ ಶ್ರೇಣಿ, ಮತ್ತು (iii) ರಾಯಚೂರು ಶ್ರೇಣಿ, ಈ ಕಲ್ಲುಗಳು ತಿಮ್ಮಾಪುರ, ವಲಕ್ಕಂದಿನ್ನಿ, ಗಂಗಾವತಿಯಲ್ಲಿವೆ.

**(ii) ಪೆನಿನ್‌ಸುಲಾರ್ ಸಂಕೀರ್ಣ :** ಈ ಪ್ರದೇಶದ ಉತ್ತರ ಹಾಗೂ ದಕ್ಷಿಣ ಭಾಗದಲ್ಲಿ ಗುಲಾಬಿ ಬಣ್ಣದ ಕಲ್ಲುಗಳಿವೆ. ಮಧ್ಯಭಾಗದಲ್ಲಿ ಬೂದು ಬಣ್ಣದ ಕಲ್ಲುಗಳಿವೆ.

**(iii) ಸಾಲೊರೈಟ ಡೈಕ್ :** ಈ ಪ್ರದೇಶದ ಪೂರ್ವ ಭಾಗದ ಗಂಗಾವತಿ, ಲಿಂಗಸುಗೂರು ಮತ್ತು ರಾಯಚೂರು ತಾಲೂಕುಗಳಲ್ಲಿ ಈ ಡೈಕನ್ನು ಕಾಣಬಹುದಾಗಿದೆ.

**(iv) ಕಲಾದಗಿ ಶ್ರೇಣಿ :** ಹನಮಸಾಗರ (ಕುಷ್ಟಗಿ ತಾಲೂಕು)ದ ಸುತ್ತ ಮುತ್ತಲ ಪ್ರದೇಶದಲ್ಲಿ ಕಡಿಮೆ ವಿಸ್ತೀರ್ಣದ ಕಲಾದಗಿ ಶ್ರೇಣಿಗಳು ಇವೆ. ಉಳಿದ ಭಾಗದಲ್ಲಿ ಆರ್ಕಿಯನ್ ಯುಗಕ್ಕೆ ಸೇರಿದ ಶಿಲೆಗಳು ಹರಡಿ ಕೊಂಡಿವೆ.

**(v) ಮಣ್ಣಿನ ವಿಧಗಳು :** ಗಂಗಾವತಿ, ಕುಷ್ಟಗಿ, ಮುದುಗಲು, ಜಾಲಹಳ್ಳಿ ಮತ್ತು ಸಿರವಾರಗಳಲ್ಲಿ ಹೆಚ್ಚಾಗಿ ಕೆಂಪು ಮಣ್ಣು ಸಿಗುವದು. ಚಿಕ್ಕ ಹೆಸರೂರು ಮತ್ತು ಇತರ ಪಕ್ಕದ ಊರುಗಳಲ್ಲಿ ಕಂದು ಮಿಶ್ರಿತ ಮಣ್ಣು ಕಂಡು ಬರುವುದು. ಒಟ್ಟಾಗಿ ಈ ಎರಡು ಜಿಲ್ಲೆಗಳ ಬಹುಮುಖ ಭಾಗವನ್ನು ಕಪ್ಪು ಮಿಶ್ರಿತ ಮಣ್ಣು ಆವರಿಸಿದೆ.

**ಖನಿಜಗಳು : ಚಿನ್ನ :-** ಕನ್ನಡ ನಾಡನ್ನು ಚಿನ್ನದ ನಾಡೆಂದು ಕರೆಯುವ ಮಾತು ಕೇವಲ ಕನ್ನಡ ಒಲಮೆಯನ್ನು ಎತ್ತಿ ತೋರುಸುವುದಕ್ಕಲ್ಲ. ಭಾರತದಲ್ಲಿ ಇರುವ ಎರಡು ಚಿನ್ನದ ಗಣಿಗಳು ಕರ್ನಾಟಕದಲ್ಲಿವೆ. ಅವುಗಳಲ್ಲಿ ಕೋಲಾರ ಒಂದು, ಇನ್ನೊಂದು ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲೂಕಿನ ಹಟ್ಟಿಯಲ್ಲಿದೆ. ಒಂದೆ ಹಟ್ಟಿ, ವಂದಲಿ, ಮಸ್ಕಿಯ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಪುರಾತನ ಚಿನ್ನದ ಗಣಿಗಳು ಇದ್ದವೆಂದು ಹೇಳಲಾಗಿದೆ.

**ತಾಮ್ರ :** ತಾಮ್ರವು ಯಾವುದೇ ದೇಶದ ಔದ್ಯಮಿಕ ಪ್ರಗತಿಗಾಗಿ ಅತ್ಯವಶ್ಯಕ ಧಾತುವಾಗಿದೆ. ಮಾನ್ವಿ ತಾಲೂಕಿನ ವಟಗಲ್, ಕಲ್ಲೂರ ಮತ್ತು ಲಿಂಗಸುಗೂರು ತಾಲೂಕಿನ ಮಾಚನೂರಿನಲ್ಲಿ ಈ ತಾಮ್ರದ ನಿಕ್ಷೇಪಗಳಿವೆ.

**ಕಬ್ಬಿಣದ ಅದಿರು :** ಮಧ್ಯಮ ಹಾಗೂ ಕೆಳ ದರ್ಜೆಯ ಕಬ್ಬಿಣದ ಅದಿರುಗಳು ಹೆಚ್ಚಾಗಿ ಕುಷ್ಟಗಿ ಶಿಲಾ ಶ್ರೇಣಿಯ ಜಾಜದಗುಡ್ಡ, ನಂದಿಹಳ್ಳಿ, ಕಲ್ಮಂಗಿಯಲ್ಲಿವೆ.

**ಬೆಣಚು ಕಲ್ಲು :** ಇದು ಗಾಜಿನ ತಯಾರಿಕೆಗೆ ಬೇಕಾದ ಒಂದೇ ಒಂದು ಕಚ್ಚಾವಸ್ತು. ಕುಷ್ಟಗಿ ತಾಲೂಕಿನ ತಾವರೆಗೆರೆಯಲ್ಲಿ ಈ ನಿಕ್ಷೇಪ ಇದೆ. ಕೊಪ್ಪಳ ತಾಲೂಕಿನ ಅಲ್ಲ ನಗರದಲ್ಲಿ, ರಾಯಚೂರು ತಾಲೂಕಿನ ಸಿದ್ದರಾಮಪುರದಲ್ಲಿ ಈ ನಿಕ್ಷೇಪಗಳಿವೆ.

ಹೀಗೆ ಕೃಷ್ಣ ಹಾಗೂ ತುಂಗಭದ್ರ ನದಿಗಳೆರಡು ಮೈದಳೆದ ಈ ಭಾಗವು ನೈಸರ್ಗಿಕ ಸಂಪನ್ಮೂಲಗಳ ಲಭ್ಯತೆಯಿಂದ ರಾಜ್ಯದಲ್ಲಿ ಪ್ರಮುಖ ಭಾಗವೆನಿಸಿಕೊಂಡಿದೆ.

**ಟಿಪ್ಪಣಿಗಳು**

೧. ಚಿದನಂದಮೂರ್ತಿ ಎಂ., *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಪು. ೨೪೫.

೨. ಅಹ್ಮದ್ ಬಷೀರುದ್ದೀನ್, *೧೯೧೫ ವಾಕೀಯತ್-ಎ-ಮುಮಲಿಕತ್-ತಾರೀಕ್-ಎ-ಬಿಜಾಪುರ ೧೯೧೫.*

೩. Pinhey Alexander F., 1961, *"Koppal Town and Fort," JHAS*, pp. 92-99.

೪. *ARADND*, 1929-30, pp. 6-19.

೫. Sharma Rama, 1930, *Vestiges of Kummata, QJMS* Vol. xx. No. 4 Bangalore, pp. 261-70.

೬. *ARADND,* 1935-36, pp. 25-27.

೭. Toy Sidney, 1957-1965, *The strongholds of India;The fortified cities of India* London, pp.10-15.

೮. *Raichur District Gazatter,* pp. 703, 704, 709, 710, 712-716,

೯. Joshi S.K. ,1985, *Defence Architecture in Early Karnataka* Delhi,

೧೦. ವರದರಾಜ್‌ರಾವ್ ಜಿ, ೧೯೮೫, *ಕುಮ್ಮಟದುರ್ಗ,* ಬೆಂಗಳೂರು.

೧೧. Sugandha, *Archaecology of Anegondi,* unpublished thesis submitted to the Univarsity of Poona.

೧೨. Patil Channabasappa S.1991, "Kummata," *Vijayanagar : Progress of Research 1987-88* (Eds) D.V. Devaraj and Channabasappa S. Patil, Mysore, pp. 199-216.

೧೩. Patil Channabasappa S., 1996, "Mudugal Fort and its bearing onVijayanagar defence system at Vijayanagar", *Vijayanagar : progress of Research 1988-91,* (Eds) D.V. Devaraj and Channabasappa S. Patil, Mysore, pp.197-211.

೧೪. ಪಾಟೀಲ ಚನ್ನಬಸಪ್ಪ ಎಸ್., ೧೯೯೩-೧೯೯೫, "ಮಾತನಾಡುವ ಕೋಟೆಗಳು *ದಿಕ್ಸೂಚಿ ಮಾಸಪತ್ರಿಕೆ,* ಜುಲೈ ೧೯೯೩ ರಿಂದ ಜೂನ್ ೧೯೯೫, ವರೆಗಿನ ಸಂಚಿಕೆಗಳು, ಬೆಂಗಳೂರು.

೧೫. ಪಾಟೀಲ ಚನ್ನಬಸಪ್ಪ ಎಸ್., ೧೯೯೪, "ರಾಯಚೂರು ಜಿಲ್ಲೆಯ ಕೋಟೆಗಳು," *ಎಡೆದೊರೆನಾಡು ಉತ್ಸವ ಸ್ಮರಣ ಸಂಚಿಕೆ ರಾಯಚೂರು,* ಪು. ೧. ೧-೧. ೧೧.

೧೬. ಕೊಲ್ಕರ್ ಶರಣಬಸಪ್ಪ, ೧೯೯೪, "ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿ ಶಿಲ್ಪಗಳು" M. Phil. ಅಧ್ಯಯನಕ್ಕೆ ಸಲ್ಲಿಸಿದ ಪ್ರಬಂಧ.

೧೭. ರಡ್ಡೆಪ್ಪ, ೧೯೯೭, 'ರಾಯಚೂರು ಕೋಟೆ' M. phil, ಅಧ್ಯಯನಕ್ಕೆ ಸಲ್ಲಿಸಿದ ಪ್ರಬಂಧ.

೧೮. Sharma V. Suguna, 1998, *History and Antiquities of Raichur Fort,* Delhi

೧೯. ಪಾಟೀಲ ಬಿ.ಸಿ., ೧೯೯೮, *ಕೊಪ್ಪಳ: ಸಾಂಸ್ಕೃತಿಕಪರಂಪರೆಕೊಪ್ಪಳ*

೨೦. ಪಾಟೀಲ ಚನ್ನಬಸಪ್ಪ ಎಸ್., ೨೦೦೦, *ಕರ್ನಾಟಕ ಕೋಟೆಗಳು,* ಸಂಪುಟ ೧, ಹಂಪಿ.

೨೧. *IA*, vol XL, pp. 129-131.

೨೨. *EI*, vol, XXXVI, pp. 118-120.

೨೩. *EIM,* 1939-40, pp. 16-17, 21-22.

೨೪. *EIAPS,* 1962, pp. 58-59. 1963, pp. 63-64, 77-78.

೨೫. *HAS* 18.

೨೬. *APGAS* 3, 9, 15.

೨೭. ದೇಸಾಯಿ ಪಾಂಡುರಂಗರಾಯರು, ೧೯೫೬, *ಶಾಸನ ಪರಿಚಯ* ಸಂ. ೫೩, ೪೭, ೪೫.

೨೮. ದೇವರಕೊಂಡಾರೆಡ್ಡಿ (ಸಂ) *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ* : ೨ ಕೊಪ್ಪಳ ಜಿಲ್ಲೆ ಸಂ. ೫೦, ೧೨೮, ೧೩೦, ೧೩೧.

೨೯. Patil Channabasappa S. and Vinoda C. Patil (eds), 1998. *inscriptions of Raichur District Directorate of Archaeoalogy and Muṣeams,* Mysore. Nos, 120-121, 126, 137, 139, 185-191.

೩೦. Patil Channabasappa S. and Vinoda C. Patil (eds) 1998, *inscriptions of Koppal District Directorate of Archaeoalogy and Museams,* Mysore, Nos, 95, 96, 159.

೩೧. *ARIE,* 1962-63, No. D 175, 1985-86, No. B 104, 105.

# ಅಧ್ಯಾಯ ಎರಡು

# ರಾಜಕೀಯ ಇತಿಹಾಸ

ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಯ ಇತಿಹಾಸವನ್ನು ಪ್ರಾಗೈತಿಹಾಸಿಕ ಕಾಲದಿಂದಲೂ ನೋಡಬಹುದಾಗಿದೆ. ಈ ಕಾಲದ ನೆಲೆಗಳು ಮಸ್ಕಿ, ವಟಗಲ್, ಕರಡಿಕಲ್, ಕೋಟೆಕಲ್, ಬೆಣಕಲ್, ಚಿಕ್ಕಿಹಾಳ್, ಸಾಲಗುಂದ, ರೌಡಕುಂದ ಇತ್ಯಾದಿ ಕಡೆಗಳಲ್ಲಿ ಕಂಡು ಬರುತ್ತವೆ.

**ಮೌರ್ಯರಿಂದ ರಾಷ್ಟ್ರಕೂಟರ ತನಕ :** ಭಾರತದ ಇತಿಹಾಸದಲ್ಲಿ ಮೌರ್ಯರ ಕಾಲ ಬಹಳ ಮಹತ್ವದ್ದು. ಮೌರ್ಯ ಚಕ್ರವರ್ತಿ ಅಶೋಕನ ಕಾಲದಲ್ಲಿ ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳ ಭಾಗವು ಅವನ ಆಳ್ವಿಕೆಯಲ್ಲಿತ್ತು ಎಂಬುದು ಮಸ್ಕಿ ಹಾಗೂ ಕೊಪ್ಪಳ ಶಾಸನಗಳಿಂದ ತಿಳಿದು ಬರುತ್ತದೆ. ಮೌರ್ಯರ ನಂತರ ಇದು ಶಾತವಾಹನರ ಆಳ್ವಿಕೆಯಲ್ಲಿತ್ತೆಂಬುದಕ್ಕೆ ಚಿಕ್ಕ ಸಿಂದೋಗಿಯಲ್ಲಿ ದೊರೆತಿರುವ ಮುದ್ರಾಂಕಿತ ನಾಣ್ಯಗಳು ಪ್ರಮುಖ ಆಧಾರವಾಗಿವೆ. ಕರ್ನಾಟಕ ರಾಜ್ಯದ ಪ್ರಥಮ ಕನ್ನಡಿಗ ರಾಜವಂಶವಾದ ಕದಂಬರ ಚಂದ್ರವಳ್ಳಿ ಶಾಸನದಲ್ಲಿ ಕೊಪ್ಪಳವನ್ನು 'ಕುಪಣ' ಎಂದು ಉಲ್ಲೇಖಿಸಲಾಗಿದೆ. ನಂತರ ಬಾದಾಮಿ ಚಾಲುಕ್ಯರ ರಾಜ್ಯದಲ್ಲಿ ಈ ಭಾಗವು ಸೇರಿತ್ತೆಂಬುದಕ್ಕೆ ಕೊಪ್ಪಳ ಜಿಲ್ಲೆಯಲ್ಲಿ ದೊರೆತಿರುವ ಅವರ ಕಾಲದ ಮೂರು ಶಾಸನಗಳು ಪ್ರಮುಖ ಆಧಾರವಾಗಿವೆ. ಅದರಲ್ಲಿ ಹಲಗೇರಿ ಶಾಸನವು ಒಂದನೇ ವಿಕ್ರಮಾದಿತ್ಯನ ಕಾಲದ್ದಾಗಿದ್ದು, ಅದರಲ್ಲಿ ಕೊಪ್ಪಳವನ್ನು 'ಕೊಪಣ' ಎಂದು ಉಲ್ಲೇಖಿಸಿದೆ.[1] ನಂತರ ಸತ್ಯಾಶ್ರಯನ ಕಾಲದ ಒಂದು ಶಾಸನ ಇಟಗಿಯಲ್ಲಿ ದೊರೆತಿದ್ದು, ಇಟಗೆ ಎಂಬ ಗ್ರಾಮವನ್ನು ನಾಗನ ಸೋಮಾಜಿಯಗೆ ದತ್ತಿಯಾಗಿ ಕೊಟ್ಟಿದ್ದನ್ನು ಅದು ತಿಳಿಸುತ್ತದೆ.[2] ಮುಂದೆ ಕುಕನೂರಿನಲ್ಲಿ ಒಂದನೇ ವಿಕ್ರಮಾದಿತ್ಯನ ಶಾಸನ ದೊರೆತಿದ್ದು ಅದರಲ್ಲಿ ಅರಸನ ಸಾಮಂತ ಸಿಂದರಸನು ಕುಕನೂರನ್ನು ಆಳುತ್ತಿದ್ದನೆಂದು ತಿಳಿಸಿದೆ.[3] ಮುಂದೆ ಈ ಭಾಗವು ರಾಷ್ಟ್ರಕೂಟರ ಆಳ್ವಿಕೆಯಲ್ಲಿತ್ತೆಂಬುದು ಹಲವಾರು ದಾಖಲೆಗಳಿಂದ ತಿಳಿಯುವುದು. ಅಮೋಘವರ್ಷನ ಆಸ್ಥಾನ ಕವಿ ಶ್ರೀ ವಿಜಯನು ಕವಿರಾಜ ಮಾರ್ಗದಲ್ಲಿ ಕೊಪ್ಪಳವನ್ನು 'ವಿದಿತ ಕೊಪಣನಗರ' ಎಂದು ವರ್ಣಿಸಿದ್ದಾನೆ. ಕೊಪ್ಪಳದಲ್ಲಿ ರಾಷ್ಟ್ರಕೂಟ ಅರಸ ಇಂದ್ರನ ಕಾಲದ ಒಂದು ಶಾಸನದಲ್ಲಿ ಅರಸನ ದಂಡನಾಯಕ ಕೊಪ್ಪಳಕ್ಕೆ ಬಂದಿದ್ದನು ಎಂದು ತಿಳಿಸಿದೆ.[4] ಅದೇ ರೀತಿ ಎರಡನೇ ಕೃಷ್ಣನ ಕಾಲದ ಒಂದು ಶಾಸನ ಮುಧೋಳದಲ್ಲಿ ದೊರೆತಿದ್ದು. ಆ ಶಾಸನದಲ್ಲಿ ಮುಧೋಳ (ಮುದುವೊಳಲ್) ಯುದ್ಧದಲ್ಲಿ ಚಂಪ ಎಂಬ ವ್ಯಕ್ತಿ ಸತ್ತನೆಂದು ತಿಳಿಸಿದೆ.[5] ತಲಕಾಡಿನ ಗಂಗರು

ರಾಷ್ಟ್ರಕೂಟರ ಸಾಮಂತ ಅರಸರಾಗಿದ್ದು, ಅವರ ಆಳ್ವಿಕೆಯಲ್ಲಿ ಈ ಭಾಗವು ಸೇರಿತ್ತೆಂಬುದು ಇಟಗಿಯಲ್ಲಿ ದೊರೆತ ರಾಷ್ಟ್ರಕೂಟ ಅರಸ ಮೂರನೇ ಕೃಷ್ಣನ ಶಾಸನದಲ್ಲಿ ಸಾಮಂತ ಗಂಗ ಬೂತುಗನ ಅಧೀನ ಅಧಿಕಾರಿ ಬುಟ್ಟಯ್ಯನು ಎಡೆದೊರೆ-೨೦೦೦ ವನ್ನು ಆಳುತ್ತಿದ್ದನೆಂದು ತಿಳಿಸಿದೆ.[೬] ಮುಂದೆ ಗಂಗ ಅರಸರ ರಾಣಿಯರು, ಸಹೋದರಿಯರು, ಹೆಣ್ಣುಮಕ್ಕಳು ಕೊಪ್ಪಳದಲ್ಲಿ ಜೈನಧರ್ಮ ವನ್ನು ಅನುಸರಿಸಿ ಧಾರ್ಮಿಕ ವಿಧಿಯಿಂದ ಕೊಪ್ಪಳದಲ್ಲಿ ಮಡಿದರೆಂದು ಅಲ್ಲಿ ದೊರೆತಿರುವ ಕೆಲವು ಶಾಸನಗಳಿಂದ ತಿಳಿದು ಬರುವುದು.[೭]

**ಕಲ್ಯಾಣದ ಚಾಲುಕ್ಯರು :** ಕ್ರಿಸ್ತಶಕ ಎಂಟನೇ ಶತಮಾನದಲ್ಲಿ ಏಳಿಗೆಗೆ ಬಂದ ರಾಷ್ಟ್ರಕೂಟರು ಬಾದಾಮಿ ಚಾಲುಕ್ಯರ ಆಳ್ವಿಕೆಯನ್ನು ಅಂತ್ಯಗೊಳಿಸಿದರು. ಆದರೆ ಹತ್ತನೇ ಶತಮಾನದ ಕೊನೆ ಭಾಗದಲ್ಲಿ ಕಲ್ಯಾಣದ ಚಾಲುಕ್ಯರಿಗೆ ಇವರು ಶರಣಾಗತರಾಗಬೇಕಾಯಿತು. ಸುಮಾರು ಕ್ರಿ.ಶ. ೯೭೩ರಲ್ಲಿ ತಲೆ ಎತ್ತಿದ ಎರಡನೇ ತೈಲಪನು ರಾಷ್ಟ್ರಕೂಟರ ಕೊನೆಯ ಅರಸ ಎರಡನೇ ಕರ್ಕನನ್ನು ಸೋಲಿಸಿ ಕಲ್ಯಾಣದ ಚಾಲುಕ್ಯ ರಾಜ್ಯ ಸ್ಥಾಪನೆ ಮಾಡಿದನು. ಇವನ ಕಾಲದ ಒಂದು ಶಾಸನ ಮಾದಿನೂರಿನಲ್ಲಿ ದೊರೆತಿದ್ದು, ಅದರಲ್ಲಿ ರೇವಯ್ಯದ್ವೇದಿ ಚಟ್ಟೋಪಾಧ್ಯಾಯ ಸೋಮಯಾಜಿಯು ಅರಸನಿಂದ ಮಾದಿನೂರನ್ನು ದಾನವಾಗಿ ಪಡೆದಿದ್ದನೆಂದು ತಿಳಿಸಿದೆ.[೮] ಅದೇ ರೀತಿ ಎರಡನೇ ತೈಲನ ಮತ್ತೊಂದು ಶಾಸನ ತಳಕಲ್‌ನಲ್ಲಿ ಸಿಕ್ಕಿದ್ದು ಆ ಶಾಸನದಲ್ಲಿ ಅರಸನ ಸಾಮಂತ ಸೋಬನರಸನು ಎಡೆದೊರೆ ನಾಡನ್ನು ಮತ್ತು ಕುಕನೂರು -೩೦ನ್ನು ಆಳುತ್ತಿದ್ದನೆಂದು ತಿಳಿಸಿದೆ.[೯]

ಕಲ್ಯಾಣ ಚಾಲುಕ್ಯರಲ್ಲಿ ಪ್ರಮುಖ ಅರಸನಾದ ಎರಡನೇ ಜಯಸಿಂಹನ (ಕ್ರಿ.ಶ. ೧೦೧೫-೧೦೪೪) ಕಾಲದಲ್ಲಿ ಮೊಸಂಗಿ (ಮಸ್ಕಿ) ಅವನ ರಾಜಧಾನಿಯಾಗಿತ್ತು. ಆಗ ಚೋಳ ಅರಸ ರಾಜೇಂದ್ರ ಚೋಳನು ಚಾಲುಕ್ಯ ಅರಸನ ವಿರುದ್ಧ ದಂಡೆತ್ತಿ ಬಂದನು. ಇವರಿಬ್ಬರ ನಡುವೆ ಜರುಗಿದ ಯುದ್ಧವು ಮೊಸಂಗಿಯಲ್ಲಿ ನಡೆಯಿತು.[೧೦] ಜಯಸಿಂಹನ ನಂತರ ಅವನ ಮಗ ಒಂದನೇ ಸೋಮೇಶ್ವರ (ಕ್ರಿ.ಶ. ೧೦೪೪-೧೦೬೮) ಕಲ್ಯಾಣನಗರ ನಿರ್ಮಿಸಿ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಇವನ ಕಾಲದಲ್ಲಿಯೂ ಚೋಳ-ಚಾಲುಕ್ಯರ ನಡುವೆ ಯುದ್ಧ ನಡೆಯಿತು. ಚೋಳ ಅರಸ ರಾಜಾಧಿರಾಜನು ಕಲ್ಯಾಣವನ್ನು ಸೂರೆಗೊಂಡು ವೈರಿಯ ರಾಜಧಾನಿಯಲ್ಲಿ ವೀರಾಭಿಷೇಕವನ್ನು ಆಚರಿಸಿ ವಿಜಯ ರಾಜೇಂದ್ರ ಎಂಬ ಬಿರುದನ್ನು ಪಡೆದನು. ಕೆಲವು ವರ್ಷಗಳ ನಂತರ ರಾಜಾಧಿರಾಜ ತನ್ನ ತಮ್ಮ ಎರಡನೇ ರಾಜೇಂದ್ರನೊಂದಿಗೆ ಪುನಃ ಚಾಲುಕ್ಯ ರಾಜ್ಯದ ಮೇಲೆ ದಂಡೆತ್ತಿ ಬಂದನು. ಈ ಯುದ್ಧ ನಡೆದದ್ದು ಕೊಪ್ಪಂ ಅಂದರೆ ಈಗಿನ ಕೊಪ್ಪಳದಲ್ಲಿ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೧೧] ನಂತರ ಚೋಳ ಅರಸ ರಾಜೇಂದ್ರನು ಕುಮ್ಮಟದುರ್ಗದ ಮೇಲೆ ದಂಡೆತ್ತಿ ಹೋದನು.

ಆ ಸಮಯದಲ್ಲಿ ಕುಮ್ಮಟವು ಚಾಲುಕ್ಯರ ಸಾಮಂತರಾದ ಹೊಯ್ಸಳರ ಅಧೀನವಲ್ಲಿತ್ತು, ರಾಜೇಂದ್ರನು ಕುಮ್ಮಟವನ್ನು ವಶಪಡಿಸಿಕೊಂಡ ಮೇಲೆ ಪುನಃ ಕಲ್ಯಾಣ ಚಾಲುಕ್ಯ ಅರಸ ಎರಡನೇ ಸೋಮೇಶ್ವರನು ಕುಮ್ಮಟದುರ್ಗಕ್ಕೆ ಹೋಗಿ ಅಲ್ಲಿದ್ದ ರಾಜೇಂದ್ರನನ್ನು ಸೋಲಿಸಿ ಹಿಂದಕ್ಕಟ್ಟಿದನು.[೧೨] ಸೋಮೇಶ್ವರನ ರಾಣಿ ಕೇತಲದೇವಿ ಕ್ರಿ.ಶ. ೧೦೫೫ರಲ್ಲಿ ಲಿಂಗಸುಗೂರು ತಾಲೂಕಿನ ಬನ್ನಿಗೋಳವನ್ನು ಆಳುತ್ತಿದ್ದಳೆಂದು ಅಲ್ಲಿಯ ಶಾಸನದಿಂದ ತಿಳಿದು ಬರುತ್ತದೆ.[೧೩] ಅದೇ ರೀತಿ ಸೋಮೇಶ್ವರನ ಒಬ್ಬ ಸಾಮಂತನಾದ ಅಮ್ಮನದೇವನು ನಿಟ್ಟುರವೆ-೨೦ ರಿಂದ ಆಳ್ವಿಕೆ ನಡೆಸಿದ್ದನೆಂದು ರೌಡಕುಂದ ಶಾಸನದಿಂದ ತಿಳಿದು ಬರುತ್ತದೆ.[೧೪] ಸೋಮೇಶ್ವರನ ಮತ್ತೊಬ್ಬ ಸಾಮಂತ ಬಾಚಿಗನು ಸಾಲಗುಂದ ಗ್ರಾಮವನ್ನು ಆಳುತ್ತಿದ್ದನೆಂದು ಸಾಲಗುಂದದಲ್ಲಿನ ಒಂದು ಶಾಸನದಿಂದ ತಿಳಿದು ಬರುತ್ತದೆ.[೧೫] ಅಲ್ಲದೆ ಒಂದನೇ ಸೋಮೇಶ್ವರನ ರಾಣಿ ತ್ರೈಲೋಕ್ಯ ಮಹಾದೇವಿಯು ನಿಟ್ಟುರವೆ -೨೦ರಲ್ಲಿ ಇರುವ ಅಗ್ರಹಾರ ಮುಕ್ಕುಂದವನ್ನು ಆಳುತ್ತಿದ್ದಳೆಂದು ಮುಕ್ಕುಂದದಲ್ಲಿನ ಒಂದು ಶಾಸನದಿಂದ ತಿಳಿಯುವುದು.[೧೬] ಕಲ್ಯಾಣ ಚಾಲುಕ್ಯರಲ್ಲಿ ಪ್ರಮುಖ ನಾದಂತಹ ಅರಸನೆಂದರೆ ಆರನೇ ವಿಕ್ರಮಾದಿತ್ಯ (ಕ್ರಿ.ಶ. ೧೦೭೬-೧೧೨೬). ಇವನು ತನ್ನ ಆಳ್ವಿಕೆಯಲ್ಲಿ ಅನೇಕ ಯುದ್ಧಗಳನ್ನು ಮಾಡಿದನು. ಕ್ರಿ.ಶ. ೧೧೧೭ರಲ್ಲಿ ಹೊಯ್ಸಳ ವಿಷ್ಣುವರ್ಧನನ್ನು ಸೋಲಿಸಿದನು. ವಿಕ್ರಮಾದಿತ್ಯನಿಗೆ ಒಟ್ಟು ಹದಿನಾರು ಜನ ರಾಣಿಯರಿದ್ದರು. ಅವರಲ್ಲಿ ಕೆಲವರು ಕೆಲವು ಪ್ರಾಂತ್ಯಗಳನ್ನು ಆಳುತ್ತಿದ್ದರು. ರಾಣಿ ಅಬ್ಬಲದೇವಿಯು ಕರಡಿಕಲ್ಲ-೪೦೦ ಪ್ರಾಂತ್ಯದ ಲಿಂಗ ಗ್ರಾಮದಿಂದ ಆಳುತ್ತಿದ್ದನು.[೧೭] ಆರನೇ ವಿಕ್ರಮಾದಿತ್ಯನ ದಂಡನಾಯಕ ಮಹಾದೇವನು ತನ್ನ ಹುಟ್ಟೂರಾದ ಇಟಗಿಯಲ್ಲಿ ಅನೇಕ ದೇವಾಲಯಗಳನ್ನು ಕಟ್ಟಿಸಿದನು.[೧೮]

ಆರನೇ ವಿಕ್ರಮಾದಿತ್ಯನ ನಂತರ ಮೂರನೇ ಸೋಮೇಶ್ವರ (ಕ್ರಿ.ಶ. ೧೧೨೬-೩೮) ಆಳ್ವಿಕೆ ನಡೆಸಿದನು. ಇವನ ಕಾಲದ ಒಂದು ಶಾಸನ ನವಲಿಯಲ್ಲಿ ದೊರೆತಿದ್ದು ಅದರಲ್ಲಿ ಕರಡಿಕಲ್ಲ-೩೦೦ರಲ್ಲಿಯ ಒಂದು ಗ್ರಾಮಕ್ಕೆ ಅರಸನು ದತ್ತಿ ಬಿಟ್ಟನೆಂದು ತಿಳಿಸಿದೆ.[೧೯] ಮುಂದೆ ನಾಲ್ಕನೇ ಸೋಮೇಶ್ವರನ ಕಾಲದಲ್ಲಿ ಎಡೆದೊರೆ ನಾಡಿನ ಉಪ ವಿಭಾಗವಾದ ಕೆಳವಡಿ ನಾಡನ್ನು ಅರಸನ ಸಾಮಂತ ಪೆರ್ಮನೃಪಾಲನು ಆಳುತ್ತಿದ್ದನು ಎಂದು ತಲೇಖಾನದಲ್ಲಿ ದೊರೆತಿರುವ ಶಾಸನದಿಂದ ತಿಳಿದು ಬರುತ್ತದೆ.[೨೦] ಅದೇ ಅರಸನ ಕಾಲದ ಮತ್ತೊಂದು ಶಾಸನ ಹಿರೇಕೊಟ್ನೆಕಲ್ ಗ್ರಾಮದಲ್ಲಿ ದೊರೆತಿದ್ದು, ಆ ಶಾಸನದಲ್ಲಿ ಅರಸನ ಸಾಮಂತ ಮೈಲುಗಿದೇವನು ಮಾಸ್ಕಿಯನ್ನು ಆಳುತ್ತಿದ್ದನೆಂದು ತಿಳಿಸಿದೆ.[೨೧]

ಕ್ರಿಸ್ತಶಕ ಒಂಬತ್ತರಿಂದ ಹದಿಮೂರನೇ ಶತಮಾನಗವರೆಗಿನ ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳ ಶಾಸನಗಳು ಕೆಲವು ಆಡಳಿತ ವಿಭಾಗ ಮತ್ತು ಅದರ ಉಪವಿಭಾಗಗಳನ್ನು ಉಲ್ಲೇಖಿಸಿವೆ. "ನಾಡು" ಇದನ್ನು ದೇಶ, ಕಂಪಣ, ವಿಷಯ ಎಂದು ಕರೆಯಲಾಗಿದೆ. ಒಂದೊಂದು ನಾಡಿಗೆ ನಿರ್ಧಿಷ್ಟ ಸಂಖ್ಯೆಗಳನ್ನು ಕೊಡಲಾಗಿದೆ. ಈ ಸಂಖ್ಯೆಯು ಆ ನಾಡಿಗೆ ಒಳಪಟ್ಟಿದ್ದ ಹಳ್ಳಿಗಳನ್ನು ತಿಳಿಸುತ್ತದೆ. ಕೃಷ್ಣ ಹಾಗೂ ತುಂಗಭದ್ರ ನದಿಗಳ ಮಧ್ಯದ ಇಂದಿನ ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಪ್ರದೇಶವನ್ನು ಎಡೆದೊರೆ-೨೦೦೦ ಎಂದು ಕರೆಯುತ್ತಿದ್ದರು. ಈ ನಾಡಿನಲ್ಲಿ ಅನೇಕ ಉಪ ವಿಭಾಗಗಳಿದ್ದವು. ಕರಡಿಕಲ್ಲ-೪೦೦ ಇಂದಿನ ಲಿಂಗಸುಗೂರು ತಾಲೂಕಿನ ಕರಡಕಲ್ ಹಾಗೂ ಅರದ ಸುತ್ತಲಿನ ಪ್ರದೇಶವಾಗಿತ್ತು. ಮುದುಗಲ್ಲು ಅದರ ರಾಜಧಾನಿಯಾಗಿತ್ತು. ಮೊಸಳೆಕಲ್ಲು-೩೦೦ ಇಂದಿನ ದೇವದುರ್ಗ ತಾಲೂಕಿನ ಮೊಸರಕಲ್ಲ ಹಾಗೂ ಅದರ ಸುತ್ತಲಿನ ಪ್ರದೇಶವಾಗಿತ್ತು. ಅದೇ ರೀತಿ ಮೊರಟ-೩೦೦ ಇಂದಿನ ಮಾನ್ವಿ ತಾಲೂಕಿನ ಮಲ್ಲಟ ಮತ್ತು ಅದರ ಸುತ್ತಲಿನ ಪ್ರದೇಶವಾಗಿತ್ತು. ಕೆಳವಡಿ-೩೦೦ ಇನ್ನೊಂದು ಉಪವಿಭಾಗವಾಗಿದ್ದು ಕಲುಕೆರೆ ಅದರ ರಾಜಧಾನಿಯಾಗಿತ್ತು. ಅಯ್ಯನವಾಡಿ-೩೦೦, ಮುದುಗುಂದೂರು-೩೦೦ ಹಾಗೂ ನಿಟ್ಟನವೆ-೭೦ ಇವೆಲ್ಲವೂ ಎಡೆದೊರೆ ನಾಡಿನ ಉವಿಭಾಗಗಳಾಗಿದ್ದವು. ಇವುಗಳಲ್ಲದೆ ಕುಂತಳನಾಡಿನಲ್ಲಿ ಬೆಳ್ವೊಲ-೩೧೦ ಒಂದು ಉಪವಿಭಾಗವಾಗಿದ್ದು, ಈ ಉಪವಿಭಾಗದಲ್ಲಿ ಇಂದಿನ ಕೊಪ್ಪಳ ತಾಲೂಕು ಕೂಡ ಸೇರಿತ್ತು. ಅಲ್ಲದೆ ಕುಕನೂರು -೩೦ ಇದರ ಚಿಕ್ಕ ಉಪವಿಭಾಗವಾಗಿತ್ತು. ಅದು ಇಂದಿನ ಯಲಬುರ್ಗ ತಾಲೂಕಿನ ಸುತ್ತಲಿನ ಪ್ರದೇಶವನ್ನು ಆವರಿಸಿತ್ತು.[೨೨]

**ಕಳಚೂರ್ಯರು :** ಕಲ್ಯಾಣದ ಕಳಚೂರ್ಯರು ಬಹುಕಾಲ ಮಾಂಡಲಿಕರಾಗಿ ಆಳ್ವಿಕೆ ನಡೆಸಿದರೂ ಸ್ವತಂತ್ರರಾಗಿ ರಾಜ್ಯಭಾರ ಮಾಡಿದ್ದು ಬಹಳ ಕಡಿಮೆ ಕಾಲ, ಈವಂಶದ ಮೊದಲ ಅರಸರೆಂದರೆ ಕನ್ನ ಹಾಗೂ ಜೋಗಮ ಇವರಲ್ಲಿ ಜೋಗಮನು (ಕ್ರಿ.ಶ.೧೦೮೧-೧೧೧೮)ನು ರಾಜ್ಯ ವಿಸ್ತರಣೆಯನ್ನು ಮಾಡಿದನು. ನಂತರ ಪ್ರಮುಖ ಅರಸನೆಂದರೆ ಎರಡನೇ ಬಿಜ್ಜಳ. ಇವನ ಆಳ್ವಿಕೆ ಕಾಲ ಕರ್ನಾಟಕ ಇತಿಹಾಸದಲ್ಲಿ ಪ್ರಮುಖ ಘಟನೆ ಆಗಿದೆ. ಇವನ ಕಾಲದ ಒಂದು ಶಾಸನ ಕರಡಿಕಲ್‌ನಲ್ಲಿ ದೊರೆತಿದ್ದು, ಅದರಲ್ಲಿ ಬಿಜ್ಜಳನು 'ತ್ರಿಭುವನೈಕ್ಯ ವೀರ' ಎಂಬ ಬಿರುದು ಧರಿಸಿ ರಾಜಧಾನಿಯನ್ನು ಆಳುತ್ತಿದ್ದನೆಂದು ತಿಳಿಸಿದೆ.[೨೩] ಅದೇ ರೀತಿ ಎರಡನೇ ಬಿಜ್ಜಳನ ಕಾಲದ ಮತ್ತೊಂದು ಶಾಸನ ಕುಕನೂರಿನಲ್ಲಿ ದೊರೆತಿದೆ. ಅದರಲ್ಲಿ ಅರಸನ ಸಾಮಂತನಾದ ಅಮ್ಮಣಯನು ಬೆಳ್ವೊಲ ನಾಡನ್ನು ಆಳುತ್ತಿದ್ದನೆಂದು ತಿಳಿಸಿದೆ.[೨೪] ನಂತರ ಬಿಜ್ಜಳನ ಮಗ ಸೋವಿದೇವನ ಕಾಲದ ಮತ್ತೊಂದು ಶಾಸನ ಕುಕನೂರಿನಲ್ಲಿ ಸಿಕ್ಕಿದ್ದು, ಅದರಲ್ಲಿ ದಂಡನಾಯಕ ತೇಜಿರಾಜನು ಬೆಳ್ವೊಲ-೩೦೦ ರಲ್ಲಿ ಆಳ್ವಿಕೆ

ನಡೆಸಿದ್ದನೆಂದು ತಿಳಿಸಿದೆ.[೫೪] ನಂತರ ಸೋವಿದೇವನ ಕಾಲದ ಮತ್ತೊಂದು ಶಾಸನ ತಲೇಖಾನದಲ್ಲಿ ಸಿಕ್ಕಿದ್ದು ಅದರಲ್ಲಿ ಎಡೆದೊರೆ ನಾಡಿನ ಉಪ ವಿಭಾಗ ಕೆಳವಡಿ-೩೦೦ರನ್ನು ಅರಸನ ಸಾಮಂತನಾದ ಕೇಶವ ದಂಡನಾಯಕ ಆಳುತ್ತಿದ್ದನೆಂದು ತಿಳಿಸಿದೆ.[೫೫] ನಂತರ ಬಿಜ್ಜಳನ ಮತ್ತೊಬ್ಬ ಮಗ ಎರಡನೇ ಸಂಕಮದೇವನ ಕಾಲದ ಒಂದು ಶಾಸನವು ಕವಲೂರಿನಲ್ಲಿ ದೊರೆತಿದ್ದು, ಸಂಕಮನು ಮಾದಿನೂರಿನಿಂದ ಆಳ್ವಿಕೆ ನಡೆಸಿದ್ದನ್ನು ಇದರಲ್ಲಿ ಉಲ್ಲೇಖಿಸಿದೆ.[೫೬] ಅದೇ ಅರಸನ ಮತ್ತೊಂದು ಶಾಸನ ಕುಕನೂರಿನಲ್ಲಿ ದೊರೆತಿದೆ. ಅದರಲ್ಲಿ ಅರಸನ ಸಾಮಂತ ಧನ್ನುಗಿಯು ಬೆಳ್ವೊಲನಾಡನ್ನು ಆಳುತ್ತಿದ್ದನೆಂದು ತಿಳಿಸಿದೆ.[೫೭]

**ಯಾದವರು** : ಕ್ರಿಸ್ತ ಶಕ ಒಂಬತ್ತನೇ ಶತಮಾನದಿಂದ ಹದಿನಾಲ್ಕನೇ ಶತಮಾನದ ಆರಂಭದವರೆಗೆ ಆಳಿದ ಯಾದವರಲ್ಲಿ ಪ್ರಮುಖ ಅರಸರಾದ ಐದನೇ ಭಿಲ್ಲಮ ಹಾಗೂ ಎರಡನೇ ಸಿಂಘಣನ ಕಾಲದ ಶಾಸನಗಳು ಈ ಭಾಗದಲ್ಲಿ ದೊರೆತಿವೆ. ಐದನೇ ಭಿಲ್ಲಮನ ಕ್ರಿ.ಶ. ೧೧೯೧ರ ಒಂದುಶಾಸನ ಕರಡಿಕಲ್ ಗ್ರಾಮದಲ್ಲಿ ದೊರೆತಿದ್ದು, ಅದರಲ್ಲಿ ಅರಸನ ಸಾಮಂತ ಬಿಜ್ಜರಸನು ಕರಡಿಕಲ್ಲ-೪೦೦ರನ್ನು ಆಳುತ್ತಿದ್ದನೆಂದು ತಿಳಿಸಿದೆ.[೫೯] ಅದೇ ರೀತಿ ಎರಡನೇ ಸಿಂಘಣನ ಕ್ರಿ.ಶ. ೧೨೧೦ರ ಒಂದು ಶಾಸನವು ಕಮಲದಿನ್ನಿಯಲ್ಲಿ ದೊರೆತಿದ್ದು ಅದರಲ್ಲಿ ಅರಸನ ಸಾಮಂತ ನರಸಿಂಗ ರಾಹುತನು ಕರಡಿಕಲ್ಲ-೩೦೦ರನ್ನು ಆಳುತ್ತಿದ್ದನೆಂದು ತಿಳಿಸಿದೆ.[೬೦] ಅದೇ ಅರಸನ ಕ್ರಿ.ಶ. ೧೨೧೫ರ ಶಾಸನ ಮುದುಗಲ್ಲಿನಲ್ಲಿ ದೊರೆತಿದ್ದು, ಅರಸನ ಸಾಮಂತನಾದ ದಾಮೋದರನು ಕರಡಿಕಲ್ಲಿನಲ್ಲಿ ಆಡಳಿತ ನಡೆಸುತ್ತಿನೆಂದು ಅದು ತಿಳಿಸುತ್ತದೆ.[೬೧]

**ಹೊಯ್ಸಳರು**: ಕಲ್ಯಾಣ ಚಾಲುಕ್ಯರ ಪತನದ ನಂತರ ಯಾದವರ ಪ್ರಬಲ ವಿರೋಧಿಗಳಾಗಿ ತಲೆ ಎತ್ತಿ ನಿಂತವರು ಹೊಯ್ಸಳರು. ಯಾದವರನ್ನು ತಡೆದು ಕರ್ನಾಟಕದ ಸಾರ್ವಭೌಮತ್ವವನ್ನು ಪಡೆಯುವ ಶಕ್ತಿಯನ್ನು ಕ್ರಮೇಣ ಗಳಿಸಿ ಈ ನಾಡನ್ನು ಆಳಿದ ಪ್ರಮುಖ ರಾಜವಂಶವಾಗಿದೆ. ಹೊಯ್ಸಳರಲ್ಲಿ ಪ್ರಮುಖರಾದಂತಹ ಅರಸರೆಂದರೆ ವಿಷ್ಣುವರ್ಧನ ಹಾಗೂ ಎರಡನೇ ಬಲ್ಲಾಳ. ಈ ಇಬ್ಬರು ದೊರೆಗಳು ಎಡೆದೊರೆನಾಡಿನ ಕೆಲವು ಪ್ರದೇಶಗಳನ್ನು ವಶಪಡಿಸಿಕೊಂಡಿದ್ದರೆಂದು ಕೆಲವು ಶಾಸನಗಳಿಂದ ತಿಳಿದು ಬರುತ್ತದೆ. ವಿಷ್ಣುವರ್ಧನನು (ಕ್ರಿ.ಶ. ೧೧೦೮-೧೧೫೨) ರಾಯಚೂರು ಕೋಟೆಯನ್ನು ವಶಪಡಿಸಿ ಕೊಂಡನೆಂದು ಅನೇಕ ಹೊಯ್ಸಳ ಶಾಸನಗಳು ತಿಳಿಸುತ್ತವೆ.[೬೨] ಈ ಶಾಸನಗಳು ಊರಿನ ಹೆಸರನ್ನು 'ರಾಚವೂರು' 'ಪೆರ್ಮ್ಮನ ರಾಚವೂರು' ಮತ್ತು 'ರಾಚನೂರು' ಎಂದು ಉಲ್ಲೇಖಿಸುತ್ತವೆ. ಎರಡನೇ ವೀರ ಬಲ್ಲಾಳನ ಎರಡು ಶಾಸನಗಳು ಕೊಪ್ಪಳದಲ್ಲಿ ಸಿಕ್ಕಿವೆ. ಅದರಲ್ಲಿ

ಕ್ರಿ.ಶ. ೧೧೯೭ರ ಶಾಸನದಲ್ಲಿ ದಾನ ಕೊಟ್ಟಿದ್ದನ್ನು ತಿಳಿಸಿದೆ.[೩೩] ಮತ್ತೊಂದು ಕ್ರಿ.ಶ. ೧೨೦೩. ರ ಶಾಸನವು ಸಹ ದಾನ ಕೊಟ್ಟಿದ್ದನ್ನು ಉಲ್ಲೇಖಿದೆ.[೩೪]

**ಕಾಕತೀಯರು :** ಆಂದ್ರದ ಮೂಲದವರಾದ ಕಾಕತೀಯರು ಹನ್ನೊಂದನೇ ಶತಮಾನದಿಂದ ಹದಿನಾಲ್ಕನೇ ಶತಮಾನದ ಮಧ್ಯಭಾಗದವರೆಗೂ ಆಳ್ವಿಕೆ ನಡೆಸಿದರು. ಇವರು ಮೊದಲು ಹನುಮಕೊಂಡವನ್ನು ನಂತರ ವಾರಂಗಲ್‌ನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದರು. ಇವರು ಒಂಬತ್ತನೇ ಶತಮಾನದಲ್ಲಿ ರಾಷ್ಟ್ರಕೂಟರ ಸಾಮಂತರಾಗಿದ್ದು, ಹತ್ತನೇ ಶತಮಾನದ ಹೊತ್ತಿಗೆ ಸ್ವತಂತ್ರ ಅರಸರಾದರು. ಕಾಕತೀಯರಲ್ಲಿ ಪ್ರಮುಖ ಅರಸರೆಂದರೆ ರಾಣಿ ರುದ್ರಮದೇವಿ ಹಾಗೂ ಆಕೆಯ ಮೊಮ್ಮಗ ಪ್ರತಾಪರುದ್ರ. ಪ್ರತಾಪರುದ್ರನ ಆಳ್ವಿಕೆಯಲ್ಲಿ ಎಡೆದೊರೆನಾಡಿನ ಪ್ರದೇಶವು ಅವನ ಅಧೀನದಲ್ಲಿತ್ತು. ಈತನ ಕಾಲದಲ್ಲಿ ವಿಠಲನಾಥನು ಕ್ರಿ.ಶ. ೧೨೯೪ರಲ್ಲಿ ರಾಯಚೂರಿನಲ್ಲಿ ಒಂದು ಕೋಟೆಯನ್ನು ನಿರ್ಮಿಸಿದನೆಂದು ಅಲ್ಲಿ ದೊರೆತಿರುವ ಶಾಸನದಿಂದ ತಿಳಿದು ಬರುತ್ತದೆ.[೩೫]

**ಸಾಮಂತ ಅರಸರು :** ಪ್ರಾಚೀನ ಭಾರತದ ರಾಜಕೀಯದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಸಾಮಂತ ಅರಸರು ಪ್ರಮುಖ ಪಾತ್ರ ವಹಿಸಿದ್ದಾರೆ. ಇವರು ಅರಸರ ಹೆಸರಿನಲ್ಲಿ ಕೆಲವೊಂದು ಪ್ರದೇಶಗಳಲ್ಲಿ ಆಳ್ವಿಕೆ ನಡೆಸುತ್ತಿದ್ದರು.

**೧. ಮೊರಟದ ಹೈಹಯರು :** ಹನ್ನೊಂದು ಹಾಗೂ ಹನ್ನೆರಡನೇ ಶತಮಾನಗಳಲ್ಲಿ ಮೊರಟ-೩೦೦ ರನ್ನು ಈಗಿನ ಮಾನ್ವಿ ತಾಲೂಕಿನ ಮಲ್ಲಟ ಪ್ರದೇಶವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದರು. ಇವರು ಮೊದಲು ಚಾಲುಕ್ಯ ನಂತರ ಯಾದವರ ಸಾಮಂತರಾಗಿದ್ದರು. ಈ ವಂಶದ ರೇವರಸ ಕ್ರಿ.ಶ. ೧೦೫೨ರಲ್ಲಿ ಎಡೆದೊರೆ-೨೦೦೦ವನ್ನು ಆಳುತ್ತಿದ್ದನು.[೩೬]

**೨. ಎರಂಬರಗೆಯ ಸಿಂದರು :** ಇವರು ಕೆಳವಡಿ ಹಾಗೂ ಇತರ ಭಾಗಗಳನ್ನು ತಮ್ಮ ರಾಜಧಾನಿ ಎರಂಬರಗೆಯಿಂದ ಆಳುತ್ತಿದ್ದರು. ಎರಂಬರಗೆ ಈಗಿನ ಯಲಬುರ್ಗ ಆಗಿದೆ. ಚಾಲುಕ್ಯ ಸಾಮಂತರಾಗಿದ್ದ ಈ ವಂಶದ ಅಚುಗಿ ಆರನೇ ವಿಕ್ರಮಾದಿತ್ಯನ ಆದೇಶದ ಮೇರೆಗೆ ಎಡೆದೊರೆ ನಾಡಿನೊಳಗೆ ಪ್ರವೇಶ ಮಾಡಿದ್ದ ಹೊಯ್ಸಳ ಸೈನ್ಯವನ್ನು ಸೋಲಿಸಿದನು.[೩೭]

೩. ಕರಡಿಕಲ್ಲ ಕದಂಬರು : ಮೊದಲು ಕಲ್ಯಾಣ ಚಾಲುಕ್ಯರ ನಂತರ ಯಾದವರ ಸಾಮಂತರಾಗಿದ್ದ ಈ ವಂಶದ ಅರಸರು ಕರಡಿಕಲ್ಲ-೫೦೦ರನ್ನು ಆಳುತ್ತಿದ್ದ ವಿಷಯವು ಕ್ರಿ.ಶ. ಹನ್ನೊಂದನೇ ಹಾಗೂ ಹನ್ನೆರಡನೇ ಶತಮಾನದ ಶಾಸನಗಳಿಂದ ತಿಳಿಯುತ್ತದೆ. ಇವರು ಬನವಾಸಿ ಪುರವರೇಶ್ವರ, ಕದಂಬರಾಭರಣ ಎಂಬ ಬಿರುದಗಳನ್ನು ಧರಿಸಿರುವುದರಿಂದ ಇವರು ಕದಂಬರ ಕುಲಕ್ಕೆ ಸೇರಿದವರೆಂದು ಹೇಳಬಹುದಾಗಿದೆ. ಈ ವಂಶದ ನಾಗವರ್ಮರಸ ಕಲ್ಯಾಣ ಚಾಲುಕ್ಯರ ಒಂದನೇ ಸೋಮೇಶ್ವರನ ಸಾಮಂತನಾಗಿದ್ದು ಕ್ರಿ.ಶ. ೧೦೬೬ರಲ್ಲಿ ಕರಡಿಕಲ್ಲ-೫೦೦ರನ್ನು ಆಳುತ್ತಿದ್ದನೆಂದು ನವಿಲಿಯ ಶಾಸನದಿಂದ ತಿಳಿದುಬರುತ್ತದೆ.[25]

**ಕಂಪಿಲದೇವ :** ಹದಿನಾಲ್ಕನೇ ಶತಮಾನದ ಮೊದಲ ಪಾದದಲ್ಲಿ ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳ ಭಾಗವನ್ನು ಕಂಪಿಲದೇವನು ತನ್ನ ರಾಜಧಾನಿ ಹೊಸಮಲೆದುರ್ಗ (ಈಗಿನ ಸಂಡೂರು ತಾಲೂಕಿನ ರಾಮಗಡ) ಹಾಗೂ ಎರಡನೇ ರಾಜಧಾನಿ ಕುಮ್ಮಟದುರ್ಗದಿಂದ ಆಳುತ್ತಿದ್ದನು. ಈ ಕುಮ್ಮಟದುರ್ಗವು ಮುಕ್ಕುಪಿ ಗ್ರಾಮದ ಹತ್ತಿರ ಗಂಗಾವತಿ ಹಾಗೂ ಕೊಪ್ಪಳತಾಲೂಕುಗಳ ಮೇರೆಗಳು ಸಂಧಿಸುವಲ್ಲಿ ಇದೆ. ಕುಮ್ಮಟದುರ್ಗವು ಆಯಕಟ್ಟಿನ ಸ್ಥಳವಾಗಿದ್ದರಿಂದ ಯುದ್ಧ ಮಾಡುವಾಗ ಕಂಪಿಲನ ಸೈನ್ಯವು ಕುಮ್ಮಟಕ್ಕೆ ಬರುತ್ತಿತ್ತು. ಇಡೀ ದಕ್ಷಿಣ ಭಾರತವು ಮುಸ್ಲಿಮರ ದಾಳಿಗೆ ಸೋತು ಶರಣಾದಾಗ ಕಂಪಿಲದೇವ ಹಾಗೂ ಅವನ ಮಗ ಗಂಡುಗಲಿ ಕುಮಾರರಾಮ ಮೂರು ಸಲ ದಿಲ್ಲಿ ಸುಲ್ತಾನನ ಸೈನ್ಯವನ್ನು ಸೋಲಿಸಿದರು. ಆದರೆ ನಾಲ್ಕನೇ ಸಲಕ್ಕೆ ದಿಲ್ಲಿ ಸುಲ್ತಾನ ಮಹಮ್ಮದ -ಬಿನ್-ತೊಘಲಕನ ಸೈನ್ಯ ಪುನಃ ಕುಮ್ಮಟದ ಮೇಲೆ ದಾಳಿ ಮಾಡಿದಾಗ ಕಂಪಿಲ ಹಾಗೂ ಕುಮಾರರಾಮ ಯುದ್ಧದಲ್ಲಿ ವೀರಾವೇಶದಿಂದ ಹೋರಾಡಿ ಮೃತರಾದರು.[26] ಕ್ರಿ.ಶ. ೧೩೨೭ರಲ್ಲಿ ಕುಮ್ಮಟದ ಪತನವಾದ ಮೇಲೆ ಕ್ರಿ.ಶ. ೧೩೩೬ರಲ್ಲಿ ಅಲ್ಲಿಂದ ಕೇವಲ[27] ಕಿ.ಮೀ. ದೂರದಲ್ಲಿರುವ ಹಂಪಿಯಲ್ಲಿ ವಿಜಯನಗರದ ಸ್ಥಾಪನೆ ಆಯಿತು.

**ವಿಜಯನಗರ :** ದುರದೃಷ್ಟವಶಾತ್ ದಕ್ಷಿಣದಲ್ಲಿ ಹೊಯ್ಸಳ ಸಾಮ್ರಾಜ್ಯ, ಕಾಕತೀಯರ ರಾಜ್ಯ, ಯಾದವರ ರಾಜ್ಯ ಇವೆಲ್ಲವೂ ಉತ್ತರದಲ್ಲಿಯ ಮುಸ್ಲಿಮರ ಆಕ್ರಮಣಕ್ಕೆ ತತ್ತರಿಸಿದವು. ಆದರೆ ಬದ್ಧ ಕಂಕಣರಾಗಿ ದೇಶ ಹಾಗೂ ಸಂಸ್ಕೃತಿಯನ್ನು ಉಳಿಸುವ ಉದ್ದೇಶಕ್ಕಾಗಿ ವಿಜಯನಗರ ಸಾಮ್ರಾಜ್ಯ ತಲೆ ಎತ್ತಿತ್ತು. ಕ್ರಿ.ಶ. ೧೩೩೬ರಲ್ಲಿ ಸಂಗಮ ವಂಶದವರು ಈ ಸಾಮ್ರಾಜ್ಯ ಸ್ಥಾಪನೆ ಮಾಡಿದರು. ಸಂಗಮವಂಶ (ಕ್ರಿ.ಶ. ೧೩೩೬-೧೪೮೫), ಸಾಳುವವಂಶ (ಕ್ರಿ.ಶ. ೧೪೮೫-೧೫೦೫) ತುಳುವವಂಶ (ಕ್ರಿ.ಶ. ೧೫೦೫-೧೫೭೦) ಮತ್ತು ಅರವೀಡು ವಂಶ

(ಕ್ರಿ.ಶ. ೧೫೨೦-೧೫೬೫) ದವರು ಸುಮಾರು ೨೫೦ ವರ್ಷಗಳ ಕಾಲ ಆಳಿದರು. ಇವರು ಅನುಪಮವಾದ ಕೊಡುಗೆಗಳನ್ನಿತ್ತು ಕರ್ನಾಟಕವನ್ನು ಶ್ರೀಮಂತಗೊಳಿಸಿದ್ದಾರೆ.

ಹದಿನಾಲ್ಕನೇ ಶತಮಾನದಲ್ಲಿ ವಿಜಯನಗರದಲ್ಲಿ ಸಂಗಮ ಮತ್ತು ಗುಲಬರ್ಗದಲ್ಲಿ ಬಹಮನಿ ಅರಸರು ತಮ್ಮ ಆಳ್ವಿಕೆ ಪ್ರಾರಂಭ ಮಾಡಿದ ಮೇಲೆ ಕೃಷ್ಣ ಮತ್ತು ತುಂಗಭದ್ರ ನದಿಗಳು ಮಧ್ಯದ ದೋಅಬ್ ಪ್ರದೇಶವು ನಿರಂತರವಾದ ಕದನಗಳಿಗೆ ಕಾರಣವಾಯಿತು. ಮುದುಗಲ್ಲು ಮತ್ತು ರಾಯಚೂರನ್ನು ಒಳಗೊಂಡ ಈ ಪ್ರದೇಶವನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಳ್ಳಲು ಈ ಎರಡು ರಾಜ್ಯಗಳು ಹವಣಿಸುತ್ತಿದ್ದವು. ವಿಜಯನಗರಕ್ಕೆ ಸೇರಿದ್ದ ಮುದುಗಲ್ಲು ಬಹಮನಿ ಅರಸರ ವಶದಲ್ಲಿತ್ತು. ಬಹಮನಿ ಅರಸ ಒಂದನೇ ಮಹಮ್ಮದ್‌ಶಾಹನು ಮುನ್ನೂರು ಜನ ಸಂಗೀತಗಾರರಿಗೆ ವಿಜಯನಗರ ಅರಸನ ಬೊಕ್ಕಸದಿಂದ ಹಣ ಪಡೆಯುವಂತೆ ತಿಳಿಸಿ ಪತ್ರವನ್ನು ಕೊಟ್ಟನು. ಇದರಿಂದ ಅಪಮಾನಗೊಂಡ ವಿಜಯನಗರ ಅರಸ ಒಂದನೇ ಬುಕ್ಕನು ಬಹಮನಿ ರಾಜ್ಯದ ಮೇಲೆ ದಾಳಿ ಮಾಡಿ ಮುದುಗಲ್ಲನ್ನು ವಶಪಡಿಸಿಕೊಂಡನು. ಈ ಯುದ್ಧದಲ್ಲಿ ಬಹಮನಿ ಸೇನೆಯ ಹೆಚ್ಚಿನ ಪಾಲು ಸೈನಿಕರು ಹತರಾದರು. ಆಗ ಬಹಮನಿ ಮಹಮ್ಮದ್ ಶಾಹನು ಸೇಡು ತೀರಿಸಿಕೊಳ್ಳಲು ಎದುರು ದಾಳಿ ಮಾಡಿದನು. ಅವನು ಮುದುಗಲ್ಲು ಮತ್ತು ಆದವಾನಿ ಬಳಿ ೧೩೬೬-೬೭ರಲ್ಲಿ ವಿಜಯನಗರ ಸೈನ್ಯವನ್ನು ಸೋಲಿಸಿದನು. ಈ ಯುದ್ಧದಲ್ಲಿ ಹೆಂಗಸರು, ಮಕ್ಕಳು, ಗಂಡಸರು, ಐದು ಲಕ್ಷ ಹಿಂದುಗಳನ್ನು ಕೊಲ್ಲಲಾಯಿತೆಂದು ಫೆರಿಸ್ತಾ ಹೇಳುತ್ತಾನೆ.[೪೦] ನಂತರ ಎರಡನೇ ದೇವರಾಯನ ಕಾಲದಲ್ಲಿ ಮತ್ತೊಂದು ಯುದ್ಧ ನಡೆಯಿತು. ಒಂದನೇ ದೇವರಾಯ ಮುದುಗಲ್ಲಿನ ಅಕ್ಕಸಾಲಿಗನ ಮಗಳನ್ನು ಮೋಹಿಸಿ, ಅವಳನ್ನು ತನಗೆ ಮದುವೆ ಮಾಡಿಕೊಡಬೇಕೆಂದು ಕೇಳಿದನು. ಅವಳ ರಕ್ಷಣೆಗೆ ಮುಂದಾದ ಫಿರೂಜ್ ಶಾಹನು ಕ್ರಿ.ಶ. ೧೪೦೬ರಲ್ಲಿ ವಿಜಯನಗರದ ಮೇಲೆ ದಾಳಿ ಮಾಡಿ ದೇವರಾಯನನ್ನು ಸೋಲಿಸಿದನೆಂದು ಫೆರಿಸ್ತಾ ಹೇಳುತ್ತಾನೆ.[೪೧] ಕ್ರಿ.ಶ. ೧೪೩೬ರಲ್ಲಿ ಮುದುಗಲ್ಲು ಕೋಟೆಯು ಎರಡನೇ ದೇವರಾಯನ ವಶದಲ್ಲಿತ್ತೆಂದು, ಮತ್ತು ಅದು ವರದಣ್ಣನಾಯಕನ ನಾಯಕತನಕ್ಕೆ ಒಳಪಟ್ಟಿತ್ತೆಂದು ಅಲ್ಲಿಯ ಶಾಸನವು ತಿಳಿಸುತ್ತದೆ.[೪೨] ಅದೇ ರೀತಿ, ತುಳುವಂಶದ ಅರಸ ನರಸನಾಯಕನ ಆಳ್ವಿಕೆಗೆ ಮುದುಗಲ್ಲು ಹಾಗೂ ರಾಯಚೂರು ಪಟ್ಟಣಗಳು ಒಳಪಟ್ಟಿದ್ದವೆಂದು ಶಾಸನಗಳಿಂದ ತಿಳಿದು ಬರುತ್ತದೆ. ನರಸನಾಯಕನು ವಿಜಯನಗರವನ್ನು ಆಳುತ್ತಿದ್ದಾಗ ಸಾಳುವ ತಿಮ್ಮಯ್ಯನು ಮುದುಗಲ್ಲು ಕೋಟೆಯಲ್ಲಿ ಒಂದು ಬಾವಿಯನ್ನು ಕ್ರಿ.ಶ. ೧೫೦೨ರಲ್ಲಿ ಕಟ್ಟಿಸಿದನೆಂದು ಒಂದು ಶಾಸನ ತಿಳಿಸುತ್ತದೆ.[೪೩] ಇದೇ ಸಾಳುವ ತಿಮ್ಮಯ್ಯನು ಅಲ್ಲಿ ಎರಡು ಕೊತ್ತಳಗಳನ್ನು ಕಟ್ಟಿಸಿದ್ದು

ಅವುಗಳ ಮೇಲಿನ ಶಾಸನಗಳಿಂದ ತಿಳಿಯುತ್ತದೆ.[೪೪] ಕ್ರಿ.ಶ. ೧೫೦೫ರಲ್ಲಿ ವಿಜಯನಗರ ಸಿಂಹಾಸನವನ್ನೇರಿದ ತುಳುವ ವಂಶದ ನರಸಿಂಹನು ಬಿಜಾಪುರದ ಯೂಸುಫ್ ಆದಿಲ್‌ಖಾನನೊಂದಿಗೆ ಯುದ್ಧ ಮಾಡಿ ಅವನ ವಶದಲ್ಲಿದ್ದ ಮುದುಗಲ್ಲು ಮತ್ತು ರಾಯಚೂರನ್ನು ವಶಪಡಿಸಿಕೊಂಡನು. ಈ ಯುದ್ಧವು ಕ್ರಿ.ಶ. ೧೫೦೫ ಮತ್ತು ೧೫೦೯ರ ಮಧ್ಯದಲ್ಲಿ ನಡೆಯಿತು. ನರಸಿಂಹನ ನಂತರ ಪಟ್ಟಕ್ಕೆ ಬಂದ ಕೃಷ್ಣದೇವರಾಯನು ಕ್ರಿ.ಶ. ೧೫೨೦ರಲ್ಲಿ ಬಿಜಾಪುರದ ಇಸ್ಮಾಯಿಲ್‌ಆದಿಲ್ ಶಾಹನನ್ನು ಸೋಲಿಸಿ ರಾಯಚೂರು ಕೋಟೆಯನ್ನು ವಶಪಡಿಸಿಕೊಂಡನು.

ಕ್ರಿ.ಶ. ೧೫೫೩ರಿಂದ ಕ್ರಿ.ಶ. ೧೫೦೯ರವರೆಗೆ ರಾಯಚೂರು ವಿಜಯನಗರ ಅರಸರ ವಶದಲ್ಲಿತ್ತು ಎಂದು ರಾಯಚೂರು ಕೋಟೆಯ ಗೋಡೆಯ ಮೇಲಿನ ಕ್ರಿ.ಶ.೧೫೫೩, ೧೫೫೮, ಮತ್ತು ೧೫೦೯ರ ಮೂರು ಶಾಸನಗಳು ಪುಷ್ಟೀಕರಿಸುತ್ತವೆ.[೪೫] ನಂತರ ರಾಮರಾಯನ ಮಗನಾದ ಕೃಷ್ಣರಾಜನ ಅಧೀನ ಅಧಿಕಾರಿಯಾದ ವೆಂಗಳಪ್ಪ ನಾಯಕನು ಕ್ರಿ.ಶ. ೧೫೬೦ರಲ್ಲಿ ಮುದುಗಲ್ಲು ಕೋಟೆಯ ಮೊಗಸಾಲೆ ಕಟ್ಟಿಸಿ, ಅದರ ಕದಗಳನ್ನು ಮಾಡಿಸಿದನು.[೪೬]

**ಬಹಮನಿ ಅರಸರು :** ಕ್ರಿ.ಶ. ೧೩೪೭ರಲ್ಲಿ ಅಸ್ತಿತ್ವಕ್ಕೆ ಬಂದ ಬಹಮನಿ ರಾಜ್ಯ ಸುಮಾರು ೧೮೦ ವರ್ಷಗಳ ಕಾಲ ಏಳಿಗೆಯಲ್ಲಿತ್ತು. ಅನಂತರ ಅದು ಛಿದ್ರಗೊಂಡು ನಾಲ್ಕು ಶಾಹಿ ರಾಜ್ಯಗಳು ತಲೆ ಎತ್ತಿದವು. ಈ ಅವಧಿಯಲ್ಲಿ ಬಹಮನಿ ರಾಜ್ಯವನ್ನು ಹದಿನೆಂಟು ಜನ ಸುಲ್ತಾನರು ಆಳಿದರು. ದಖ್ಖನಿಯಲ್ಲಿ ಇದಕ್ಕೆ ಪ್ರತಿ ಸ್ಪರ್ಧಿಯಾಗಿದ್ದುದು ವಿಜಯನಗರ ಸಾಮ್ರಾಜ್ಯ . ಇವೆರಡು ರಾಜ್ಯಗಳ ನಡುವೆ ಆಗಾಗಕದನಗಳು ಸಂಭವಿಸುತ್ತಲೇ ಇದ್ದವು. ರಾಯಚೂರು ಹಾಗೂ ಮುದುಗಲ್ಲು ಪಟ್ಟಣಗಳು ದೋಅಬ್‌ನ ಮಧ್ಯದಲ್ಲಿ ಇದ್ದುದರಿಂದ ಅವುಗಳನ್ನು ವಶಪಡಿಸಿಕೊಳ್ಳುವುದಕ್ಕಾಗಿ ಈ ಕದನಗಳು ನಡೆಯುತ್ತಿದ್ದವು. ಈ ಕದನಗಳಲ್ಲಿ ಜಯಶಾಲಿಯಾದ ಅರಸನು ಅಲ್ಲಿನ ಕೋಟೆಗಳ ಭಾಗಗಳನ್ನು ಬಲಪಡಿಸಿರುವುದು ಅಥವಾ ಅಲ್ಲಿ ಇತರೇ ಕಟ್ಟಡಗಳನ್ನು ನಿರ್ಮಿಸಿರುವುದನ್ನು ಇತಿಹಾಸದಲ್ಲಿ ನೋಡಬಹುದು. ಇಲ್ಲಿ ಪ್ರಮುಖವಾಗಿ ಬಹಮನಿ ಅರಸರು ರಾಯಚೂರು ಕೋಟೆಯನ್ನು ಗೆದ್ದ ಮೇಲೆ ರಾಯಚೂರಿನಲ್ಲಿ ಅನೇಕ ಬಾಗಿಲು ಮಸೀದಿಗಳನ್ನು ನಿರ್ಮಿಸಿದ್ದಾರೆ. ಅದರಲ್ಲಿ ಮೂರನೇ ಮಹಮ್ಮದ್ ಶಾಹನ ಕಾಲದಲ್ಲಿ ಮಲ್ಲುಖಾನ್ ಹಫೀಜನು ಕ್ರಿ.ಶ. ೧೪೬೮-೬೯ರಲ್ಲಿ ಕಾಟೇದರ್ವಾಜದಲ್ಲಿಯ ಕಮಾನಿ ದರ್ವಾಜವನ್ನು ಕಟ್ಟಿಸಿದನೆಂದು ಅಲ್ಲಿಯ ಶಾಸನದಿಂದ ತಿಳಿಯುತ್ತದೆ.

ಅದೇ ಅರಸನ ಕಾಲದಲ್ಲಿ ಅದೇ ಮಲ್ಲುಖಾನನು ಕ್ರಿ.ಶ. ೧೪೬೯-೭೦ರಲ್ಲಿ ಮಕ್ಕಾದರ್ವಾಜವನ್ನು ಕಟ್ಟಿಸಿದನು. ಪುನಃ ಅದೇ ಅರಸನ ಕಾಲದಲ್ಲಿ ಕ್ರಿ.ಶ. ೧೪೮೦-೮೧ರಲ್ಲಿ ಒಂದು ಕಟ್ಟಡದ ನಿರ್ಮಾಣವಾಯಿತು.[೪೭]

**ಆದಿಲ್ ಶಾಹಿ ಅರಸರು:** ಬಿಜಾಪುರವು ಬಹಮನಿ ರಾಜ್ಯದ ಒಂದು ಪ್ರಾಂತ್ಯವಾಗಿತ್ತು. ನಂತರ ಬಹಮನಿ ಸಾಮ್ರಾಜ್ಯವು ನಾಲ್ಕು ಭಾಗಗಳಲ್ಲಿ ವಿಭಜನೆ ಆದಾಗ ಬಿಜಾಪುರ ಸ್ವತಂತ್ರ ರಾಜ್ಯವೆಂದು ಘೋಷಿಸಿಕೊಂಡಿತು. ಇಲ್ಲಿನ ಪ್ರಮುಖ ಅರಸರೆಂದರೆ ಯೂಸುಫ್ ಆದಿಲ್‌ಶಾಹ, ಇಸ್ಮಾಯಿಲ್ ಆದಿಲ್ ಶಾಹ, ಅಲಿ ಆದಿಲ್ ಶಾಹ ಮತ್ತು ಎರಡನೇ ಇಬ್ರಾಹಿಮ್‌ಆದಿಲ್ ಶಾಹ. ಈ ಅರಸರ ಕಾಲದಲ್ಲಿಯೇ ವಿಜಯನಗರದೊಂದಿಗೆ ಸಾಕಷ್ಟು ಕದನಗಳು ನಡೆದವು. ಬಿಜಾಪುರದ ಅರಸರು ದೋಅಬ್ ಪ್ರದೇಶದಲ್ಲಿದ್ದ ರಾಯಚೂರು ಹಾಗೂ ಮುದುಗಲ್ಲು ಪಟ್ಟಣಗಳನ್ನು ವಶಪಡಿಸಿಕೊಂಡಾಗ ಅಲ್ಲಿ ಅನೇಕ ಕಟ್ಟಡಗಳನ್ನು ನಿರ್ಮಿಸಿರುವುದನ್ನು ನೋಡಬಹುದು. ಕ್ರಿ.ಶ. ೧೫೦೯ರಲ್ಲಿ ಯೂಸುಫ್ ಆದಿಲ್ ಶಾಹನ ಕಾಲದಲ್ಲಿ ರಾಯಚೂರಿನಲ್ಲಿ ಕಾಲೀ ಮಸೀದಿ ಅಥವಾ ದರ್ಗಕ್ಕೆ ಅಂಗಡಿಗಳನ್ನು ದಾನ ಮಾಡಲಾಯಿತು. ನಂತರ ಇಸ್ಮಾಯಿಲ್ ಆದಿಲ್ ಶಾಹನ ಕಾಲದಲ್ಲಿ ಕ್ರಿ.ಶ. ೧೫೦೮ರಲ್ಲಿ ಕಾಲೀ ಮಸೀದಿ ಹತ್ತಿರದ ಶಕರ್‌ಬೌಡಿ ಬಾವಿಯನ್ನು ಕಟ್ಟಲಾಯಿತು. ಪುನಃ ಇಸ್ಮಾಯಿಲ್ ಆದಿಲ್ ಶಾಹನ ಆಳ್ವಿಕೆಯಲ್ಲಿ ಕ್ರಿ.ಶ. ೧೫೧೫ರಲ್ಲಿ ಒಂದು ಮಸೀದಿಯನ್ನು ಮತ್ತು ಅದೇ ವರ್ಷ ಬುರ್ಜ್ ಅಲ್‌ಫತ್ ಎನ್ನುವ ಬುರುಜನ್ನು ಕಟ್ಟಲಾಯಿತು.[೪೮]

ಕ್ರಿ.ಶ. ೧೫೩೫-೧೫೫೧ರ ವರೆಗೆ ರಾಯಚೂರು ಕೋಟೆಯು ಮೊದಲನೇ ಇಬ್ರಾಹಿಮ್ ಆದಿಲ್ ಶಾಹನ ವಶದಲ್ಲಿದ್ದುದು ಕೋಟೆಯಲ್ಲಿಯ ಐದು ಶಾಸನಗಳಿಂದ ಧೃಡಪಡುತ್ತದೆ. ಕೋಟೆಯ ಬುರುಜಿನ ಮೇಲಿನ ಕ್ರಿ.ಶ.೧೫೩೪-೩೫ರ ಶಾಸನವು ಮಲ್ಲು ಆದಿಲ್ ಖಾನ್ ಮತ್ತು ಆತನ ತಂದೆ ಇಸ್ಮಾಯಿಲ್‌ನ ಹೆಸರುಗಳನ್ನು ಉಲ್ಲೇಖಿಸುತ್ತದೆ. ವಿಜಯನಗರ ಅರಸ ಕೃಷ್ಣದೇವರಾಯನು ಮಡಿದ ನಂತರ ಇಸ್ಮಾಯಿಲ್ ಆದಿಲ್ ಶಾಹನು ಪುನಃ ದೋಅಬ್ ಪ್ರದೇಶದ ಮೇಲೆ ದಾಳಿಮಾಡಿ ಮುದುಗಲ್ಲನ್ನು ವಶಪಡಿಸಿ ಕೊಂಡನೆಂಬುದನ್ನು ಕ್ರಿ.ಶ. ೧೫೩೯ರ ಕೋಟೆಯೊಳಗಿನ ಒಂದು ಶಾಸನ ದೃಢಪಡಿಸುತ್ತದೆ. ನಂತರ ಅಹ್ಮದ್ ಹಾಜಿ ಗುನಾಬಾದಿಯು ಕ್ರಿ.ಶ. ೧೫೪೬-೪೭ರಲ್ಲಿ ಬುರ್ಜ-ಇ-ಹಮಲ್ ಬುರುಜನ್ನು ಕಟ್ಟಿಸಿದನು. ಕ್ರಿ.ಶ. ೧೫೪೮-೪೯ರಲ್ಲಿ ಮತ್ತೊಂದು ಬುರುಜನ್ನು ಕಟ್ಟಿಸಲಾಯಿತು. ಕ್ರಿ.ಶ. ೧೫೫೦ರಲ್ಲಿ ಶಮ್‌ಶೀರುಲ್ ಮುಲ್ಕ್‌ನು ಕಾಟೀ ದರ್ವಾಜವನ್ನು ಕಟ್ಟಿಸಿದನು. ಕ್ರಿ.ಶ. ೧೫೫೧ರಲ್ಲಿ ಕೆರೆ (ಸರೋವರ)ದ ಬಾಗಿಲನ್ನು ಕಟ್ಟಿಸಲಾಯಿತು.[೪೯] ಮುದುಗಲ್ಲಿನಲ್ಲಿಯ ಫತೆ ಜಂಗು ಬುರುಜಿನ ನಿರ್ಮಾಣವು ಅಲಿ ಆದಿಲ್ ಶಾಹನ ಕಾಲದಲ್ಲಿ ಪ್ರಾರಂಭವಾಯಿತು.

ಈ ಬುರುಜನ್ನು ೧೫೬೫ರಲ್ಲಿ ವಿಜಯನಗರ ಸೈನ್ಯದ ಮೇಲೆ ಬಿಜಾಪುರ ಅರಸರು ಸಾಧಿಸಿದ ವಿಜಯದ ಸಂಕೇತವಾಗಿ ಕಟ್ಟಿಸಲಾಯಿತು. ಅಲ್ಲದೆ ಈ ಬುರುಜಿನ ನಿರ್ಮಾಣದ ಉಸ್ತುವಾರಿಯನ್ನು ವಹಿಸಿದ ದಿಯಾನತ್ ಖಾನನು ಶಾಸನವನ್ನು ಹಾಕಿಸಿದನೆಂದು ತಿಳಿಸುತ್ತದೆ. ಈತನು ಮುದುಗಲ್ಲು ಕೋಟೆಯ ಉಪಪಾಲಕ (ನಾಯಿಬ್ ಗೈಬತ್) ಆಗಿದ್ದನು. ಅದೇ ಅರಸನ ಆಳ್ವಿಕೆಯಲ್ಲಿ ಮತ್ತೊಂದು ಶಾಸನ ದಿಲ್‌ದಾರ್ ಖಾನನು ಮಸೀದಿಯನ್ನು ಕಟ್ಟಿಸಿದನೆಂದು ತಿಳಿಸುತ್ತದೆ.[೫೦]

೧೫೬೫ರಲ್ಲಿ ವಿಜಯನಗರದ ಪತನವಾದ ಮೇಲೆ ರಾಯಚೂರು ಕೋಟೆಯು ಆದಿಲ್ ಶಾಹಿ ಅರಸರ ಆಳ್ವಿಕೆಗೆ ಒಳಪಟ್ಟಿದ್ದು ಶಾಸನಗಳಿಂದ ದೃಢಪಟ್ಟಿದೆ. ಒಂದನೇ ಅಲಿ ಆದಿಲ್ ಶಾಹನ ಆಳ್ವಿಕೆಯ ಮೂರು ಶಾಸನಗಳಿವೆ. ಕ್ರಿ.ಶ. ೧೫೬೮ರಲ್ಲಿ ಇಖ್ಲಾಸ್ ಖಾನನು ಶಾಹ ಬುರುಜನ್ನು ಕಟ್ಟಿಸಿದನು. ಕ್ರಿ.ಶ. ೧೫೭೦-೭೧ರಲ್ಲಿ ತಾಹಿರ್ ಖಾನನು ಒಂದು ಬುರುಜನ್ನು ಕಟ್ಟಿಸಿದನು. ಕ್ರಿ.ಶ. ೧೫೭೭-೭೮ರಲ್ಲಿ ಜಾಮೀ ಮಸೀದಿಯನ್ನು ಕಟ್ಟಿಸಲಾಯಿತು.[೫೧] ಬಿಜಾಪುರದ ಅಲಿಆದಿಲ್ ಶಾಹನ ಆಳ್ವಿಕೆಯಲ್ಲಿ ಮುದುಗಲ್ಲಿನಲ್ಲಿ ಕ್ರಿ.ಶ. ೧೫೭೪-೭೫ರಲ್ಲಿ ಅಲಿ ಬುರುಜಿನ ನಿರ್ಮಾಣವಾಯಿತು.[೫೨] ಇದನ್ನು ಬಂಕಾಪುರ ಕೋಟೆಯನ್ನು ಜಯಿಸಿದ ಸಂಕೇತವಾಗಿ ನಿರ್ಮಿಸಿದನು. ಎರಡನೇ ಇಬ್ರಾಹಿಮ್ ಆದಿಲ್ ಶಾಹನ ಆಳ್ವಿಕೆಯಲ್ಲಿ ಕ್ರಿ.ಶ. ೧೬೦೩-೧೬೦೪ರಲ್ಲಿ ಆತನ ಮಂತ್ರಿ ದಿಲಾವರ್ ಖಾನನ ಕಾಲದಲ್ಲಿ ಒಂದು ಬುರುಜನ್ನು ಕಟ್ಟಲಾಯಿತು.[೫೩] ಮುದುಗಲ್ಲು ಕೋಟೆಯುದ್ದಕ್ಕೂ ಬರೆದ ಮಲಿಕ ಮುರಾದನ ನಾಲ್ವತ್ತನಾಲ್ಕು ಶಾಸನಗಳಿವೆ. ಎರಡನೇ ಇಬ್ರಾಹಿಮ್ ಆದಿಲ್ ಶಾಹನ ಅಧಿಕಾರಿಯಾದ ಈತನು ಕ್ರಿ.ಶ. ೧೫೯೧ರಿಂದ ೧೬೧೧ರ ವರೆಗೆ ಅಗುಸೆ, ದಿಡ್ಡಿ, ಬುರುಜು ಮತ್ತು ನಿಟುಗಳನ್ನು ಕಟ್ಟಿಸಿದನೆಂದು ಇವು ತಿಳಿಸುತ್ತವೆ.[೫೪] ಮುಂದೆ ಮಹಮ್ಮದ್ ಆದಿಲ್ ಶಾಹನ ಆಳ್ವಿಕೆಯ ಕ್ರಿ.ಶ. ೧೬೪೩ರ ಒಂದು ಶಾಸನವು ಅವನ ಅಧಿಕಾರಿಯಾದ ರಾಘುವಂದು ಬೆಟ್ಟದ ಮೇಲೆ ಗಗನಮಹಲನ್ನು ಕಟ್ಟಿಸಿದನೆಂದು ಉಲ್ಲೇಖಿಸಿದೆ.[೫೫]

**ಕನಕಗಿರಿ ನಾಯಕರು :** ಕನಕಗಿರಿಯು ಹದಿನೈದು-ಹದಿನಾರನೇ ಶತಮಾನಗಳಲ್ಲಿ ವಿಜಯನಗರದ ಅಧೀನ ಪಾಳೆಗಾರಿಕೆ ಸಂಸ್ಥಾನವಾಗಿತ್ತು. ವಿಜಯನಗರದ ಪತನದ ನಂತರ ಕನಕಗಿರಿಯಲ್ಲಿ ಗುಜ್ಜಲ ವಂಶದ ನಾಯಕರು ಸ್ವತಂತ್ರರಾಗಿ ಕೆಲಕಾಲ ಆಡಳಿತ ನಡೆಸಿದರು. ಈ ವಂಶದಲ್ಲಿ ಪ್ರಮುಖರಾದವರು ಪರಸಪ್ಪ ನಾಯಕ, ನವಾಬ ಉಡಚನಾಯಕ , ಹಿರೇ ನಾಯಕ ಮುಂತಾದವರು. ಇಲ್ಲಿ ನವಾಬ ಉಡಚ ನಾಯಕನ

ಆಳ್ವಿಕೆಯಲ್ಲಿ ಕನಕಗಿರಿಯಲ್ಲಿ ಕೋಟೆ ಮತ್ತು ಒಂದು ಕಿಲೋ ಮೀಟರ್ ಉದ್ದವಿರುವ ಬೀದಿಯನ್ನು ನಿರ್ಮಿಸಲಾಯಿತು.[೫೬]

**ದೇವದುರ್ಗ ನಾಯಕರು :** ಹದಿನೇಳನೇ ಶತಮಾನದಲ್ಲಿ ಬೇಡರ ಜಾತಿಯ ಪಾಳೆಗಾರರು ದೇವದುರ್ಗದಲ್ಲಿ ಆಳುತ್ತಿದ್ದು, ಇವರು ಹಿಂದೆ ವಿಜಯನಗರದ ಅರಸರಿಗೆ ಅಧೀನರಾಗಿದ್ದು ನಂತರ ಬಿಜಾಪುರದ ಆದಿಲ್ ಶಾಹಿ ಅರಸನ್ನು ಆಶ್ರಯಿಸಿದರು. ಅವರ ಕಾಲದ ಕೋಟೆಯ ಅವಶೇಷಗಳು ಈಗಲೂ ಇವೆ.[೫೭]

**ಅಸಫ್‌ಜಾಹಿ ನಿಜಾಮರು :** ಕ್ರಿ.ಶ. ಹದಿನೇಳನೇ ಶತಮಾನದ ಪ್ರಾರಂಭದಲ್ಲಿ ಹೈದರಾಬಾದಿನ ಅಸಫ್‌ಜಾಹಿ ವಂಶದ ಆಳ್ವಿಕೆ ಪ್ರಾರಂಭವಾಯಿತು. ಅಂದಿನಿಂದ ಕ್ರಿ.ಶ. ೧೯೪೮ರ ವರೆಗೆ ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳು ಆ ರಾಜ್ಯದ ಒಂದು ಭಾಗವಾಗಿ ಉಳಿದವು. ಇವರ ಆಳ್ವಿಕೆಯಲ್ಲಿ ಕ್ರಿ.ಶ. ೧೭೮೦-೮೧ರಲ್ಲಿ ರಾಯಚೂರಿನ ಪಾಂಚ್‌ಬೀಬಿ ಬೆಟ್ಟದ ಮೇಲೆ ತಾಜ್ ಬಂಗಲೆಯನ್ನು ಕಟ್ಟಿಸಲಾಯಿತು.[೫೮] ನಂತರ ಕ್ರಿ.ಶ. ೧೭೯೧ರಲ್ಲಿ ಕೊಪ್ಪಳದಲ್ಲಿ ಬ್ರಿಟಿಷರು ಹಾಗೂ ನಿಜಾಮರ ನಡುವೆ ಒಪ್ಪಂದ ಆಗಿ ಅಲ್ಲಿನ ಕೋಟೆ ನಿಜಾಮರ ವಶವಾಯಿತು. ಇವರ ಆಳ್ವಿಕೆಗೆ ಗುಡಗುಂಟಿ, ದೇವದುರ್ಗ, ಕನಕಗಿರಿ ಇತ್ಯಾದಿ ಸಂಸ್ಥಾನಗಳು ಒಳಪಟ್ಟಿದ್ದವು. ೧೯೪೮ರ ವರೆಗೆ ಈ ಭಾಗದಲ್ಲಿ ನಿಜಾಮರ ಆಳ್ವಿಕೆ ಮುಂದುವರೆಯಿತು.

**ಹೈದರಾಲಿ ಹಾಗೂ ಟೀಪು ಸುಲ್ತಾನ :** ಮೈಸೂರಿನಿಂದ ಆಳುತ್ತಿದ್ದ ಹೈದರಾಲಿ ಹಾಗೂ ಆತನ ಮಗ ಟೀಪು ಸುಲ್ತಾನ ಉತ್ತರ ಕರ್ನಾಟಕಕ್ಕೆ ತಮ್ಮ ರಾಜ್ಯವನ್ನು ವಿಸ್ತರಿಸಿದರು. ಮೊದಲಿಗೆ ಹೈದರಾಲಿಯು ಕ್ರಿ.ಶ. ೧೭೭೬ರಲ್ಲಿ ಕೊಪ್ಪಳ ಕೋಟೆ ವಶಪಡಿಸಿಕೊಂಡು ಕ್ರಿ.ಶ.೧೭೭೮ರಲ್ಲಿ ಅದನ್ನು ಬಲಪಡಿಸಿ ಕೋಟೆಯ ಬತೇರಿಗಳನ್ನು ಐರೋಪ್ಯ ಶೈಲಿಯಲ್ಲಿ ಕಟ್ಟಿಸಿದನು. ಇವನು ಕಂದಕ, ಕೆರೆ, ಕಾಲುವೆ ಮುಂತಾದುವುಗಳನ್ನು ಕಟ್ಟಿಸಿದನು.[೫೯] ಅಲ್ಲದೆ ಬಹಾದ್ದೂರ ಬಂಡೆಯಲ್ಲಿ ಕ್ರಿ.ಶ. ೧೭೮೧-೮೨ರಲ್ಲಿ ಮತ್ತೊಂದು ಕೋಟೆಯನ್ನು ನಿರ್ಮಿಸಿದನು.[೬೦] ಮುಂದೆ ಟೀಪು ಸುಲ್ತಾನನು ಅಧಿಕಾರಕ್ಕೆ ಬಂದಾಗ ಪುನಃ ಕೊಪ್ಪಳದಲ್ಲಿ ಕ್ರಿ.ಶ.೧೭೮೩ರಲ್ಲಿ ಸುಲ್ತಾನ ಬಾಗಿಲನ್ನು ನಿರ್ಮಿಸಿದನು.[೬೧] ಅಲ್ಲದೆ ಬಹಾದ್ದೂರಬಂಡೆಯಲ್ಲಿಯೂ ಕೋಟೆಯನ್ನು ಮತ್ತಷ್ಟು ಬಲಪಡಿಸಲು ಹೆಚ್ಚು ಹಣ ವೆಚ್ಚ ಮಾಡಿದನೆಂದು ಶಾಸನಗಳಿಂದ ತಿಳಿದು ಬರುತ್ತದೆ.

## ಟಿಪ್ಪಣಿಗಳು

೧. *ARIE,* 1963-64, No. B 367; *APGAS,* 3. No. RC. 1; *JSI,* No. 47, *ಶಾಪ,* ಸ.೧.

೨. *ARIE,* 1955-56, No. B 210; *EI*, XL, 157-158.

೩. *ARIE,* 1955-56, No. B 212.

೪. *ARIE,* 1954-55, No. B 129.

೫. *ARIE,* 1955-56, No. B 214; *ಶಾಪ,* ಸ. ೩೨; *EI*, XL pp. 189-190.

೬. *ARIE,*1955-56, No. B 209.

೭. Patil Channabasappa S. and Vinoda C. Patil (Eds), 1998, *Inscriptions of Koppal District,* Nos. 129-151, 165-173, 177-182, 188-240.

೮. *ARIE*, 1953-54, No. B 235; *HAS*, 18, No 11; *ಶಾಪ,* ಸ. ೬. ದೇವರಕೊಂಡಾರೆಡ್ಡಿ (ಸ) ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನಸಂಪುಟ :೨ ಕೊಪ್ಪಳ ಜಿಲ್ಲೆ,* ಕೊಪ್ಪಳ ತಾಲೂಕ ೨೬.

೯. *ARIE,*1955-56, No. B 221; *ಶಾಪ,* ಸ. ೨೩.

೧೦. *ARIE,* 1953-54; No. B 245, *ARIE,* 1953-54 No. B 54.

೧೧. Patil Channabasappa S., 1992, *Temples of Raichur and Bellary Districts*, p 7.

೧೨. *ಅದೇ* p. 7.

೧೩. *ARIE,* 1957-58, No. B 340.

೧೪. *ARIE,* 1985-86, No. B 104.

೧೫. *ARIE,* 1985-86, No. B 105.

೧೬. *ARIE,*1985-86, No. B 101.

೧೭. *ARIE,* 1953-54, No. B 241; *HAS,* 18, No. 9.

೧೮. *EI*, XIII, pp. 36-58.

೧೯. *ARIE*, 1958-59, No. B 175.

೨೦. *ARIE,* 1957-58, No. B 374.

೨೧. ARIE, 1961-62, No. B 560.

೨೨. Patil Channabasappa S. and Vinoda. C. Patil. (Eds) *Inscriptions of Raichur Districts*, p. xxiv.

೨೩. *ARIE,*1953-54, No. B 238.

೨೪. *ಶಾಪ,* ಸ. ೪೯.

೨೫. *ಶಾಪ,* ಸ. ೫೦; *APGAS,* 3 No. Rc. 12

೨೬. *ARIE,* 1957-58, No. B 375.

೨೭. *ARIE,* 1964-65, No. B 430; *ಶಾಪ,* ಸ. ೨೨.

೨೮. *ARIE,* 1953-54, No. B 260; *HAS,* 18, No. 13; *ಶಾಪ,* ಸ. ೫೩.

೨೯. *ARIE,*1953-54, No. B 240; *HAS,* 18, No.16.

೩೦. *ARIE,* 1958-59, No. B 694.

೩೧. *ARIE,* 1953-54, No. B 253; *HAS,* 18, No. 17

೩೨. *EC,* IV, ನಾಗಮಂಗಲ ೭೦; V, ಬೇಲೂರು, ೧೩೭, ೧೯೩.

೩೩. *ARIE,* 1964-65, No. B 416.

೩೪. *ARIE,* 1964-65, No. B 419; *ಶಾಪ,* ಸ. ೨೧.

೩೫. Patil Channabasappa S, and Vinoda C. Patil, 1998, *Inscriptions of Raichur District,* No 420; *ARIE,* 1957-58, No. B. 383, *APGAS,* 3 No. 78; Sarma V. Suguna, 1998, *History and Antiquties of Raichur Fort* Delhi. No.1, pp. 53-57.

೩೬. *ARIE,* 1953-54, No. B 256; *HAS,* 18, No. 5; *APGAS,* 15 No. 22.

೩೭. Gopal, B.R, 1982, *Minor Dynasties of South India Karnataka,* Vol I, p. 109.

೩೮. Patil Channabasappa S. and Vinoda C. Patil *ಪೂರ್ವೋಕ್ತ,* No. 225; *ARIE,*1958-59, No. B 714.

೩೯. Patil Channabasappa S. and Vinoda C. Patil (Eds) *Inscriptions of Koppal District* No. 111; *VPR.* 1987-88; p.212. *ARIE,* 1987-88, No. B 36.

೪೦. Desai P.B. Srinivas Ritti B.R. Gopal, 1981, *A History of Karnataka,* pp. 353-354.

೪೧. ಅಕ್ಕಸಾಲಿಗನ ಮಗಳ ಘಟನೆಯಿಂದ ಆಕರ್ಷಿತನಾದ ಆಂಗ್ಲ ಸಾಹಿತಿಯೊಬ್ಬನು ಇದನ್ನು ಆಧರಿಸಿ ಒಂದು ಐತಿಹಾಸಿಕ ಕಾದಂಬರಿ ಬರೆದಿದ್ದಾನೆ. Watson Adam, 1964 . The war of the goldsmiths Daughter, Chatto windus, London.

೪೨. *ARIE,* 1953-54, No. B 254; *HAS* 18, No. 18; *APGAS,* 15, No. Raichur Dist

206.

೪೩. *ARIE,* 1957-58, No. B 363.

೪೪. Patil Channabasappa S. and Vinoda C. Patil. *nscriptions of Raichur District,* Nos. 120-121.

೪೫. *ಅದೇ,* No. 422; *ARIE,* 1957-58, No. B 385, No. 421; 1957-58, No. B 384. No. 426; 1958-59,- No. B 723.

೪೬. *ARIE,* 1957-58, Nos. B 360-61.

೪೭. *ARIE,* 1958-59, No. D. 128, 133, 156; *EIAPS,* 1962, pp. 58-59, 60-61, pl. pl.xvii (b).

೪೮. *EIM,* 1939-40 p. 13-16 pl.iv (b), V(a) (b), Vi(a).

೪೯. *EIM,* 1939-40. p. 16. pl vi (a); *ARIE*, 1958-59, Nos. D 125, 131,132;1962-63, No. D. 179; *EIAPS;* 1963. p 62-65. pl xix (a), (c) XX (a) (b)

೫೦. *EIM;* 1935-36.p. 15-16, pl ix (a), (b).

೫೧. *EIM,* 1939-40, pp.17-18, pl VII (a) *EIAPS,* 1963 p. 65-66, pl xix (b).

೫೨. *EIM*, 1935-36, pp 16-17, pl X (a) ; *ARIE*,1959-60, No. D 172.

೫೩. EIM, 1935-36, p. 18, pl. XI (a); ARIE,1984-85 , No C 149.

೫೪. *ARIE,* 1957-58. Nos. B 367-369; 1958-59, No. B 707; Patil Channabasappa S. and Vinoda C. Patil, *ಪೂರ್ವೋಕ್ತ,* Nos. 126, 133-137, 139-142, 149, 152-159, 161-163, 165-166, 169-182,185-191, 214.

೫೫. *EIM,*1935-36, pp. 18-19 pl xi (b); Patil Channabasappa S. and Vinoda C. Patil. *ಪೂರ್ವೋಕ್ತ* No 193,

೫೬. ಜಯತೀರ್ಥ, ರಾಜಪುರೋಹಿತ, ೧೯೭೫, *ಕನಕಗಿರಿ* ಪು. ೭೧.

೫೭. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ೧೯೮೬, ಪು. ೫೨೧.

೫೮. *ARIE,* 1962-63, Nos. D 186-187.

೫೯. Patil Channabasappa S. and Vinoda C. Patil 1998. *Inscriptions of Koppal District* No. 159; *JHAS* 1916, p. 97, pl xxxii

೬೦. *ಅದೇ,* No 95; *JHAS*, 1916, pp. 98-99. pl xxxiv; *ARIE;* 1984-85, No. C. 139.

೬೧. *ಅದೇ,* No. 155; *JHAS*, 1916, pp 96-97, pl xxxi.

## ಅಧ್ಯಾಯ ಮೂರು

# ಕೋಟೆಗಳ ಪ್ರಕಾರಗಳು

ಇಲ್ಲಿ ಸಾಮಾನ್ಯವಾಗಿ ಕೋಟೆ ಅಂದರೆ ಗಟ್ಟಿಯಾದಂತಹ ಸ್ಥಳ. ಇದು ಕೋಟೆಯಲ್ಲಿರುವಂತಹ ಎಲ್ಲಾ ಜನರು ಪ್ರಾಣಿಪಕ್ಷಿ ಹಾಗೂ ಆಶ್ರಿತರಿಗೆ ಭದ್ರತೆಯನ್ನು ಮತ್ತು ರಕ್ಷಣೆಯನ್ನು ಕೊಡುವಂತಹದ್ದು. ಅಲ್ಲದೆ ಸೈನಿಕರಿಂದ ಆವರಿಸಲ್ಪಟ್ಟ ರಕ್ಷಿತವಾದ ದೊಡ್ಡ ಸ್ಥಳ. ಒಟ್ಟಿನಲ್ಲಿ ರಕ್ಷಣೆಗಾಗಿ ಮುಡುಪಾಗಿರುವಂತಹದ್ದೇ ಕೋಟೆ. ಸಂಸ್ಕೃತ ಭಾಷೆಯಲ್ಲಿ ಸಾಮಾನ್ಯವಾಗಿ ಕೋಟೆಗೆ "ದುರ್ಗ"ಎಂದು ಕರೆಯಲಾಗಿದೆ. ಇದರ ಅರ್ಥ ದುರ್ಗದ ಸಮೀಪಕ್ಕೆ ಹೋಗುವುದು ಕಷ್ಟ ಅಥವಾ ಅದರ ಬಗ್ಗೆ ತಿಳಿದು ಕೊಳ್ಳುವುದು ಅಸಾಧ್ಯ.[1] ಅದೇ ರೀತಿ ವೈದಿಕ ಸಾಹಿತ್ಯದಲ್ಲಿ ಕೋಟೆಯನ್ನು "ಪುರ" ಎಂದು ಕರೆಯಲಾಗಿದೆ. ಅಂದರೆ ಭದ್ರವಾದಂತಹ ಕೋಟೆಯನ್ನು ಹೊಂದಿರುವ ಪಟ್ಟಣ.

ಪ್ರಾಥಮಿಕವಾಗಿ ಕೋಟೆಯು ಸೂಚಿಸುವದು ರಕ್ಷಣೆಯನ್ನು, ಇಲ್ಲಿ ಪ್ರಕೃತಿಯ ವಿಕೋಪಗಳಾದ ಮಳೆ, ಬಿಸಿಲು, ನೆರೆಹಾವಳಿ ಹಾಗೂ ಹೊರಗಿನವರ ಆಕ್ರಮಣವನ್ನು ತಡೆಗಟ್ಟಿ, ಅವರಿಗೆ ರಕ್ಷಣೆಯನ್ನು ಕೊಡುವದು. ಕೊಲಂಬಿಯಾ ವಿಶ್ವಕೋಶದಲ್ಲಿ ಕೋಟೆಯನ್ನು ಕಟ್ಟುವ ಉದ್ದೇಶವನ್ನು ಈ ರೀತಿ ವಿವರಿಸಿದೆ: ಕೆಲವು ಸಮಯದಲ್ಲಿ ಶಾಂತಿಯನ್ನು ಬಯಸುವುದಕ್ಕಾಗಿ, ರಾಜಕೀಯ ವಿಷಯಕ್ಕಾಗಿ, ಅಲ್ಲದೆ ರಾಜ್ಯದ ಔದ್ಯಮಿಕ ಸಾರಿಗೆ-ಸಂಪರ್ಕಗಳ ಅವಶ್ಯಕತೆಗಾಗಿ ಈ ಕೋಟೆಯು ಮುಖ್ಯ ಕೇಂದ್ರವಾಗಿರುತ್ತದೆ. ಕೋಟೆಯಲ್ಲಿ ಎರಡು ವಿಧಗಳಿವೆ. ಒಂದು ಶಾಶ್ವತವಾದಂತಹ ಕೋಟೆಗಳು. ಇದು ಕೋಟೆಯಲ್ಲಿ ಇರುವ ಜನರನ್ನು ರಕ್ಷಿಸುವುದು, ಎರಡನೆಯದು ರಣರಂಗದ ಕೋಟೆ. ಇದು ಸೈನ್ಯವನ್ನು ವಶಪಡಿಸಿಕೊಳ್ಳುವುದು ಮತ್ತು ಯುದ್ಧ ಸ್ಥಳವನ್ನು ರಕ್ಷಿಸುವದು. ಜಿ.ಟಿ. ಡಾಟೆ ಪ್ರಕಾರ "ಪ್ರಾಚೀನ ಕಾಲದಲ್ಲಿ ಈ ಕೋಟೆಗಳು ರಾಜಧಾನಿಯ ರಕ್ಷಣೆ ಸಲುವಾಗಿ ಇರುವಂತಹವು.[2] ಅದೇ ರೀತಿ ಯಕ್ವ್‌ರ್ ಸ್ಪೈಟ ಪ್ರಕಾರ" ವಿರೋಧಿಗಳಿಂದ ಯುದ್ಧ ತಡೆಯುವುದಕ್ಕಾಗಿ ಮತ್ತು ರಕ್ಷಣೆಗಾಗಿ ಕೋಟೆಗಳು ತುಂಬಾ ಅನುಕೂಲಕರವಾಗಿದ್ದವು.[3] ಅಲ್ಲದೆ ಯಾರ ಮೇಲೆ ಜಯ ಸಾಧಿಸಿರುತ್ತಾರೋ ಅಂತಹ ಸೋತ ಸೈನಿಕರನ್ನು ದುಃಖ ತಪ್ತರನ್ನಾಗಿ ಮಾಡುವದು, ಅವರ ಶಕ್ತಿ ಕುಂದಿಸುವುದು, ಅವರಿಗೆ ಅಡ್ಡಿ ಉಂಟುಮಾಡುವುದಕ್ಕಾಗಿ ಈ ಕೋಟೆಗಳು ತುಂಬಾ ಉಪಯೋಗವಾಗುತ್ತಿದ್ದವು.

ಹೆಚ್ಚಿನ ಸಂಖ್ಯೆಯಲ್ಲಿರುವ ಈ ಕೋಟೆಗಳ ಬಗ್ಗೆ ತುಂಬಾ ಲಕ್ಷ ಕೊಡಬೇಕಾಗುತ್ತದೆ. ಸ್ಪೈಟ ಪ್ರಕಾರ

ಇಂತಹ ಕೋಟೆಗಳು ರಾಜ್ಯದ ಶಕ್ತಿಯಲ್ಲ, ಬದಲಾಗಿ ಒಂದೇ ಒಂದು ಕೋಟೆಯು ಒಳ್ಳೆಯ ಆಯಕಟ್ಟಿನ ಸ್ಥಳದಲ್ಲಿ ಇದ್ದು, ಅದು ಯಾವುದೇ ಆಕ್ರಮಣದಿಂದ ಕಷ್ಟ ಲನುಭವಿಸಬಾರದು. ಅದಕ್ಕಾಗಿ ಒಂದು ಮಾದರಿ ಕೋಟೆಗೆ ಒಳಕೋಟೆ ಮತ್ತು ಹೊರಕೋಟೆ ಇರಬೇಕೆಂದು ಹೇಳಿದ್ದಾರೆ. ಇಲ್ಲಿ ಹೊರ ಕೋಟೆಯು ಒಳ ಕೋಟೆಯಿಂದ ತುಂಬಾ ಅಂತರದಲ್ಲಿ ಇರಬೇಕೆಂದು, ಆಕಸ್ಮಿಕವಾಗಿ ಕೆಲವೊಂದು ಸಿಡಿಮದ್ದುಗಳ ಒಡೆತದಿಂದ ಹೊರ ಕೋಟೆಗೆ ಹಾನಿಯಾಗರಬೇಕು ವಿನಃ ಒಳ ಕೋಟೆಗೆ ಹಾನಿ ಆಗಬಾರದು. ಒಟ್ಟಿನಲ್ಲಿ ಇಲ್ಲಿ ರಕ್ಷಣೆ ಅನ್ನುವದು ಒಂದು ವಿಶಿಷ್ಟ ಅಂಶವಾಗಿದೆ.

ಪ್ರಾಚೀನ ಕಾಲದ ಮಾನವನ ಬದುಕಿಗೆ ಅವಶ್ಯಕವಾದ ಅಂಶಗಳಲ್ಲಿ ಕೋಟೆ ಒಂದು. ಅಂದರೆ ಹಿಂದೆ ಯುದ್ಧಗಳು ನಡೆದಾಗ ಹೊರಗಿನ ಆಕ್ರಮಣ ತಡೆಗಟ್ಟಿಕೊಳ್ಳಲು ಕೋಟೆ ಕಟ್ಟಿಕೊಳ್ಳುವುದು ಒಂದು ರೂಢಿಯಾಗಿತ್ತು. ಅದನ್ನೇ ಒಂದು ಅಂಶವೆಂದು ಇಲ್ಲಿ ಹೇಳಲಾಗಿದೆ.

ಪ್ರಾಚೀನ ಭಾರತದ ವಾಸ್ತು ಶಾಸ್ತ್ರಗ್ರಂಥಗಳಾದ ಮಾನಸಾರ, ಮಯಾಮತ, ವಿಶ್ವಕರ್ಮ ವಾಸ್ತು, ಹಾಗೂ ಶಿಲ್ಪರತ್ನ, ಪುರಾಣಗಳಾದ ಮತ್ಸ್ಯ ಪುರಾಣ, ವಾಯು ಪುರಾಣ ಹಾಗೂ ಮಾರ್ಕಂಡೇಯ ಪುರಾಣ, ನಂತರ ಇತರ ರಾಜನೀತಿ ಸಾಹಿತ್ಯ ಕೃತಿಗಳಾದ ಕೌಟಿಲ್ಯನ ಅರ್ಥಶಾಸ್ತ್ರ, ಮನುಸ್ಮೃತಿ, ಶುಕ್ರನೀತಿಸಾರ, ಬೃಹತ್‌ಸಂಹಿತಾ, ಇತ್ಯಾದಿ ಇವುಗಳು ಕೋಟೆಯ ರಚನೆ, ವರ್ಗೀಕರಣ, ಕೋಟೆಯ ವಾಸ್ತುವಿನ ಬಗ್ಗೆ ಹೆಚ್ಚಿನ ವಿಷಯಗಳನ್ನು ಒಳಗೊಂಡಿವೆ.

ಮೇಲಿನ ಎಲ್ಲಾ ಕೃತಿಗಳಲ್ಲಿ ಕೋಟೆಗಳನ್ನು ವರ್ಗೀಕರಣ ಮಾಡಿ, ಅವುಗಳನ್ನು ಮೂರು ಅಂಶಗಳ ಮೇಲೆ ವಿಂಗಡಿಸಲಾಗಿದೆ.

(೧) ಕೋಟೆಯ ಸ್ಥಳ (೨) ಕೋಟೆಯ ತಲವಿನ್ಯಾಸ ಅಥವಾ ಆಕಾರ (೩) ಕೋಟೆಯ ರಚನೆಗೆ ಉಪಯೋಗಿಸುವ ಸಾಮಾಗ್ರಿ

೧ **ಕೌಟಿಲ್ಯನ ಅರ್ಥಶಾಸ್ತ್ರ** : ಕ್ರಿ.ಪೂ. ಮೂರನೇ ಶತಮಾನದಲ್ಲಿ ಮೌರ್ಯ ಚಕ್ರವರ್ತಿ ಚಂದ್ರಗುಪ್ತನಿಗೆ ನೆರವು ನೀಡಿ ಮೌರ್ಯ ವಂಶದ ಸ್ಥಾಪನೆಗೆ ಪರೋಕ್ಷವಾಗಿ ಕಾರಣನಾದ ಕೌಟಿಲ್ಯನು ಕೆಲವು ಕಾಲ ಚಂದ್ರಗುಪ್ತ ಮೌರ್ಯನಿಗೆ ಮಂತ್ರಿ ಆಗಿದ್ದನು. ಆ ಕಾಲದಲ್ಲಿ ಕೌಟಿಲ್ಯನು ಅರ್ಥಶಾಸ್ತ್ರ ಎಂಬ ರಾಜನೀತಿ ಗ್ರಂಥವನ್ನು ರಚಿಸಿದನು. ಈ ಗ್ರಂಥದಲ್ಲಿ 'ದುರ್ಗ ವಿಧಾನ' ಅಥವಾ ಕೋಟೆಯ ಪ್ರಕಾರಗಳನ್ನು ಕುರಿತು ಚರ್ಚಿಸಿದ್ದಾನೆ.[೪]

(ಅ) ಸ್ಥಳದ ಆಧಾರದ ಮೇಲೆ ಕೋಟೆಗಳ ವರ್ಗೀಕರಣ ಮಾಡಲಾಗಿದೆ.

(i) ಔದಕ : ನೀರಿನಿಂದ ಆವೃತವಾಗಿರುವುದು.

(ii) ಪಾರ್ವತ : ಬೆಟ್ಟಗಳಿಂದ ಸುತ್ತುವರೆದದ್ದು.

(iii) ಧಾನ್ವನ : ಮರುಭೂಮಿಯಿಂದ ಕೂಡಿದ್ದು.

(iv) ವನ : ಅರಣ್ಯಗಳಿಂದ ಆವರಿಸಿರುವುದು.

ಬ) ತಲ ವಿನ್ಯಾಸ ಅಥವಾ ಆಕಾರದಿಂದ ಕೋಟೆಯನ್ನು ಪುನಃ ಮೂರು ರೀತಿಯಲ್ಲಿ ವಿಭಜಿಸಲಾಗಿದೆ.

(i) ವೃತ್ತ : ವರ್ತುಲಾಕಾರ.

(ii) ದೀರ್ಘ ಚತುರಸ್ರ : ಆಯತಾಕಾರ.

(iii) ಚತುರಸ್ರ : ಚೌಕಾಕಾರ.

ಕೌಟಿಲ್ಯನೇ ಮೊದಲ ಬಾರಿಗೆ ಕೋಟೆಯ ಬಗ್ಗೆ ಅರಿತುಕೊಂಡು ಅದಕ್ಕೆ ಹೆಚ್ಚಿನ ಮಹತ್ವವನ್ನು ಕೊಟ್ಟಿರುವುದು ಸತ್ಯವಾದ ಸಂಗತಿ. ಅವನ ಪ್ರಕಾರ ಒಂದು ರಾಜ್ಯಕ್ಕೆ ಪ್ರಮುಖವಾದ ಸಪ್ತಾಂಗಗಳಿವೆ. ಅವುಗಳೆಂದರೆ ೧. ರಾಜ, ೨. ಅಮಾತ್ಯ, ೩. ರಾಜಧಾನಿ, ೪. ಕೋಶ, ೫. ದುರ್ಗ, ೬. ಮಿತ್ರ, ೭. ಸೈನ್ಯ, ಅವುಗಳಲ್ಲಿ ದುರ್ಗ ಅಥವಾ ಕೋಟೆ ಪ್ರಮುಖವಾದುದು. ರಾಜ್ಯದಲ್ಲಿ "ಸೈನ್ಯ ಮತ್ತು ಕೋಶ" ಭದ್ರತೆಯಿಂದ ಇರಬೇಕೆಂದರೆ ಅಲ್ಲಿ ಕೋಟೆ ಇರಬೇಕು ಎಂದು ತಿಳಿಸಿದ್ದಾನೆ. ಅಲ್ಲದೆ ಕೋಟೆಯು ರಾಜಧಾನಿ ಪಟ್ಟಣದಲ್ಲಿ ಮಾತ್ರ ಇರದೆ ಗಡಿ ಪ್ರದೇಶದಲ್ಲಿಯೂ ಇರಬೇಕೆಂದು ಸೂಚಿಸಿದ್ದಾನೆ. ಅಲ್ಲದೆ ಕೌಟಿಲ್ಯನು ಮುಂದುವರೆದು ಕೋಟೆಗೆ ಮೂರು ರೀತಿಯ ಕಂದಕಗಳಿರಬೇಕೆಂದು ತಿಳಿಸಿದ್ದಾನೆ. ಕೋಟೆಗೆ ಅಂಟಿಕೊಂಡು ಕೊತ್ತಳಗಳಿರಬೇಕು, ಅವುಗಳಿಗೆ ಮೆಟ್ಟಿಲುಗಳು ಇರಬೇಕು. ಎರಡು ಕೊತ್ತಳಗಳ ನಡುವಿನ ಅಂತರ ಮೂವತ್ತು ದಂಡಗಳು ಇರಬೇಕೆಂದು ತಿಳಿಸಿದ್ದಾನೆ. ಕೊತ್ತಳಕ್ಕೆ ಮೇಲೆ ಛಾವಣಿ ಇರಬೇಕು. ನಂತರ ವಿವಿಧ ರೀತಿಯ ರಸ್ತೆಗಳಾದ ರಥಬೀದಿ, ಆನೆಬೀದಿ, ಇತ್ಯಾದಿ ಕೋಟೆಯಲ್ಲಿ ಇರಬೇಕು ಮತ್ತು ವಿವಿಧ ಕಟ್ಟಡಗಳು, ದೇವಾಲಯಗಳು, ಉಗ್ರಾಣ, ಶಸ್ತ್ರಗಾರ ಮನೆ ಇರಬೇಕೆಂದು ಸೂಚಿಸಿದ್ದಾನೆ.

೨. ಕಾಮಂದಕನ ನೀತಿಸಾರ : ಈ ಗ್ರಂಥದಲ್ಲಿ ಸಹ ಕೋಟೆಯ ವರ್ಗೀಕರಣದ ಬಗ್ಗೆ ಚರ್ಚಿಸಲಾಗಿದೆ. ಕಾಮಂದಕನು ಸಹ ಕೋಟೆಯನ್ನು ಸ್ಥಳದ ಆಧಾರದ ಮೇಲೆ ಐದು ವಿಧವಾದ ಕೋಟೆಗಳನ್ನು ವಿಂಗಡಿಸಿದ್ದಾನೆ.[೫]

(i) ಔದಕ : ನೀರಿನಿಂದ ಆವೃತವಾಗಿರುವುದು.

(ii) ಪಾರ್ವತ : ಗುಡ್ಡಗಳಿಂದ ಸುತ್ತುವರೆದದ್ದು.

(iii) ಧಾನ್ವನ : ನೀರಿಲ್ಲದ ಒಣಭೂಮಿಯಿಂದ ಕೂಡಿದ್ದು.

(iv) ವನ : ಅರಣ್ಯಗಳಿಂದ ಸುತ್ತುವರೆದದ್ದು.

(v) ಐರಣಿ : ಹಳ್ಳಿ, ಮುಳ್ಳುಗಳು ಹಾಗೂ ಕಲ್ಲುಗಳಿಂದ ಸುತ್ತುವರೆಯಲ್ಪಟ್ಟದ್ದು.

ಭದ್ರವಾದ ಕೋಟೆ ಇಲ್ಲದ ರಾಜನು ಬಿರುಗಾಳಿಯ ಮುಂದಿನ ಮೋಡದ ತುಂಡುಗಳಿಗೆ ಸಮಾನನೆಂದು ಹೇಳಲಾಗಿದೆ.

೩. ಮನುಸ್ಮೃತಿ : ಈಗ್ರಂಥದಲ್ಲಿ ಸಹ ಕೋಟೆಯ ವಿಂಗಡನೆಯನ್ನು ಮಾಡಲಾಗಿದೆ.

ಕೋಟೆಗೆ ಉಪಯೋಗಿಸುವ ಸಾಮಗ್ರಿಗಳು ಹಾಗೂ ಸ್ಥಳದ ಆಧಾರದ ಮೇಲೆ ಆರು ವಿಧಗಳಲ್ಲಿ ಕೋಟೆಗಳನ್ನು ವಿಂಗಡಿಸಲಾಗಿದೆ.

(i) ಧನು : ಕಾಡು ಹಾಗೂ ನೀರಿಲ್ಲದ ಪ್ರದೇಶದಿಂದ ಸುತ್ತುವರಿದ ಮರುಭೂಮಿ.

(ii) ಮಹೀ : ಕಲ್ಲು ಅಥವಾ ಇಟ್ಟಿಗೆಯಿಂದ ನಿರ್ಮಿಸಿದ್ದು.

(iii) ಜಲ : ಆಳವಾದ ನೀರಿನಿಂದ ಸುತ್ತುವರೆದಿರುವುದು.

(iv) ವೃಕ್ಷ : ಎತ್ತರವಾದ ಮರಗಳು, ಮುಳ್ಳು ಗಿಡಗಳು, ಬಳ್ಳಿಗಳು ಇತ್ಯಾದಿಗಳಿಂದ ಸುತ್ತುವರೆಯಲ್ಪಟ್ಟದ್ದು.

(v) ನರ : ಆನೆ, ಕುದುರೆ, ರಥ ಮತ್ತು ಕಾಲುದಳಗಳನ್ನೊಳಗೊಂಡ ಚತುರ್ಬಲಗಳಿಂದ ರಕ್ಷಿಸಲ್ಪಟ್ಟಿರುವುದು.

v) ಗಿರಿ : ನೀರು ಮತ್ತು ಫಲ ನೀಡುವ ಮರಗಳಿಂದ ಕೂಡಿದ, ಹತ್ತಲು ಕಷ್ಟಕರವಾದ ಬೆಟ್ಟದ ಮೇಲಿನದು.

ಮನುಸ್ಮೃತಿಯು ಗಿರಿದುರ್ಗವೇ ಒಳ್ಳೆಯದೆಂದು ತಿಳಿಸುತ್ತದೆ.

೪. **ಶುಕ್ರನೀತಿಸಾರ :** ಈ ಪ್ರಾಚೀನ ಗ್ರಂಥದಲ್ಲಿ ಸಹ ಕೋಟೆಗಳ ವಿಂಗಡನೆ ಮಾಡಲಾಗಿದೆ.[೬]

ಇಲ್ಲಿ ಸ್ಥಳದ ಆಧಾರದ ಮೇಲೆ ಕೋಟೆಗಳನ್ನು ಒಂಬತ್ತು ವಿಧಗಳಲ್ಲಿ ವರ್ಗೀಕರಿಸಲಾಗಿದೆ

(i) ಪರಿಖ : ಕೋಟೆಯ ಸುತ್ತಲೂಆಳವಾದ ಕಂದಕವಿರುವುದು.

(ii) ಐರಿಣ : ಹಳ್ಳ, ಮುಳ್ಳು ಕಲ್ಲುಗಳಿಂದ ಸುತ್ತುವರೆಯಲ್ಪಟ್ಟದ್ದು.

(iii) ಪರಿಘ : ಕಲ್ಲು , ಇಟ್ಟಿಗೆ ಅಥವಾ ಮಣ್ಣಿನ ಎತ್ತರವಾದ ಗೋಡೆಗಳಿಂದ ಸಂರಕ್ಷಿಸಲ್ಪಟ್ಟಿರುವುದು.

(iv) ವನ : ಸುತ್ತಲೂ ಮುಳ್ಳಿನಿಂದ ಗುಂಪಾಗಿರುವ ಮರಗಳಿಂದಕೂಡಿರುವುದು.

(v) ಧನ್ವ : ನೀರಿಲ್ಲದ ಒಣ ಭೂಮಿ.

(vi) ಜಲ : ಕೋಟೆ ಸುತ್ತಲೂ ನೀರಿನಿಂದ ಕೂಡಿರುವುದು.

(vii) ಗಿರಿ : ಬೆಟ್ಟದ ಮೇಲಿನ ದುರ್ಗ.

(viii) ಸೈನ್ಯ : ಶಾಸ್ತ್ರಸನ್ನದ್ಧರಾದ, ಸದೃಢರಾದ ಸೈನಿಕರಿಂದ ರಕ್ಷಿಸಲ್ಪಡುವ ಸ್ಥಳ.

(ix) ಸಹಾಯ : ಬಂಧುಗಳು ಮತ್ತು ಸ್ನೇಹಿತರ ಮನೆಗಳಿಂದ ಆವೃತವಾಗಿರುವುದು.

೫. **ಬೃಹತ್ ಸಂಹಿತ :** ಈ ಗ್ರಂಥದಲ್ಲಿ ಕೋಟೆಗಳು ವಿಂಗಡನೆ ಮಾಡಲಾಗಿದೆ[೭]

ಸ್ಥಳದ ಆಧಾರದ ಮೇಲೆ ಮೂರು ವಿಧದ ಕೋಟೆಗಳನ್ನು ವಿಂಗಡಿಸಲಾಗಿದೆ.

(i) ಗಿರಿದುರ್ಗ : ಬೆಟ್ಟಗಳಿಂದ ಆವರಿಸಿದೆ.

(ii) ಸಲಿಲ ದುರ್ಗ : ನೀರಿನಿಂದ ಸುತ್ತುವರೆಯಲ್ಪಟ್ಟದ್ದು.

(iii) ಅತ್ರೀಕ್ : ಅರಣ್ಯಗಳಿಂದ ಕೂಡಿದ್ದು.

೬. **ಸೋಮದೇವಸೂರಿಯ ನೀತಿವಾಕ್ಯಾಮೃತ :** ಈ ಗ್ರಂಥದಲ್ಲಿ ಎರಡು ವಿಧಗಳಲ್ಲಿ ಕೋಟೆಗಳನ್ನು ವರ್ಗೀಕರಿಸಲಾಗಿದೆ.[೮]

(i) ಸ್ವಾಭಾವಿಕ : ಪ್ರಕೃತಿದತ್ತವಾದಂತಹ ಬೆಟ್ಟ ನೀರಿನಿಂದ ಕೂಡಿರುವಂತಹದ್ದು.

(ii) ಅಸ್ವಾಭಾವಿಕ : ಕೋಟೆಗೆ ಬೇಕಾದ ಎತ್ತರವಾದ ಗೋಡೆಗಳು, ಆಯುಧಗಳು, ಸೈನಿಕರು ಬಾಗಿಲುಗಳಿಂದ ಕೂಡಿರುವದು.

೨. **ಭೋಜನ ಯುಕ್ತಿಕಲ್ಪತರು :** ಈ ಗ್ರಂಥದಲ್ಲಿ ಕೋಟೆಯನ್ನು ಎರಡು ರೀತಿಯಾಗಿ ವರ್ಗೀಕರಿಸಲಾಗಿದೆ.[೧೦]

(i) ಕೃತ್ರಿಮ : ಅಸ್ವಾಭಾವಿಕ

(ii) ಅಕೃತ್ರಿಮ : ಸ್ವಾಭಾವಿಕ

೩. **ದುರ್ಗಸಿಂಹನ ಪಂಚತಂತ್ರ :** ಕನ್ನಡದಲ್ಲಿ ಪಂಚತಂತ್ರವನ್ನು ಬರೆದ ಕವಿ ದುರ್ಗಸಿಂಹನು ೧೧ನೇ ಶತಮಾನದಲ್ಲಿ ಕಲ್ಯಾಣ ಚಾಲುಕ್ಯ ಅರಸ ಜಗದೇಕಮಲ್ಲ ಜಯಸಿಂಹನ ಸಂಧಿವಿಗ್ರಹಿಯಾಗಿದ್ದ.[೧೧]

ಸ್ಥಳದಾಧಾರದ ಮೇಲೆ ಕೋಟೆಯನ್ನು ಎಂಟು ವಿಧಗಳಲ್ಲಿ ವಿಭಜಿಸಲಾಗಿದೆ.

೧. ಜಲದುರ್ಗ : (i) ಅಂತದ್ವೀಪ : ಎರಡು ನದಿಗಳ ಸಂಗಮದ ಮಧ್ಯದ ಕೋಟೆ.

(ii) ದೊಡ್ಡ ಕೆರೆ, ಮುಳ್ಳುಗಳಿಂದ ತುಂಬಿದ ಸರೋವರಗಳಿಂದ ಸುತ್ತುವರೆದ ಕೋಟೆ

೨. ಗಿರಿದುರ್ಗ : (i) ಗುಹ್ಯ : ಬಹಳ ಎತ್ತರವಾದ ಬೆಟ್ಟದ ತುದಿಗಳು ನಾಲ್ಕು ಕಡೆಯಿದ್ದು, ಒಂದೇ ಬಾಗಿಲುಳ್ಳ, ಕೋಟೆ.

(ii) ಪ್ರಸ್ತರ : ಎಲ್ಲಿಯೂ ಒಳ್ಳೆಯ ದಾರಿಯಿಲ್ಲದೆ, ಬೆಟ್ಟಗಳ ನಡುವೆ ನೀರು ಬೀಳುವ ಸ್ಥಳದಲ್ಲಿ ಮಾತ್ರ ಕಿರಿದಾದ ದಾರಿ ಇರುವದು.

೩. ಸ್ಥಲದುರ್ಗ : (i) ಉದಕ ಸ್ತಂಭ : ಕೋಟೆಯ ಹೊರವಲಯದಲ್ಲಿ ನೀರು, ಗಿಡ, ಮರ, ಹುಲ್ಲು, ಬಳ್ಳಿಗಳಿಲ್ಲದೆ, ಒಳಗೆ ಮಾತ್ರ ಹುಲ್ಲು ಕಡ್ಡಿ, ನೀರಿನಿಂದ ಸಮೃದ್ಧವಾಗಿರುವುದು.

(ii) ವೈರಿಣಿ : ದುರ್ಗದ ಹೊರಗೆ ಉಪ್ಪುನೀರು ಕುಡಿಯಲುಬಾರದ ನೀರು ಅಥವಾ ಸ್ವಲ್ಪ ನೀರಿರುವುದು.

೪. ವನದುರ್ಗ : (i) ಕರ್ದಮೋದಕ : ಸುತ್ತ ನೀರು ತುಂಬಿದ ಜಲಾಶಯವಿದ್ದು, ಹೆದರಿಸುವಷ್ಟು ಅತಿಶೀತಲವಾದ ಕೆಸರುಳ್ಳದ್ದು

(ii) ಸ್ತಂಬಗಹನ : ಅನೇಕ ಮರಗಳಿಂದ ಪರಿವೃತವಾಗಿ, ಸುತ್ತಲೂ ಹುಲ್ಲು ಯಥೇಚ್ಛವಾಗಿ ಬೆಳೆದಿರುವದು.

೯. **ಮಾನಸೋಲ್ಲಾಸ ಅಥವಾ ಅಭಿಲಷಿತಾರ್ಥ ಚಿಂತಾಮಣಿ :** ಕಲ್ಯಾಣ ಚಾಲುಕ್ಯ ಅರಸ ಮೂರನೇ ಸೋಮೇಶ್ವರನು (ಕ್ರಿ.ಶ. ೧೧೨೭-೧೧೩೯) ಮಾನಸೋಲ್ಲಾಸ ಎಂಬ ಗ್ರಂಥದಲ್ಲಿ ಕೋಟೆಗಳ ವಿಧಗಳ ಬಗ್ಗೆ ವಿವರಿಸಿದ್ದಾನೆ.[೨]

ಇಲ್ಲಿ ಸ್ಥಳದ ಆಧಾರದ ಮೇಲೆ ಕೋಟೆಗಳನ್ನು ಒಂಬತ್ತು ವಿಧಗಳಲ್ಲಿ ವರ್ಗೀಕರಿಸಲಾಗಿದೆ.

(i) ಜಲದುರ್ಗ : ನೀರಿನಿಂದ ಆವರಿಸಿರುವುದು.

(ii) ಗಿರಿದುರ್ಗ : ಬೆಟ್ಟದ ಮೇಲಿನದು.

(iii) ಪಾಷಾಣ ದುರ್ಗ : ಬಂಡೆಗಳಿಂದ ಕಟ್ಟಿರುವುದು.

(vi) ಇಷ್ಟಕ ದುರ್ಗ : ಇಟ್ಟಿಗೆಗಳಿಂದ ಕಟ್ಟಿರುವುದು.

(v) ಮೃತ್ತಿಕಾಮಯಮ್ : ಮಣ್ಣಿನಿಂದ ನಿರ್ಮಿಸಿರುವುದು.

(vi) ವನದುರ್ಗ : ದಟ್ಟವಾದ ಮುಳ್ಳುಮರಗಳಿಂದ ಆವರಿಸಿರುವುದು.

(vii) ಮರದುರ್ಗ : ಕೋಟೆಯೊಳಗೆ ಸಾಕಷ್ಟು ನೀರನ್ನು ಸಂಗ್ರಹಿಸಿ ಮರುಭೂಮಿಯಲ್ಲಿ ಕಟ್ಟಿರುವುದು.

(viii) ದಾರುಮಯ ದುರ್ಗ : ಮರ ಮತ್ತು ಬಂಬುಗಳಿಂದ ತಯಾರಿಸಿರುವುದು.

(ix) ನರದುರ್ಗ : ಸುತ್ತಲೂ ಶಸ್ತ್ರಸಜ್ಜಿತರಾದ ಯೋಧರನ್ನು ನಿಲ್ಲಿಸಿ ನಿರ್ಮಿಸಿರುವುದು.

೧೦. **ಪುರಾಣಗಳು :** ಹದಿನೆಂಟು ಪುರಾಣಗಳ ಪೈಕಿ ಮತ್ಸ್ಯ ಪುರಾಣ, ವಾಯು ಪುರಾಣ, ಮಾರ್ಕಂಡೆಯ ಪುರಾಣ, ವಿಷ್ಣು ಪುರಾಣ ಕೋಟೆಗಳ ಬಗ್ಗೆ ಮಾಹಿತಿಯನ್ನು ನೀಡಿವೆ. ಮತ್ಸ್ಯ ಪುರಾಣವು ಆರು ಪ್ರಕಾರದ ಕೋಟೆಗಳನ್ನು ಉಲ್ಲೇಖಿಸಿದೆ.[೩]

(i) ಧನುದುರ್ಗ : ಕಾಡು ಮತ್ತು ನೀರಿಲ್ಲದ ಪ್ರದೇಶದಿಂದ ಸುತ್ತುವರೆದ ಮರಳುಭೂಮಿ.

(ii) ಮಹಿದುರ್ಗ : ಕಲ್ಲು ಹಾಗೂ ಇಟ್ಟಿಗೆಯಿಂದ ಕಟ್ಟಿರುವುದು.

(iii) ನರದುರ್ಗ : ಆನೆ,ಕುದುರೆ, ರಥ, ಕಾಲುದಳಗಳನ್ನೊಳಗೊಂಡ ರಕ್ಷಣಾಸ್ಥಳ.

(iv) ವೃಕ್ಷದುರ್ಗ : ಎತ್ತರವಾದ ಮರಗಳು, ಮುಳ್ಳುಗಿಡಗಳು, ಇತ್ಯಾದಿ ಸುತ್ತುವರೆದದ್ದು.

(v) ಜಲದುರ್ಗ : ನೀರಿನಿಂದ ಆವರಿಸಿರುವುದು.

(vi) ಗಿರಿದುರ್ಗ : ಬೆಟ್ಟಗಳಿಂದ ಆವರಿಸಿರುವುದು.

೧೧. **ಮಾನಸಾರ :** ಈ ಗ್ರಂಥದಲ್ಲಿ ಗ್ರಾಮ ಮತ್ತು ನಗರ ವಿನ್ಯಾಸಗಳನ್ನು ಎಂಟು ಮಾದರಿಯಲ್ಲಿ ವಿಂಗಡಿಸಲಾಗಿದೆ. ಇಲ್ಲಿ ರಕ್ಷಣೆಗಾಗಿ ಕೋಟೆಯಲ್ಲಿ ಗೋಡೆ, ಬಾಗಿಲು ಗೋಪುರಗಳನ್ನು ಅಳವಡಿಸಲಾಗಿದೆ. ಪಟ್ಟಣ ಮತ್ತು ಕೋಟೆ ಎಂಬುದು ಇಲ್ಲಿ ಒಂದೇ ಆಗಿದೆ. ಎರಡರಲ್ಲೂ ವ್ಯತ್ಯಾಸ ಕಂಡು ಬರುವುದಿಲ್ಲ.[೧೪]

(i) ದಂಡಕ : ಪಟ್ಟಣವು ಚತುರ್ಮುಖವಾಗಿದ್ದು ಗೋಡೆಗಳು ಚೌಕಾಕಾರ, ನಾಲ್ಕು ಕಡೆ ಬಾಗಿಲುಗಳು, ಚಿಕ್ಕ ಬಾಗಿಲುಗಳು ಪ್ರತಿಯೊಂದು ಮೂಲೆಗೂ ಇರಬೇಕು. ಈಶಾನ್ಯಕ್ಕೆ ಶಿವನ ದೇವಾಲಯ ಉತ್ತರಕ್ಕೆ ಚಾಮುಂಡಿ ಇರಬೇಕು.

(ii) ಸರ್ವತೋಭದ್ರ : ಚತುರ್ಮುಖ ಆಕಾರದಲ್ಲಿದ್ದು ಸುತ್ತಲೂ ಕಂದಕ ಮತ್ತು ನಾಲ್ಕು ದೊಡ್ಡ ಹಾಗೂ ಚಿಕ್ಕ ಬಾಗಿಲುಗಳು ಮೂಲೆಯಲ್ಲಿರಬೇಕು.

(iii) ನಂದ್ಯಾವರ್ತ : ದೀರ್ಘ ಚತುಷ್ಕೋಣವಾಗಿದ್ದು ಒಳಗೆ ನಾಲ್ಕು ಭಾಗಗಳನ್ನಾಗಿ ಮಾಡಿ ಪ್ರತಿಯೊಂದಕ್ಕೂ ಮೂರರಿಂದ ಏಳು ಬೀದಿಗಳು ಇರುತ್ತಿದ್ದವು.

(iv) ಪದ್ಮಕ : ಕೋಟೆಗೆ ಗೋಡೆ, ಕಂದಕ ಮತ್ತು ಇದಕ್ಕೆ ನಾಲ್ಕು ಮೂರ್ತಿಗಳು ಎಂಟು, ಹನ್ನೆರಡು ಅಥವಾ ಹದಿನಾರು ಮುಖಗಳು ಇದ್ದು ನೋಡಿದರೆ ಚೌಕಾಕಾರ, ವೃತ್ತಾಕಾರದಲ್ಲಿ ಕಾಣುವುದು.

(v) ಸ್ವಸ್ತಿಕ : ಇಲ್ಲಿ ಕಂದಕ, ಗೋಡೆ, ಎರಡೆರಡು ಬಾಗಿಲುಗಳನ್ನು ಒಳಗೊಂಡಿದೆ.

(vi) ಪ್ರಸ್ತರ : ಚೌಕ ಅಥವಾ ಆಯತಾಕಾರ ಇರಬೇಕು, ಬದಲಾಗಿ ವೃತ್ತಾಕಾರದಲ್ಲಿ ಇರಬಾರದು. ಇಲ್ಲಿ ನಾಲ್ಕು ಮಧ್ಯದ ಬಾಗಿಲುಗಳು ಇರುತ್ತವೆ.

(vii) ಕರಮುಖ : ಇದು ಅರ್ಧ ವೃತ್ತಾಕಾರದಲ್ಲಿರುವುದು.

(viii) ಚತುರ್ಮುಖ : ನಾಲ್ಕು ಮುಖದ ಬಾಗಿಲುಗಳು ಅವು ಚೌಕ ಅಥವಾ ಆಯತಾಕಾರದಲ್ಲಿರಬಹುದು.

ಪುನಃ ಮಾನಸಾರ ಗ್ರಂಥದಲ್ಲಿ ಕಾರ್ಯ, ಸ್ವರೂಪ, ಅಥವಾ ಊರುಗಳನ್ನು ಆಧಾರವಾಗಿಟ್ಟುಕೊಂಡು ಕೋಟೆಯನ್ನು ಎಂಟು ವಿಧದಲ್ಲಿ ವಿಂಗಡಿಸಲಾಗಿದೆ.[೧೫]

(i) ಶಿಬಿರ : ರಾಜನ ಬೀಡು.

(ii) ಸ್ಥಾನಿಯ : ರಾಜಧಾನಿ.

(iii) ದ್ರೋಣಕ : ನೀರಿನ ಸಮೀಪ ಇರುವುದು.

(iv) ವಾಹಿನೀಮುಖ : ಯುದ್ಧ ಭೂಮಿಯಿಂದ ದೂರ ಇರುವ ಸೈನ್ಯ ನೆಲೆ.

(v) ಸಂವಿದ್ದ : ಜಯವನ್ನು ಕೊಡುವುದು.

(vi) ಕೋಲಕ : ಪರ್ವತಮಯ ಪ್ರದೇಶ. ದುರ್ಗಮವಾದದ್ದು.

(vii) ನಿಗಮ : ಕಾವಲುಗಾಗಿ ನಿರ್ಮಿಸಿರುವುದು.

(viii) ಸ್ಕಂದಾವರ : ಸೈನ್ಯದ ಬೀಡು.

ಮುಂದುವರೆದ ನಂತರ ಮಾನಸಾರ ಗ್ರಂಥವು ಸೈನಿಕ ವಾಸ್ತು ದೃಷ್ಟಿಯಿಂದ ಮತ್ತೆ ಏಳು ಪ್ರಕಾರಗಳಲ್ಲಿ ಕೋಟೆಗಳನ್ನು ವಿಂಗಡಿಸಿದೆ.[೧೬]

(i) ಗಿರಿದುರ್ಗ : ಬೆಟ್ಟದ ಮೇಲಿರುವುದು.

(ii) ವನದುರ್ಗ : ಅರಣ್ಯದುರ್ಗ.

(iii) ಜಲದುರ್ಗ : ನೀರಿನ ಮಧ್ಯದಲ್ಲಿರುವುದು.

(iv) ಪಂಕದುರ್ಗ : ಮಣ್ಣಿನದುರ್ಗ.

(v) ರಥ ದುರ್ಗ : ಯುದ್ಧ ಭೂಮಿಯಲ್ಲಿ ರಥಗಳ ದುರ್ಗ.

(vi) ದೇವದುರ್ಗ : ಮಂತ್ರಗಳ ಮೂಲಕ ದೇವರು ರಕ್ಷಿಸುವ ದುರ್ಗ.

(vii) ಮಿಶ್ರದುರ್ಗ : ಮೇಲಿನ ಒಂದಕ್ಕಿಂತ ಹೆಚ್ಚು ಅಂಶಗಳನ್ನು ಒಳಗೊಂಡಕೋಟೆ.

**೧೨. ಮಾಯಮತ :** ಈ ಗ್ರಂಥದಲ್ಲಿ ಪಟ್ಟಣಗಳಲ್ಲಿರುವ ಕೋಟೆಗಳನ್ನು ಹದಿನಾಲ್ಕು ವಿಧವಾಗಿ ವಿಂಗಡಿಸಲಾಗಿದೆ.[೧೭]

(i) ಗ್ರಾಮ, (ii) ಖೇಟಕ, (iii) ಕರ್ವಕ, (iv) ದುರ್ಗ, (v) ನಗರ, (vi) ರಾಜಧಾನಿ, (vii) ಪಟ್ಟಣ, (viii) ದ್ರೋಣಕ, (ix) ಶಿಬಿರ, (x) ಸ್ಕಂದವರ, (xi) ಸ್ಥಾನಿಯ, (xii) ವಿಹಂಬಿಕಾ, (xiii) ನಿಗಮ, (xiiii) ಸಕಾನಗರ

ಮಾಯಮತ ಗ್ರಂಥವು ಮತ್ತೆ ಕೋಟೆಯನ್ನು ಆಕಾರದ ಆಧಾರದ ಮೇಲೆ ಐದು ವಿಧದಲ್ಲಿ ವಿಂಗಡಿಸಿದೆ.[೧೮]

(i) ಚತುರಸ್ರ.

(ii) ದೀರ್ಘ ಚತುರಸ್ರ.

(iii) ವೃತ್ತ.

(iv) ವೃತ್ತಾಯತ.

(v) ಗೋಲವೃತ್ತಾ.

ಪುನಃ ಈ ಗ್ರಂಥವು ಗಾತ್ರದ ಆಧಾರದ ಮೇಲೆ ಮೂರು ವಿಧದಲ್ಲಿ ಕೋಟೆಗಳನ್ನು ವರ್ಗೀಕರಿಸಿದೆ.[೧೯]

(i) ಚಿಕ್ಕದು : 604 (ದಂಡಅಳತೆಯಲ್ಲಿ).

(ii) ಮಧ್ಯಮ : 704 (ದಂಡಅಳತೆಯಲ್ಲಿ).

(iii) ದೊಡ್ಡದು : 768 (ದಂಡಅಳತೆಯಲ್ಲಿ).

೧೩. ವಿಶ್ವಕರ್ಮ ವಾಸ್ತು : ವಾಸ್ತು ಗ್ರಂಥಗಳಲ್ಲಿ ಪ್ರಮುಖವಾದ ಗ್ರಂಥದಲ್ಲಿ ಕೋಟೆಯ ಪ್ರಕಾರಗಳನ್ನು ತಿಳಿಸಿದೆ.

ಸ್ಥಳದ ಆಯ್ಕೆಯ ಮೇಲೆ ಕೋಟೆಯನ್ನು ಹನ್ನೆರಡು ವಿಧದಲ್ಲಿ ವರ್ಗೀಕರಿಸಲಾಗಿದೆ.[೨೦]

(i) ಗಿರಿದುರ್ಗ : ಬೆಟ್ಟದ ಮೇಲಿರುವುದು. ಇದರಲ್ಲಿ ಪುನಃ ಮೂರು ವಿಧಗಳಿವೆ. ಗಿರಿಸನು, ಗಿರಿಮರ್ಥ್ಯ, ಗಿರಿಮರ್ದನಿ.

(ii) ವನದುರ್ಗ : ಅರಣ್ಯದಲ್ಲಿರುವುದು,ಇದರಲ್ಲಿ ಕೂಡ ಮೂರು ವಿಧಗಳಿವೆ. ಊರ್ದ್ವ, ಭೂದುರ್ಗ, ಅಂತಸ್ತ,

(iii) ಸಲಿಲ ದುರ್ಗ : ಸುತ್ತಲೂ ನೀರಿನಿಂದ ಕೂಡಿರುವುದು.

(iv) ಐರಣಿ : ಸುತ್ತಲೂ ಮರಳಿನಿಂದ ಕೂಡಿರುವುದು.

(v) ದೈವತ : ಪ್ರಕೃತ್ತಿದತ್ತವಾಗಿ ಕಣಿವೆ,ಕಂಟಕಗಳಿಂದ ಕೂಡಿರುವುದು.

(vi) ಏಕಮುಖ, ದ್ವಿಮುಖ ಮತ್ತು ಚತುರ್ಮುಖ : ಇದನ್ನು ನದಿಯ ದಂಡೆಯ ಅಥವಾ ಇಳಿಜಾರಿನ ಬೆಟ್ಟದಲ್ಲಿ ನಿರ್ಮಿಸುವುದು. ಇದು ಚೌಕಾಕಾರವಾಗಿದ್ದು, ಒಂದೇ ಒಂದು ಬಾಗಿಲು ಇರಬೇಕು. ಅಲ್ಲದೆ ಒಂದು ಕಂದಕವನ್ನು ಹೊಂದಿರಬೇಕು. ಹೆಚ್ಚಿನ ಸೈನಿಕರು, ಎತ್ತರವಾದ ಬಾಗಿಲುಗಳು ಮತ್ತು ಗೋಡೆಗಳು, ಮಧ್ಯದಲ್ಲಿ ರಾಜನ ಅರಮನೆ ಮಂತ್ರಿಗಳ ಮನೆಗಳು ಇತ್ಯಾದಿ ಜೊತೆಗೆ ಉಗ್ರಾಣವನ್ನು ಹೊಂದಿರಬೇಕು. ಅಸಂಖ್ಯಾತ ಕಾವಲು ಗೋಪುರಗಳು ಇರಬೇಕು. ಇಲ್ಲಿ ಪೂರ್ವಕ್ಕೆ ಒಂದೇ ಬಾಗಿಲು ಇದ್ದು, ಕೆಲವು ಸಮಯ ಎರಡು ಬಾಗಿಲು ಇರಬಹುದು. ಒಂದು ಉತ್ತರಕ್ಕೆ ಮತ್ತೊಂದು ದಕ್ಷಿಣಕ್ಕೆ ಬಾಗಿಲು ಇರಬೇಕು. ಇಲ್ಲಿ ನಾಲ್ಕು ಬಾಗಿಲುಗಳಿದ್ದು, ನಾಲ್ಕು ದಿಕ್ಕಿನಲ್ಲಿ ಇರಬೇಕು. ಗೋಡೆಗಳಿಗೆ ಮೆಟ್ಟಿಲುಗಳನ್ನು ಕಟ್ಟಿರಬೇಕೆಂದು ಹೇಳಲಾಗಿದೆ.

(vii) ಕರಮುಖಿ (ಬಿಲ್ಲಿನಾಕಾರ) : ಇದನ್ನು ಅರಣ್ಯದ ಅಥವಾ ಬೆಟ್ಟದ ಮಧ್ಯದಲ್ಲಿ ಕಲ್ಲಿನಿಂದ ಅಥವಾ ಇಟ್ಟಿಗೆಯಿಂದ ನಿರ್ಮಿಸುವುದು.

(viii) ಪ್ರಭುದುರ್ಗ : ಇದನ್ನು ಬೆಟ್ಟದ ಇಳಿಜಾರಿನಲ್ಲಿ ಕಟ್ಟಬೇಕು. ಸುಲಭವಾಗಿ ಯಾರು ಹತ್ತಿರಕ್ಕೆ ಹೋಗಿರ ಕೂಡದು. ಸುತ್ತಲೂ ಆಳವಾದ ಕಂದಕ ಇದ್ದು ಇಲ್ಲಿ ಒಂದೇ ಒಂದು ಮುಖ್ಯ ಬಾಗಿಲು ಮತ್ತು ಹನ್ನೆರಡು ಗೋಡೆಗಳು ಇದ್ದು, ಒಳಗೆ ಕಾವಲು ಗೋಪುರ ಕೊತ್ತಳಗಳನ್ನು ಒಳಗೊಂಡಿರಬೇಕು. ಈ ಕೋಟೆಯು ನಾಲ್ಕು ಮುಖಗಳನ್ನು ಹೊಂದಿರಬೇಕು. ಇಲ್ಲಿ ಪ್ರತೋಲಿಕ ಮತ್ತು ಸತ್‌ಗಸೀಸ್ ಎಂಬ ಮುಖ್ಯ ಪ್ರವೇಶ ದ್ವಾರಗಳು ಇದ್ದು, ಒಂದು ಪೂರ್ವಕ್ಕೆ ಮತ್ತೊಂದು ಉತ್ತರಕ್ಕೆ ಇರಬೇಕು.

(ix) ಯುದ್ಧ ದುರ್ಗ : ಸುರಕ್ಷಿತವಾದಂತಹ ಸ್ಥಳದಲ್ಲಿ ಶತ್ರುವಿನ ಮೇಲೆ ದಾಳಿ ಮಾಡುವುದು. ಈ ಸ್ಥಳವು ಆರು ಅಥವಾ ಎಂಟು ಮೂಲೆಯಲ್ಲಿರುವುದು ಸೂಕ್ತವಾಗುವುದು.

೧೪. ಶಿಲ್ಪರತ್ನ : ಈ ವಾಸ್ತುಗ್ರಂಥದಲ್ಲಿ ಕೋಟೆಗಳನ್ನು ಸ್ಥಳಗಳ ಆಧಾರದ ಮೇಲೆ ಪಲು ವಿಧಗಳಲ್ಲಿ ವಿಂಗಡಿಸಿದೆ.[೨೦]

(i) ಗಿರಿದುರ್ಗ : ಬೆಟ್ಟದ ಮೇಲಿರುವುದು.

(ii) ಅರಣ್ಯದುರ್ಗ : ವನದ ನಡುವೆ ಇರುವುದು.

(iii) ಜಲದುರ್ಗ : ನೀರಿನ ನಡುವೆ ಇರುವುದು.

(iv) ದೈವಿಕದುರ್ಗ : ಇಂದ್ರ, ವರುಣ, ಗುಹಾ, ಜಯಂತ ಇತ್ಯಾದಿ ದೈವಿಗಳು ಕೋಟೆ ರಕ್ಷಿಸುವರು.

(v) ಧಾನ್ವದುರ್ಗ : ನೀರಿಲ್ಲದ ಪ್ರದೇಶ.

(vi) ಕೃತ್ರಿಮದುರ್ಗ : ಸ್ವಾಭಾವಿಕವಾಗಿಲ್ಲದ್ದು.

ಪುನಃ ಈ ಶಿಲ್ಪರತ್ನ ಗ್ರಂಥದಲ್ಲಿ ಆಕಾರದ ಆಧಾರದ ಮೇಲೆ ಕೋಟೆಯನ್ನು ನಾಲ್ಕು ವಿಧದಲ್ಲಿ ವಿಂಗಡಿಸಿದೆ.[೨೨]

(i) ತ್ರಿಕೋನಾಕಾರ.

(ii) ಚೌಕಾಕಾರ.

(iii) ವೃತ್ತಾಕಾರ.

(iv) ಆಯತಾಕಾರ.

ಪ್ರಾಚೀನ ಕಾಲದ ಕೋಟೆಗಳ ರಚನೆಯನ್ನು ಶಾಸನಗಳಿಗಿಂತ ಹೆಚ್ಚಾಗಿ ಕಾವ್ಯಗಳಿಂದ ಅಮೂಲ್ಯವಾದ ಸಹಾಯವು ಒದಗುತ್ತದೆ. ಹರಿಹರನ ಗಿರಿಜಾ ಕಲ್ಯಾಣದಲ್ಲಿ ಕೋಟೆಯ ವರ್ಣನೆಯು ಈ ರೀತಿ ಇದೆ.[೨೨]

> ಪಳಕಿನ ಕೋಂಟೆ ಬಟ್ಟದೆನೆ ಬೇವಿನ ದಂಡೆ ನಭಕ್ಕೆ ಮೀಱುವ
> ಟ್ಟಳೆ ನಿಮಿರ್ದೇಱು ಪಾಱುವ ಪತಾಕೆ ವಿರಾಜಿತ ಗೊಂಟು ಗೊಂಟನೊಳ್
> ಬಳಸಿದ ಕೊತ್ತಳಂ ಸೊಗಯಿಪಾಳ್ವೆರಿ ಡೆಂಕಣಿ ಸಾರಮಾರಿಯ
> ಗ್ಗಳಲಿಸುವಗೋಪುರಂ ಪುಲಿಮೊಗಂ ಮೆಱಗುಂ ಪುರದೊಳ್ ನಿರಂತರ ॥

ಹಳೆಗನ್ನಡದ ಕೋಂಟೆಯೇ ಹೊಸಗನ್ನಡದ ಕೋಟೆ. 'ಪಳಕಿನ' (=ಸ್ಪಟಿಕದ) ಕೋಟೆ ಎಂಬುದು ಕವಿಯ ಕಲ್ಪನೆ. ಬಟ್ಟ ಅಥವಾ ವೃತ್ತಾಕಾರವಾಗಿರುವ ತೆನೆ ಎಂಬುದು ಕೋಟೆಯ ಗೋಡೆಯ ಮೇಲೆ ಉದ್ದಕ್ಕೂ ಕಟ್ಟಿರುವ ತೆನೆ ಯಾಕಾರದ ರಚನೆಗಳನ್ನು ಸೂಚಿಸುತ್ತದೆ. ಗೋಡೆಯ ಮೇಲೆ ಇಂತಹ ಸಾವಿರಾರು ತೆನೆಗಳನ್ನಿ ಉದ್ದಕ್ಕೂ ಅಕ್ಕ-ಪಕ್ಕದಲ್ಲಿ ಕಟ್ಟಿರುತ್ತಾರೆ. ತೆನೆಗಳು ಕೋಟೆಗೆ ಅಂದವನ್ನು ತಂದು ಕೊಡುವುದಲ್ಲದೆ ಎರಡು ತೆನೆಗಳ ಮಧ್ಯ ತಲೆ ಹಾಕಿ ಕೆಳಕ್ಕೆ ಇಣುಕು ನೋಡಿ, ಅವುಗಳ ಹಿಂದೆ ಕುಳಿತು ಅಂಬುಗಂಡಿಯಿಂದ ಬಾಣಗಳನ್ನು ಬಿಡಬಹುದಿತ್ತು. ಬೇವಿನ ದಂಡೆಗೂ ಬೇವಿನ ಸೊಪ್ಪಿನ ಮಾಲೆಗೂ ಯಾವ ಸಂಬಂದವೂ ಇಲ್ಲ. ಅದು ಬೇವಿನವರಿಗೆ ಅಥವಾ ಕಾವಲುಗಾರರಿಗೆ ಸಂಬಂಧಿಸಿದ ಸ್ಥಳವಿರಬೇಕು. ಅವರು ವಿಶ್ರಾಂತಿ ತೆಗೆದು ಕೊಳ್ಳುತ್ತಿದ್ದ ಸ್ಥಳ ವಿದ್ದರೂ ಇರಬಹುದು. ಅಟ್ಟಳೆಗಳು ಕೋಟೆಯ ಗೋಡೆಯ ಮೇಲೆ ಎತ್ತರಕ್ಕೆ ಕಟ್ಟಿದ ವೇದಿಕೆಗಳು. ಇವು ಒಂದು ರೀತಿಯಲ್ಲಿ ವೀಕ್ಷಣ ಕೇಂದ್ರಗಳಿದ್ದಂತೆ. ಅಟ್ಟಳೆಗಳ ಮೇಲೆ ಧ್ವಜಗಳು ಹಾರುತ್ತಿದ್ದವು. ಗೊಂಟು ಎಂಬುದು ಬಹುಶಃ ಕೋಟೆಯ ಗೋಡೆಗಳು ಸಂಧಿಸುವ ಸ್ಥಳ. ಅಂತಹ ಸ್ಥಾನಗಳಲ್ಲಿ ಅಟ್ಟಳೆಗಳಿಗಿಂತ ಎತ್ತರವಾಗಿ ಕಟ್ಟಿದ ವೀಕ್ಷಣ ಕೇಂದ್ರಗಳೇ ಕೊತ್ತಳಗಳು. ಕೋಟೆಯ ನಾಲ್ಕು ಅಥವಾ ಎಂಟು ದಿಕ್ಕುಗಳಲ್ಲಿಯೂ ಒಂದೊಂದು ಕೊತ್ತಳವಿರುತ್ತಿತ್ತು. ಆಳ್ವೆರಿ(ಪ್ರಾಕಾರ)ಕೋಟೆಯ ಗೋಡೆಯನ್ನು ಸೂಚಿಸುತ್ತದೆ. ಡೆಂಕಣಿ ಎಂಬುದು ಕನ್ನಡ ಕೋಶಕಾರರು ಹೇಳುವ ಧ್ವಜಸ್ತಂಭವಲ್ಲವೆಂದೂ, 'ಅದೊಂದು ಭವ್ಯವಾದ ಆಯುಧ ವಿಶೇಷವೆಂದೂ ಬೆಟಗೇರಿ ಕೃಷ್ಣಶರ್ಮರು ಸಾದರವಾಗಿ ಪ್ರತಿಪಾದಿಸಿದ್ದಾರೆ.[೨೩] ಇವು ಮುಗಿಲೆಡೆ ಮುಖಮಾಡಿ ನಿಂತಿರುತ್ತಿದ್ದವು. ಯುದ್ಧ ಸಮಯದಲ್ಲಿ ಇವುಗಳನ್ನು ನೆಲದ ಕಡೆ ಬಾಗಿಸುತ್ತಿದ್ದರು. ಇವುಗಳ ಸ್ವರೂಪವೇನೆಂಬುದು ಮಾತ್ರ ಗೊತ್ತಾಗುವುದಿಲ್ಲ. ಸಾರ ಎನ್ನುವುದು ಕೋಟೆಯನ್ನು ಹತ್ತುವುದಕ್ಕೆ ಶತ್ರುಗಳು ಬಳಸಿಕೊಳ್ಳುತ್ತಿದ್ದ ಸಾಧನ. ಅದನ್ನು ನಾಶಪಡಿಸಲು ಬಳಸುತ್ತಿದ್ದ ಒಂದು ಸಾಧನ ವಿಶೇಷವೇ ಸಾರಮಾರಿಯಿರಬೇಕು.[೨೪] ಗೋಪುರ ಎನ್ನುವುದರ ಅರ್ಥ ಸ್ಪಷ್ಟವೇ. ಪುಲಿಮೊಗ ಎಂಬುದು ಕೋಟೆಯ ಹೆಬ್ಬಾಗಿಲಿಗೆ ಹೆಸರು.[೨೫] ಕೋಟೆಯ ಸುತ್ತಲೂ ಆಳವಾದ ಕಂದಕವಿರುತ್ತಿತ್ತು. ಇಷ್ಟು ಕರ್ನಾಟಕದ ಕೋಟೆಯ ಒಂದು ಸ್ಥೂಲವಾದ ಚಿತ್ರ.

ಕರ್ನಾಟಕದ ಶಾಸನಗಳು ಮೂರು ರೀತಿಯ ಬುರ್ಗಗಳನ್ನು ಉಲ್ಲೇಖಿಸಿವೆ.[೨೨]

(i) ಗಿರಿದುರ್ಗ : ಬೆಟ್ಟದ ಮೇಲಿರುವುದು.

(ii) ವನದುರ್ಗ : ಅರಣ್ಯದ ಮಧ್ಯದಲ್ಲಿ ಇರುವುದು.

(iii) ಜಲದುರ್ಗ : ನೀರಿನ ನಡುವೆ ಇರುವುದು.

ಮೇಲೆ ನೋಡಿದಂತೆ ಎಲ್ಲಾ ಶಾಸ್ತ್ರ ಗ್ರಂಥಗಳು ಕೋಟೆಗಳನ್ನು ವರ್ಗೀಕರಿಸಿ, ಒಂದು ಕೋಟೆಯು ಯಾವ ರೀತಿ ರಚನೆಯಾಗಿರಬೇಕೆಂಬುದನ್ನು ತಿಳಿಸಿವೆ. ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಯ ಕೋಟೆಗಳು ಸಹ ವಿವಿಧ ರೀತಿಯ ಆಕಾರ, ಗಾತ್ರ ಮತ್ತು ಆಯಕಟ್ಟಿನ ಸ್ಥಳಗಳನ್ನು ಹೊಂದಿರುವುನ್ನು ನಾವು ನೋಡಬಹುದು.

ರಾಯಚೂರು ಕೋಟೆಯನ್ನು ಸ್ಥಳದ ಆಯ್ಕೆಯಿಂದ ನೆಲದ ಮಟ್ಟದಿಂದ ಹಿಡಿದು ಬೆಟ್ಟದವರೆಗೆ ಕಟ್ಟಿದ್ದಾರೆ. ಇದು ವರ್ತುಲಾಕಾರವನ್ನು ಪಡೆದಿದೆ. ಅದೇ ರೀತಿ ಮುದುಗಲ್ಲು ಕೋಟೆಯು ಸ್ಥಳದ ಆಯ್ಕೆಯಿಂದ ಸ್ಥಲ ದುರ್ಗವಾಗಿದೆ. ಇದು ಆಯತಾಕಾರದ ರೂಪ ಹೊಂದಿದೆ. ಮುಂದೆ ಮಲಿಯಾಬಾದ ಕೋಟೆಯು ಸ್ಥಳದ ಆಯ್ಕೆಯಿಂದ ಸ್ಥಲದುರ್ಗವಾಗಿದೆ. ಇದು ಆಯತಾಕಾರವಾಗಿದೆ. ನಂತರ ಜಲದುರ್ಗವು ಹೆಸರೇ ಸೂಚಿಸುವಂತೆ ಇದರ ಸುತ್ತಲೂ ನೀರಿದ್ದು, ನಡುವೆ ಕೋಟೆ ಇದೆ. ಇದಕ್ಕೆ ನಿರ್ದಿಷ್ಟ ಆಕಾರ ಇಲ್ಲ. ಕೊಪ್ಪಳ ಕೋಟೆಯನ್ನು ಸ್ಥಳದ ಆಯ್ಕೆಯಿಂದ ನೆಲದ ಮಟ್ಟದಲ್ಲಿ ಮತ್ತು ಬೆಟ್ಟದ ಮೇಲೆ ಕಟ್ಟಿದ್ದಾರೆ. ಇದು ಸ್ಥಲದುರ್ಗ ಹಾಗೂ ಗಿರಿದುರ್ಗವಾಗಿದೆ. ಇದಕ್ಕೆ ನಿರ್ದಿಷ್ಟ ಆಕಾರ ಇಲ್ಲ. ಬಹಾದ್ದೂರಬಂಡ ಕೋಟೆಯು ಸ್ಥಳದ ಆಯ್ಕೆಯಿಂದ ಇದು ಗಿರಿದುರ್ಗವಾಗಿದೆ. ಇದು ವರ್ತುಲಾಕಾರಗಲ್ಲಿದೆ. ಇರಕಲಗಡ ಕೋಟೆ ಸ್ಥಳದ ಆಯ್ಕೆಯಿಂದ ಗಿರಿದುರ್ಗ ವಾಗಿದೆ. ಇದಕ್ಕೆ ನಿರ್ದಿಷ್ಟ ಆಕಾರ ಇಲ್ಲ. ಶಿವಪುರ ಕೋಟೆಯು ಸ್ಥಳದ ಆಯ್ಕೆಯಿಂದ ಗಿರಿದುರ್ಗವಾಗಿದೆ. ಚಿಕ್ಕ ಕೋಟೆಗಳಾದ ಮುದೋಳ, ಗುನ್ನಾಳ, ಮುರಡಿ, ದೇವದುರ್ಗ, ಗಬ್ಬೂರು ಇತ್ಯಾದಿ ಕೋಟೆಗಳು ಚೌಕಾಕಾರದಲ್ಲಿದ್ದು, ಸ್ಥಲದುರ್ಗಗಳಾಗಿವೆ.

## ಟಿಪ್ಪಣಿಗಳು


೧. Monier Williams, *Sanskrit English Dictionary,* p. 487.

೨. Date G.T., *Art of war in Ancient India,* Ch iv, p. 29,

೩. Straith H., *Treatise on Fortification and Artillery,* Ch xviii, p. 42.

೪. Rangarajan L.N., 1987, *Kautilya the Arthashastra, Edited, rearranged transalated and Introduced,* pp. 184-185

೫. Sastri Ganapati., T. (Ed), *Nitisara of Kamandaka,* 7th Prakarana V. 57.

೬. Buhler G., Laws of Manu (SBE series xxv) pp. 227-228, v. 70.

೭. Sarkar B.S., *Sukraniti* Section iv.

೮. Sastri Subramanya V., *Brihatsamhita,* p. 17 4.

೯. Somadeva Suri, *Nitivakyamritam,* pp. 81-82.

೧೦. *Yuktikalpataru of Bhoja.*

೧೧. ರಾಮಾನುಜ ಅಯ್ಯಂಗರ್ ಎಂ.ಎ., *ಪಂಚತಂತ್ರ,* ಪು. ೨೧೫-೨೧೬

೧೨. Shamashastary R., (Ed.) *Abilashitarta Chintamani* p. 95.

೧೩. Oudh Talukdar, *Matsa puranam* ch ccxvii : p. 226.

೧೪. Acharya P.K., *Manasara-an encyclopadedia of Hindu Architecture,* p. 53.

೧೫. ಅದೇ. p. 73

೧೬. ಅದೇ.

೧೭. Traite, *Sanskrit dear chitecture Mayamata* ch.x v.36.

೧೮. Dutt B.B., *Town planning in Ancient India,* p. 101

೧೮. Traite ಪೂರ್ವೋಕ್ತ, ch. ix. p. III v. 14.

೧೯. Sastri Vasudeva K., *Viswakarma Vastu* ch x. p. 188

೨೦. Rangachari K., *Town planning and House Building in Ancient India* IHO vII.pp. 813-823

೨೧. ಅದೇ. p. 830.

೨೨. ಚಿದಾನಂದಮೂರ್ತಿ ಎಂ., ೧೯೭೯, *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ* ಪು. ೨೮೬- ೨೮೭.

೨೪. ಬೆಟಗೇರಿ ಕೃಷ್ಣಶರ್ಮ, *ಕರ್ನಾಟಕ ಜನಜೀವನ* ಪು. ೫೬.

೨೫. ಅದೇ, ಪು. ೫೮.

೨೬. ಅದೇ, ಪು. ೫೪.

೨೭. *EC*, II, 43.

## ಅಧ್ಯಾಯ ನಾಲ್ಕು

# ರಾಯಚೂರು ಜಿಲ್ಲೆಯ ಕೋಟೆಗಳು

## ೧. ರಾಯಚೂರು

ಜಿಲ್ಲಾ ಕೇಂದ್ರವಾಗಿರುವ ರಾಯಚೂರು ೧೬°೧೨' ಉತ್ತರ ಅಕ್ಷಾಂಶ ಮತ್ತು ೭೭°೨೧' ಪೂರ್ವ ರೇಖಾಂಶದಲ್ಲಿದೆ. ವ್ಯವಸಾಯ ಉತ್ಪನ್ನಗಳ ವಾಣಿಜ್ಯ ಕೇಂದ್ರವಾಗಿ ಬೆಳೆಯುತ್ತಿರುವ ಈ ಊರ ಮಧ್ಯದಲ್ಲಿ ಎರಡು ಸುತ್ತಿನ ಕೋಟೆಯಿದೆ.

### ಐತಿಹಾಸಿಕ ಹಿನ್ನೆಲೆ

ಶಾಸನಗಳ ಆಧಾರದ ಮೇಲೆ ರಾಯಚೂರು ಪಟ್ಟಣದ ಇತಿಹಾಸವನ್ನು ಎಂಟನೇ ಶತಮಾನದಷ್ಟು ಹಿಂದಕ್ಕೆ ಒಯ್ಯಬಹುದು. ಈ ಕಾಲದ ಮೂರು ತ್ರುಟಿತ ಶಾಸನಗಳು ಮಸೀದಿಯೊಂದರಲ್ಲಿ ಇವೆ.[೧] ಬೀಯಳೇಶ್ವರ ದೇವರು ಮತ್ತು ಕೆಲವು ವ್ಯಕ್ತಿಗಳ ಹೆಸರುಗಳು ಮಾತ್ರ ಇವುಗಳಿಂದ ತಿಳಿಯುತ್ತವೆ. ಇದರ ನಂತರ ಕಾಣುವುದು ಹನ್ನೆರಡನೇ ಶತಮಾನದ ಶಾಸನ. ಇದು ಸಹ ತ್ರುಟಿತವಾಗಿರುವುದರಿಂದ ಸಾಮಂತ ಅರಸ ಹಂದ ಮತ್ತು ಅವನ ವಂಶಸ್ಥರ ಹೆಸರುಗಳು ಮಾತ್ರ ಲಭ್ಯವಾಗಿವೆ.[೨] ಈ ಕಾಲಕ್ಕಾಗಲೇ ರಾಯಚೂರಿನಲ್ಲಿ ಒಂದು ಕೋಟೆಯಿತ್ತು. ಈ ಕೋಟೆಯನ್ನು ಹೊಯ್ಸಳ ವಿಷ್ಣುವರ್ಧನನು (ಕ್ರಿ.ಶ. ೧೧೦೮-೧೧೫೨) ಗೆದ್ದಿದ್ದನೆಂಬುದು ಅನೇಕ ಹೊಯ್ಸಳ ಶಾಸನಗಳಲ್ಲಿ ಉಲ್ಲೇಖವಾಗಿದೆ.[೩] ಈ ಶಾಸನಗಳು ಊರಿನ ಹೆಸರನ್ನು 'ರಾಚವೂರು', 'ಪೆರ್ಮ್ಮನ ರಾಚವೂರು' ಮತ್ತು 'ರಾಚನೂರು' ಎಂದು ಉಲ್ಲೇಖಿಸುತ್ತವೆ.

ಹದಿಮೂರನೇ ಶತಮಾನದಲ್ಲಿ ಇತಿಹಾಸದ ಚಿತ್ರ ಇನ್ನೂ ಸ್ಪಷ್ಟವಾಗುತ್ತದೆ. ರಾಯಚೂರು ಭಾಗದ ಪ್ರದೇಶಕ್ಕಾಗಿ ಹೊಯ್ಸಳರು, ಯಾದವರು ಮತ್ತು ಕಾಕತೀಯರ ಮಧ್ಯದಲ್ಲಿ ಯುದ್ಧಗಳಾಗುತ್ತಿದ್ದವು. ಕಾಕತೀಯ ಪ್ರತಾಪರುದ್ರನ ಕಾಲದಲ್ಲಿ ಅವನ ಸಾಮಂತ ಗೋನಗನ್ನಯ್ಯ ರಡ್ಡಿಯು ಆತನ ಸಾಮಂತನಾಗಿ ವರ್ಧಮಾನ ಪುರದಿಂದ ಆಳುತ್ತಿದ್ದನು. ಪ್ರತಾಪರುದ್ರನು ಯಾದವ ರಾಮಚಂದ್ರನ ಮೇಲೆ ಸೈನ್ಯವನ್ನು ಕಳಿಸಿದನು.[೪] ಗೋನಗನ್ನಯ್ಯ ರಡ್ಡಿಯ ಅಧಿಕಾರಿಯಾದ ವಿಠಲನಾಥನು ಸೈನ್ಯದ ನೇತೃತ್ವ ವಹಿಸಿ ಆದವಾನಿ, ತುಂಬಳ, ಮಾನವಿ, ಹಾಲವಿ ಕೋಟೆಗಳನ್ನು ಗೆದ್ದು, ನಂತರ ರಾಯಚೂರು ಪಟ್ಟಣವನ್ನು ಪ್ರವೇಶಿಸಿ, ಆ ಭಾಗವನ್ನು ಆ ಪಟ್ಟಣದಿಂದ ಆಳುತ್ತಿದ್ದಾಗ, ಕ್ರಿ.ಶ. ೧೨೯೪ರಲ್ಲಿ ಪ್ರಜೆಗಳ ರಕ್ಷಣೆಗಾಗಿ ಶಿಲಾದುರ್ಗವನ್ನು ರಚಿಸಿದನು. ಈ

ವಿಷಯವನ್ನು ತಿಳಿಸುವ ಶಾಸನ ರಾಯಚೂರಿನ ಒಳಕೋಟೆಯ ಕಲ್ಲಿನ ಮೇಲಿದೆ.[೫]

ಹದಿನಾಲ್ಕನೇ ಶತಮಾನದಲ್ಲಿ ವಿಜಯನಗರ ಮತ್ತು ಬಹಮನಿ ರಾಜ್ಯಗಳ ಸ್ಥಾಪನೆಯಾಗಿ ರಾಯಚೂರು ದೋಅಬ ಪ್ರದೇಶದ ಒಡೆತನಕ್ಕಾಗಿ ಎರಡು ರಾಜ್ಯಗಳ ನಡುವೆ ಅನೇಕ ಯುದ್ಧಗಳಾದವು. ವಿಜಯನಗರದೊಂದಿಗಿನ ವಿವಾದವನ್ನು ನಂತರ ಆದಿಲ್‌ಶಾಹಿಗಳು ಮುಂದುವರಿಸಿದರು.

ಪ್ರಾರಂಭದಲ್ಲಿ ವಿಜಯನಗರ ಅರಸರ ವಶದಲ್ಲಿದ್ದ ಕೋಟೆ ನಂತರ ಬಹಮನಿ ಅರಸರ ಪಾಲಾಗಿದ್ದು ಅಲ್ಲಿಯ ಕೆಲವು ಶಾಸನಗಳಿಂದ ಸ್ಪಷ್ಟವಾಗುತ್ತದೆ. ಮೂರನೇ ಮಹಮ್ಮದ್ ಶಾಹನ ಕಾಲದಲ್ಲಿ ಮಲ್ಲುಖಾನ್ ಹಫೀಜನು ಕ್ರಿ.ಶ. ೧೪೬೮-೬೯ರಲ್ಲಿ ಬಾಗಿಲನ್ನು ಕಟ್ಟಿಸಿದನೆಂದು ಕಾಟೀದರ್ವಾಜದಲ್ಲಿಯ ಶಾಸನದಿಂದ ತಿಳಿಯುತ್ತದೆ. ಆದರೆ ಈ ಶಾಸನ ಹಿಂದೆ ಅಸ್ತಿತ್ವದಲ್ಲಿದ್ದ ಕಮಾನಿ ದರ್ವಾಜದಲ್ಲಿತ್ತೆಂದು ಶಾಸನವನ್ನು ಪ್ರಕಟಿಸಿದ ವಿದ್ವಾಂಸರು ತಿಳಿಸಿರುವುದರಿಂದ ಈ ಶಾಸನ ಕಮಾನಿ ದರ್ವಾಜವನ್ನು ಕಟ್ಟಿಸಿದ್ದನ್ನು ಉಲ್ಲೇಖಿಸುತ್ತದೆ.[೬] ಅದೇ ಅರಸನ ಕಾಲದಲ್ಲಿ ಮಲ್ಲುಖಾನನು ಕ್ರಿ.ಶ. ೧೪೬೯-೭೦ರಲ್ಲಿ ಮಕ್ಕಾದ ದರ್ವಾಜವನ್ನು[೭] ಕಟ್ಟಿಸಿದನು. ಅದೇ ಅರಸನ ಆಳ್ವಿಕೆಯಲ್ಲಿ ಕ್ರಿ.ಶ. ೧೪೮೧-೮೨ರಲ್ಲಿ ಒಂದು ಕಟ್ಟಡದ ನಿರ್ಮಾಣವಾಯಿತು.[೮]

ನರಸನಾಯಕನ ಆಳ್ವಿಕೆಯಲ್ಲಿ ರಾಯಚೂರು ವಿಜಯನಗರದ ಪಾಲಾಯಿತು. ಕ್ರಿ.ಶ. ೧೪೯೨-೯೩ರಲ್ಲಿ ಅಹಮ್ಮದ್‌ನಗರದ ಕಾಸಿಮ್‌ಬರೀದ್‌ನು ತನ್ನ ವೈರಿಯಾದ ಬಿಜಾಪುರದ ಯೂಸಫ್ ಆದಿಲ್‌ಖಾನನ ವಿರುದ್ಧ ವಿಜಯನಗರದ ಸಹಾಯ ಕೇಳಿ, ಅದಕ್ಕೆ ಬದಲಾಗಿ ರಾಯಚೂರು ಮತ್ತು ಮುದುಗಲ್ಲುಗಳನ್ನು ವಿಜಯನಗರಕ್ಕೆ ಕೊಡುವುದಾಗಿ ಒಪ್ಪಂದ ಮಾಡಿಕೊಂಡನು. ಇದರ ಲಾಭ ಪಡೆದ ನರಸನಾಯಕನು ತುಂಗಭದ್ರವನ್ನು ದಾಟಿ ರಾಯಚೂರು ಮತ್ತು ಮುದುಗಲ್ಲು ಕೋಟೆಗಳನ್ನು ವಶಪಡಿಸಿಕೊಂಡನು.[೯]

ಕ್ರಿ.ಶ. ೧೫೦೬ರಲ್ಲಿ ಕೋಟೆ ಮುಸ್ಲಿಮರ ವಶದಲ್ಲಿತ್ತು. ಯೂಸುಫ್ ಆದಿಲ್‌ಶಾಹನ ಕಾಲದಲ್ಲಿ ಕ್ರಿ.ಶ ೧೫೦೬ರಲ್ಲಿ ಒಂದು ಮಸೀದಿ ಅಥವಾ ದರ್ಗಾಕ್ಕೆ ಅಂಗಡಿಗಳನ್ನು ದಾನ ಮಾಡಲಾಯಿತು.[೧೦] ಇಸ್ಮಾಯಿಲ್ ಆದಿಲ್‌ಶಾಹನ ಕಾಲದಲ್ಲಿ ಕ್ರಿ.ಶ. ೧೫೦೮ರಲ್ಲಿ ಕಾಲೀ ಮಸೀದಿಯ ಹತ್ತಿರದ ಶಕರ್ ಬೌಡಿ ಬಾವಿಯನ್ನು ಕಟ್ಟಲಾಯಿತು.[೧೧] ವಿಜಯನಗರ ಅರಸ ತುಳುವ ನರಸಿಂಹನು ಯೂಸುಫ್ ಆದಿಲ್‌ಶಾಹನನ್ನು ಸೋಲಿಸಿದನಾದರೂ ಕೆಲವೇ ವರ್ಷಗಳಲ್ಲಿ ಕೋಟೆ ಪುನಃ ಮುಸ್ಲಿಮರ ವಶವಾಯಿತು. ಬಹಮನಿ ಅರಸ ಮಹ್ಮದ್‌ಶಾಹನ ಕಾಲದಲ್ಲಿ ಕ್ರಿ.ಶ. ೧೫೧೩-೧೪ರಲ್ಲಿ ಏಕ್‌ಮಿನಾರ್ ಮಸೀದಿಯ ನಿರ್ಮಾಣವಾಯಿತು.[೧೨]

ಆಗ ಇಸ್ಮಾಯಿಲ್‌ಆದಿಲ್‌ಶಾಹನು ಈ ಭಾಗದ ಆಡಳಿತವನ್ನು ನಿರ್ವಹಿಸುತ್ತಿದ್ದನು. ಇಸ್ಮಾಯಿಲ್‌ಆದಿಲ್ ಶಾಹನ ಆಳ್ವಿಕೆಯಲ್ಲಿ ಕ್ರಿ.ಶ. ೧೫೧೫ರಲ್ಲಿ ಒಂದು ಮಸೀದಿಯನ್ನು[೧೨] ಮತ್ತು ಅದೇ ವರ್ಷ ಬುರ್ಜ್ ಅಲ್‌ಫತ್ ಎನ್ನುವ ಬುರುಜನ್ನು[೧೩] ಕಟ್ಟಲಾಯಿತು.

ಕೃಷ್ಣದೇವರಾಯನು ಕ್ರಿ.ಶ. ೧೫೨೦ರಲ್ಲಿ ರಾಯಚೂರು ಕೋಟೆಗೆ ಮುತ್ತಿಗೆ ಹಾಕಿ ಇಸ್ಮಾಯಿಲ್ ಆದಿಲ್‌ಶಾಹನೊಂದಿಗೆ ಭೀಕರವಾದ ಯುದ್ಧವನ್ನು ಮಾಡಿದನು. ಶಾಹ ಸೋತು ರಣರಂಗದಿಂದ ಓಡಿಹೋದನು. ಆದರೂ ಕೋಟೆಯು ವಶವಾಗಲಿಲ್ಲ. ಕೊನೆಗೆ ಕೃಷ್ಣದೇವರಾಯನು ಪೋರ್ಚುಗೀಸ್ ಬಂದೂಕು ಧಾರಿಗಳ ಸಹಾಯದಿಂದ ಅದನ್ನು ವಶಪಡಿಸಿಕೊಂಡನು.[೧೪] ಈ ಯುದ್ಧದ ವಿವರಗಳನ್ನು ಪೋರ್ಚುಗೀಸ್ ಪ್ರವಾಸಿ ಫರ್ನಾವೊ ನ್ಯೂನಿಜ್‌ನು ನೀಡಿದ್ದಾನೆ. ಅವನ ಪ್ರಕಾರ ಕೋಟೆಯ ಹತ್ತಿರ ಹೋದ ಸೈನಿಕರು ಹೆಚ್ಚಿನ ಸಂಖ್ಯೆಯಲ್ಲಿ ಸಾಯುತ್ತಿದ್ದರು. ಹೇಗಾದರೂ ಮಾಡಿ ಕೋಟೆಯನ್ನು ಜಯಿಸಬೇಕೆಂದು ವಿಜಯನಗರದ ಸೈನ್ಯಾಧಿಕಾರಿಗಳು ನಿರ್ಧರಿಸಿದರು. ಕೋಟೆಯ ಕಲ್ಲನ್ನು ಕಿತ್ತು ತಂದವರಿಗೆ ಒಂದೊಂದು ಕಲ್ಲಿಗೆ, ಕಲ್ಲಿನ ಗಾತ್ರಕ್ಕನುಗುಣವಾಗಿ, ಹತ್ತು, ಇಪ್ಪತ್ತು, ಮೂವತ್ತು ಮತ್ತು ನಾಲ್ವತ್ತು ಫಣಮ್‌ಗಳನ್ನು ಕೊಡುವುದಾಗಿ ಸಾರಿದರು. ಹಣದ ಆಸೆಗಾಗಿ ಸೈನಿಕರು ಜೀವದ ಹಂಗು ತೊರೆದು ಕೋಟೆಯ ಕಲ್ಲುಗಳನ್ನು ಕಿತ್ತು ತರಲಾರಂಭಿಸಿದರು. ಅದೇ ರೀತಿ ಕೋಟೆ ಹತ್ತಿರ ಬಿದ್ದಿದ್ದ ಹೆಣಗಳನ್ನು ಎಳೆದು ತರುವುದಕ್ಕೂ ಹಣವನ್ನು ಕೊಡಲಾಯಿತು. ಹೀಗೆ ಕೋಟೆಯನ್ನು ಬೀಳಿಸಿ ಒಳನುಗ್ಗಲು ಸಾಧ್ಯವಾಯಿತು.[೧೫]

ಅಚ್ಯುತರಾಯನ ಕಾಲದಲ್ಲಿ ಕ್ರಿ.ಶ. ೧೫೩೦.೩೧ರಲ್ಲಿ ಇಸ್ಮಾಯಿಲ್ ಆದಿಲ್‌ಶಾಹನು ವಿಜಯನಗರ ಸಾಮ್ರಾಜ್ಯದ ಮೇಲೆ ದಾಳಿ ಮಾಡಿ ರಾಯಚೂರನ್ನು ವಶಪಡಿಸಿಕೊಂಡನು.[೧೬] ಕ್ರಿ.ಶ. ೧೫೩೫ ರಿಂದ ೧೫೫೧ರ ವರೆಗೆ ಕೋಟೆ ಮೊದಲನೇ ಇಬ್ರಾಹಿಮ್ ಆದಿಲ್‌ಶಾಹನ ವಶದಲ್ಲಿದ್ದುದು ಕೋಟೆಯಲ್ಲಿಯ ಐದು ಶಾಸನಗಳಿಂದ ದೃಢಪಡುತ್ತದೆ. ಕೋಟೆಯ ಬುರುಜಿನ ಮೇಲಿನ ಕ್ರಿ.ಶ. ೧೫೩೪-೧೫೩೫ರ ಶಾಸನವು ಮಲ್ಲು ಆದಿಲ್ ಖಾನ್ ಮತ್ತು ಆತನ ತಂದೆ ಇಸ್ಮಾಯಿಲ್‌ನ ಹೆಸರುಗಳನ್ನು ಉಲ್ಲೇಖಿಸುತ್ತದೆ.[೧೭] ಅಹ್ಮದ್ ಹಾಜಿ ಗುನಾಬಾದಿಯು ಕ್ರಿ.ಶ. ೧೫೪೬-೪೭ರಲ್ಲಿ ಬುರ್ಜ್-ಇ-ಹಮಲ್ ಬುರುಜನ್ನು ಕಟ್ಟಿಸಿದನು.[೧೮] ಕ್ರಿ.ಶ. ೧೫೪೮-೪೯ರಲ್ಲಿ ಮತ್ತೊಂದು ಬುರುಜನ್ನು ಕಟ್ಟಿಸಲಾಯಿತು.[೨೦] ಕ್ರಿ.ಶ. ೧೫೫೦ರಲ್ಲಿ ಶಮ್‌ಶೀರುಲ್ ಮುಲ್ಕ್‌ನು ಕಾಟೀ ದರ್ವಾಜವನ್ನು ಕಟ್ಟಿಸಿದನು.[೨೧] ಕ್ರಿ.ಶ. ೧೫೫೧ರಲ್ಲಿ ಕೆರೆ (ಸರೋವರ)ದ ಬಾಗಿಲನ್ನು ಕಟ್ಟಿಸಲಾಯಿತು.[೨೨]

ಕ್ರಿ.ಶ. ೧೫೫೧ರಲ್ಲಿ ವಿಜಯನಗರ ಅರಸ ರಾಮರಾಯ ಮತ್ತು ಬಿಜಾಪುರದ ಮೊದಲನೇ ಇಬ್ರಾಹಿಮ್ ಆದಿಲ್ ಶಾಹ ನಡುವೆ ನಡೆದ ಯುದ್ಧದಲ್ಲಿ ರಾಮರಾಯ ಜಯಶಾಲಿಯಾಗಿ ರಾಯಚೂರು ಕೋಟೆಯನ್ನು ತನ್ನ ವಶಕ್ಕೆ ಪಡೆದನು.[೨೩] ಕೋಟೆಯು ವಿಜಯನಗರ ಅರಸರ ವಶದಲ್ಲಿದ್ದುದನ್ನು ಕೋಟೆ ಗೋಡೆಯ ಮೇಲಿನ ಕ್ರಿ.ಶ. ೧೫೫೪,[೨೪] ೧೫೫೮[೨೫] ಮತ್ತು ೧೫೫೯ರ[೨೬] ಮೂರು ಶಾಸನಗಳು ಪುಷ್ಟೀಕರಿಸುತ್ತವೆ.

ಕ್ರಿ.ಶ. ೧೫೬೫ರಲ್ಲಿ ವಿಜಯನಗರ ಮತ್ತು ಮುಸ್ಲಿಮ್ ಅರಸರ ಒಕ್ಕೂಟದ ನಡುವೆ ನಡೆದ ಭೀಕರವಾದ ಅಂತಿಮ ಯುದ್ಧದಲ್ಲಿ ರಾಮರಾಯನು ಹತನಾದಾಗ ವಿಜಯನಗರದ ಪತನವಾಗಿ[೨೭] ರಾಯಚೂರು ಕೋಟೆಯು ಮುಸ್ಲಿಮರ ವಶವಾಯಿತು. ಅಲ್ಲಿಂದ ಮುಂದೆ ಕೋಟೆಯು ಆದಿಲ್‌ಶಾಹಿ ಅರಸರ ಆಳ್ವಿಕೆಗೆ ಒಳಪಟ್ಟಿದ್ದು ಶಾಸನಗಳಿಂದ ದೃಢಪಡುತ್ತದೆ. ಒಂದನೇ ಅಲಿ ಆದಿಲ್ ಶಾಹನ ಆಳ್ವಿಕೆಯ ಮೂರು ಶಾಸನಗಳಿವೆ. ಕ್ರಿ.ಶ. ೧೫೬೬ರಲ್ಲಿ ಇಖ್ಲಾಸ್‌ಖಾನನು ಶಾಹ ಬುರ್ಜ್‌ನ್ನು ಕಟ್ಟಿಸಿದನು.[೨೮] ಕ್ರಿ.ಶ. ೧೫೭೦-೭೧ರಲ್ಲಿ ತಾಹಿರ್ ಖಾನನು ಒಂದು ಬುರ್ಜ್‌ನ್ನು ಕಟ್ಟಿಸಿದನು.[೨೯] ಕ್ರಿ.ಶ. ೧೫೭೭-೭೮ರಲ್ಲಿ ಜಾಮೀ ಮಸೀದಿ ಯನ್ನು ಕಟ್ಟಿಸಲಾಯಿತು.[೩೦]

ಎರಡನೇ ಇಬ್ರಾಹಿಮ್ ಆದಿಲ್ ಶಾಹನ ಕಾಲದಲ್ಲಿ ಕೋಟೆಯ ಬುರುಜು, ಬಾಗಿಲು, ಕಂದಕ ಮತ್ತು ಇತರ ಕಟ್ಟಡಗಳ ನಿರ್ಮಾಣವಾದುದನ್ನು ಅನೇಕ ಶಾಸನಗಳಲ್ಲಿ ದಾಖಲಿಸಿದೆ. ಒಂದನೆಯ ಆದಿಲ್ ಶಾಹನ ಕಾಲದಲ್ಲಿ ಅಡಿಗಲ್ಲು ಹಾಕಿದ ದಿಡ್ಡಿ ಮತ್ತು ಬಾಪಿಯನ್ನು ಮತ್ತು ಎರಡನೇ ಇಬ್ರಾಹಿಮ್‌ನ ಕಾಲದಲ್ಲಿ ಪರ್‌ಕೋಟ ಮತ್ತು ಹಿಸಾರ್‌ನ್ನು ಯೂಸುಫ್ ಅಲಿ ಕಂದೀಲ್‌ದಾರನು ಪೂರ್ಣಗೊಳಿಸಿದನೆಂದು ಕ್ರಿ.ಶ. ೧೫೮೨ರ ಶಾಸನ ಉಲ್ಲೇಖಿಸುತ್ತದೆ.[೩೧] ಯೂಸುಫ್ ಅಲಿಈ ದಿಡ್ಡಿಯೊಂದಿಗೆ ಕಂದಕವನ್ನೂ ಕಟ್ಟಿಸಿದನು.[೩೨] ಮುಂದಿನ ವರ್ಷ ಅವನು ತವಕ್ಕುಲ್ ದಿಡ್ಡಿ ಹೆಸರಿನ ಬಾಗಿಲನ್ನು ಕಟ್ಟಿಸಿದನು.[೩೩] ಖವಾಸ್‌ಖಾನನು ಒಂದು ಬುರುಜನ್ನು ಕಟ್ಟಿಸಿ ಅಲೀಬಿನ್ ಅಬೀತಾಲಿಬ್ ಎಂದು ಹೆಸರಿಟ್ಟನು.[೩೪] ಮಲಿಕ್ ರೈಹಾನ್‌ನ ಪ್ರೋತ್ಸಾಹದಿಂದ ಮಲಿಕ್‌ಯಕೂತ್ ನಾಯಿಬ್‌ನು ಮತ್ತೊಂದು ಬುರುಜನ್ನು ಕ್ರಿ.ಶ. ೧೬೦೯ರಲ್ಲಿ ಕಟ್ಟಿಸಿದನು.[೩೫] ಮಲಿಕ್ ಯಕೂತ್‌ನು ಮಲಿಕ್ ರೈಹಾನ್‌ನ ಅಳಿಯ. ಈತನು ತನ್ನ ಮಾವನ ಅಧಿಕಾರಾವಧಿಯಲ್ಲಿ ಕ್ರಿ.ಶ. ೧೬೧೯ರಲ್ಲಿ ಮತ್ತೊಂದು ಬುರುಜನ್ನು ಕಟ್ಟಿಸಿದನು.[೩೬] ಎರಡನೇ ಇಬ್ರಾಹಿಮ್ ಆದಿಲ್ ಶಾಹನ ಕಾಲದಲ್ಲಿ ಕ್ರಿ.ಶ. ೧೬೧೮ರಲ್ಲಿ ಪ್ರಾರಂಭವಾದ ಖಾದಿರೀಯ್ಯ ಬುರ್ಜ್‌ನ ನಿರ್ಮಾಣವು ಮಹಮ್ಮದ್‌ಆದಿಲ್ ಶಾಹನ ಕಾಲದಲ್ಲಿ ಕ್ರಿ.ಶ. ೧೬೩೯-೪೦ರಲ್ಲಿ ಪೂರ್ಣಗೊಂಡಿತು. ಇದನ್ನು ರೈಹಾನ್‌ನ ಮಗ ಅಬ್ದುಲ್ ವಹ್ಹಾಬ್ ಕಟ್ಟಿಸಿದನು.[೩೭] ಕಾಟೀ ದರ್ವಾಜ ಸಂಕೀರ್ಣದಲ್ಲಿರುವ ಒಂಬತ್ತು ಕಮಾನುಗಳ ಕಟ್ಟಡ ಮತ್ತು ಅದರ ಮೇಲಿನ ಕೊಠಡಿಯನ್ನು

ಪ್ರಾಂತ್ಯಾಧಿಕಾರಿ (governor) ಅಬ್ದುಲ್ ಮಹಮ್ಮದ್‌ನು ಕ್ರಿ.ಶ. ೧೬೨೨-೨೩ರಲ್ಲಿ ಕಟ್ಟಿಸಿದನು.[೩೮] ಇದನ್ನು ಇನ್ನೊಂದು ಶಾಸನದಲ್ಲಿ 'ಅರಮನೆ' ಎಂದು ಉಲ್ಲೇಖಿಸಿದೆ.[೩೯] ಅದೇ ಅಬ್ದುಲ್ ಮಹಮ್ಮದ್‌ನು ಅದೇ ವರ್ಷ 'ಅಂಬಾರ್‌ಖಾನ' ಎಂದು ಉಲ್ಲೇಖವಾದ ಕಣಜವನ್ನು ಕಟ್ಟಿಸಿದನು.[೪೦] ರೈಹಾನ್‌ನ ಮಗ ಮಲಿಕ್‌ಅಬ್ದುಲ್ ಮಹಮ್ಮದ್‌ನು ಅದೇ ವರ್ಷ ಜಾಮಿ ಮಸೀದಿಯನ್ನು ಕಟ್ಟಿಸಿದನೆಂದು ಎರಡು ಶಾಸನಗಳು ಉಲ್ಲೇಖಿಸುತ್ತವೆ.[೪೧] ಇವನು ಮತ್ತು ಈಗಾಗಲೇ ಮೇಲೆ ನಮೂದಿತನಾದ ಅಬ್ದುಲ್‌ಮಹಮ್ಮದ್ ಒಬ್ಬನೇ ಆಗಿದ್ದಾನೆ. ಎರಡನೇ ಇಬ್ರಾಹಿಮ್ ಆದಿಲ್ ಶಾಹನ ಆಳ್ವಿಕೆಯಲ್ಲಿ ಪ್ರಾರಂಭಗೊಂಡ ಒಂದು ಮಸೀದಿಯ ನಿರ್ಮಾಣವನ್ನು ಮಹಮ್ಮದ್ ಆದಿಲ್ ಶಾಹನ ಕಾಲದಲ್ಲಿ ಕ್ರಿ.ಶ. ೧೬೨೮-೨೯ರಲ್ಲಿ ಅಬ್ದುಲ್ ಮಹಮ್ಮದ್‌ನು ಪೂರ್ಣಗೊಳಿಸಿದನು.[೪೨] ಬೀಬಿಹಲೀಮಳು ಸಹ ಅದೇ ವರ್ಷ ಮತ್ತೊಂದು ಮಸೀದಿಯನ್ನು ಕಟ್ಟಿಸಿದಳು.[೪೩]

ಎರಡನೆಯ ಅಲಿ ಆದಿಲ್ ಶಾಹನ ಕಾಲದಲ್ಲಿ ಕ್ರಿ.ಶ. ೧೬೭೦-೭೧ರಲ್ಲಿ ಆಕಾಖುಶ್ರೌನು ಖುಶ್ರೌಬುರ್ಜ್‌ನ್ನು ಕಟ್ಟಿಸಿದನು.[೪೪] ಇದೇ ಖುಶ್ರೌನು ಸಿಕಂದರನ ಕಾಲದಲ್ಲಿ ಕ್ರಿ.ಶ. ೧೬೭೩-೭೪ರಲ್ಲಿ ಈಗ ಸಿಕಂದರೀ ದರ್ವಾಜ ಎಂದು ಕರೆಯಲಾಗುತ್ತಿರುವ ಬಾಗಿಲ (ದಹ್‌ಲೀಜ್)ನ್ನು ಕಟ್ಟಿಸಿದನು.[೪೫]

ಕ್ರಿ.ಶ. ೧೭೨೪ರಲ್ಲಿ ಹೈದರಾಬಾದಿನಲ್ಲಿ ಅಸಫ್‌ಜಾಹಿ ಆಳ್ವಿಕೆ ಪ್ರಾರಂಭವಾಯಿತು. ಅಂದಿನಿಂದ ಕ್ರಿ.ಶ. ೧೯೪೮ರವರೆಗೆ ರಾಯಚೂರು ಆ ರಾಜ್ಯದ ಒಂದು ಭಾಗವಾಗಿ ಉಳಿಯಿತು. ಇವರ ಆಳ್ವಿಕೆಯಲ್ಲಿ ಶೇಖ್ ಅಬ್ದುಲ್ ವಹೀದ್‌ನು ಕಿಲ್ಲೇದಾರ (ಖಿಲದಾರ್) ನಾಗಿದ್ದನು. ಇವನು ಕ್ರಿ.ಶ. ೧೭೪೯ರಲ್ಲಿ ಯತೀಮ್ ಶಾಹ ಮಸೀದಿಯನ್ನು ಕಟ್ಟಿಸಿದನು.[೪೬] ನವಾಬ್ ಸದುಲ್ಲಾ ಖಾನ್ ಬಹಾದೂರ್ ಮುಜಾಫರ್ ಜಂಗ್ ಈ ಭಾಗದ ಆಡಳಿತವನ್ನು ನಿರ್ವಹಿಸುತ್ತಿದ್ದಾಗ ಶೇಖ್ ಅಬ್ದುಲ್‌ವಹೀದ್‌ನ ಮೇಲ್ವಿಚಾರಣೆಯಲ್ಲಿ ಕ್ರಿ.ಶ. ೧೭೫೦-೫೧ರಲ್ಲಿ ಫತೇ ಬುರುಜನ್ನು ಪುನರ್‌ನಿರ್ಮಿಸಲಾಯಿತು.[೪೭] ನವಾಬ್ ಮಹಮ್ಮದ್ ಹುಸೇನ್ ಖಾನ್ ಬಹಾದೂರ್ ಘುತಾಲನ ಕಾಲದಲ್ಲಿ ಕ್ರಿ.ಶ. ೧೭೮೦-೮೧ರಲ್ಲಿ ಪಾಂಚ್‌ಬೀಬಿ ಬೆಟ್ಟದ ಮೇಲಿನ ತಾಜ್ ಬಂಗಲೆಯನ್ನು ಕಟ್ಟಿಸಲಾಯಿತು.[೪೮] ಶುಜಾಉಲ್ ಮುಲ್ಕ್ ಮತ್ತು ನವಾಬ್ ದುಲ್‌ಫ ಕಾರುದೌಲರ ಕಾಲದಲ್ಲಿ ಗುಲಾಮ್ ಮಹಮ್ಮದ್‌ನ ಮೇಲ್ವಿಚಾರಣೆಯಲ್ಲಿ, ಕ್ರಿ.ಶ. ೧೭೮೨ರಲ್ಲಿ ಪ್ರಾರಂಭವಾದ ಮಸೀದಿಯ ನಿರ್ಮಾಣವು ೧೭೮೪ರಲ್ಲಿ ಮುಗಿಯಿತು.[೪೯] ಈ ಮಸೀದಿ ಮಡ್ಡಿಪೇಟೆಯಲ್ಲಿದೆ.

## ಕೋಟೆ

ರಾಯಚೂರಿನ ಕೋಟೆ ಎರಡು ಸುತ್ತಿನದು.[೫೦] ಒಳ ಕೋಟೆ ಸುಮಾರಾಗಿ ಆಯತಾಕಾರದಲ್ಲಿದ್ದು ಉತ್ತರ-ದಕ್ಷಿಣ ದಿಕ್ಕಿನಲ್ಲಿ ಹೆಚ್ಚು ಉದ್ದವಾಗಿದೆ. ಹೊರ ಕೋಟೆ ದಕ್ಷಿಣ ದಿಕ್ಕಿನಲ್ಲಿ ಒಳ ಕೋಟೆಯ ಹತ್ತಿರದಲ್ಲೆ ಇದ್ದು, ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿ ಸ್ವಲ್ಪ ದೂರವಿದೆ. ಪೂರ್ವ ದಿಕ್ಕಿನಲ್ಲಿ ಎರಡು ಕೋಟೆಗಳ ಮಧ್ಯದಲ್ಲಿ ಬಹಳ ಅಂತರವಿರುವುದರಿಂದ ಇಲ್ಲಿ ವಿಶಾಲವಾದ ಪ್ರದೇಶವಿದೆ. ಹೊರ ಕೋಟೆ ಅನಿಯಮಿತಾಕಾರದಲ್ಲಿದೆ. ದಕ್ಷಿಣ ದಿಕ್ಕಿನಲ್ಲಿ ಎರಡೂ ಕೋಟೆಗಳು ಬೆಟ್ಟದ ಮೇಲೆ ಸಾಗುತ್ತವೆ. ನೆಲದ ಮೇಲಿನ ಕೋಟೆ ಗೋಡೆಗಳನ್ನು ದೊಡ್ಡ ಕಲ್ಲುಗಳಿಂದ ಮತ್ತು ಬೆಟ್ಟದ ಮೇಲಿನವುಗಳನ್ನು ಚಿಕ್ಕ ಕಲ್ಲುಗಳಿಂದ ಕಟ್ಟಿದೆ. ಒಳ ಕೋಟೆ ಕಾಕತೀಯರ ಕಾಲದಲ್ಲಿ ಮತ್ತು ಹೊರ ಕೋಟೆ ಬಹಮನಿ, ಆದಿಲ್ ಶಾಹಿ ಮತ್ತು ವಿಜಯನಗರ ಅರಸರ ಕಾಲದಲ್ಲಿ ನಿರ್ಮಾಣಗೊಂಡಿದೆ. ಬೆಟ್ಟದ ತುದಿಯಲ್ಲಿ ರಾಜವಾಡೆ (citadel) ಇದೆ. ಒಳಕೋಟೆಯ ಒಳಗೆ, ಒಳ ಮತ್ತು ಹೊರ ಕೋಟೆಗಳ ಮಧ್ಯ ಅನೇಕ ಕಟ್ಟಡಗಳಿವೆ.

### ಒಳಕೋಟೆ

ಸುಮಾರಾಗಿ ಆಯತಾಕಾರದಲ್ಲಿರುವ ಈ ಕೋಟೆಯ ಮೂರು ದಿಕ್ಕಿನ ಗೋಡೆಗಳನ್ನು ಬಹಳ ದೊಡ್ಡ ಕಲ್ಲುಗಳಿಂದ ಕಟ್ಟಲಾಗಿದೆ (ಚಿತ್ರ ೫). ಕಲ್ಲುಗಳು ಬಹಳ ಉದ್ದವಾಗಿರುವುದರಿಂದ ದಿಮ್ಮಿಯಾಕಾರ ದಲ್ಲಿವೆ. ಇವು ಸುಮಾರು ೪-೫ ಮೀ. ಉದ್ದ ಮತ್ತು ೧ ಮೀ. ಅಗಲವಾಗಿವೆ. ಇಷ್ಟು ದೊಡ್ಡ ಕಲ್ಲುಗಳನ್ನು ಮಲಿಯಾಬಾದ್ ಹೊರತು, ಕರ್ನಾಟಕದ ಇತರ ಯಾವುದೇ ಕೋಟೆಗೆ ಬಳಸಿಲ್ಲ.[೫೧] ಈ ಕಲ್ಲುಗಳ ಗಾತ್ರದಿಂದಾಗಿ ಬಲಿಷ್ಠವಾಗಿರುವ ಕೋಟೆ ಇಂದಿಗೂ ಸುಸ್ಥಿತಿಯಲ್ಲಿದೆ. ಕಲ್ಲುಗಳನ್ನು ಜೋಡಿಸುವಾಗ ಬಳಸಿದ ತಂತ್ರ ಕೋಟೆಯ ಭದ್ರತೆಗೆ ಬಹಳ ಅತ್ಯವಶ್ಯಕವಾಗಿದೆ. ಒಂದು ಕಲ್ಲನ್ನು ಉದ್ದವಾಗಿ ಹಾಕಿ ಅದರ ಪಕ್ಕದ ಕಲ್ಲನ್ನು ಅಡ್ಡವಾಗಿ ಹಾಕಿದೆ. ಇದೇ ರೀತಿ ಕಲ್ಲುಗಳನ್ನು ಅನುಕ್ರಮವಾಗಿ ಉದ್ದ ಮತ್ತು ಅಡ್ಡವಾಗಿ ಕೋಟೆಯುದ್ದಕ್ಕೂ ಜೋಡಿಸಿದೆ. ಹೀಗೆ ಜೋಡಿಸಿದಾಗ ಅಡ್ಡ ಹಾಕಿದ ಕಲ್ಲುಗಳು ಉದ್ದ ಹಾಕಿದ ಕಲ್ಲುಗಳನ್ನು ಪಕ್ಕಕ್ಕೆ ವಾಲದಂತೆ ಬಂಧಿಸಿ ಹಿಡಿಯುತ್ತವೆ. ಈ ಪದ್ಧತಿ ವ್ಯವಸ್ಥೆಗೆ ಇಂಗ್ಲಿಷ್ ಬಾಂಡ್ ಎಂದು ಕರೆಯುವುದು ವಾಡಿಕೆ. ಆದರೆ ಹದಿಮೂರನೇ ಶತಮಾನದಲ್ಲಿಯೇ ಈ ಪದ್ಧತಿಯನ್ನು ಇಲ್ಲಿ ಕಾಣುತ್ತೇವೆ. ಕಲ್ಲುಗಳ ಜೋಡಣೆ ಅಚ್ಚುಕಟ್ಟಾಗಿದೆ. ಒಂದು ಕಲ್ಲಿನ ಬದಿಗಳು ಅದರ ಸುತ್ತಲಿನ ಕಲ್ಲುಗಳಿಗೆ ಹೊಂದಿಕೊಳ್ಳುವಂತೆ ಎಚ್ಚರ ವಹಿಸಿ ಕಲ್ಲುಗಳನ್ನು ಬೇಕಾದ ರೀತಿಯಲ್ಲಿ ಕೆತ್ತಲಾಗಿದೆ. ಕಲ್ಲುಗಳ ಮಧ್ಯದಲ್ಲಿ ಸಂದಿಗಳಿಲ್ಲ ಮತ್ತು ಯಾವುದೇ ಗಾರೆಯನ್ನು ಬಳಸಿಲ್ಲ.




೪. ರಾಯಚೂರು ಕೋಟೆ : ೧.ಮಕ್ಕಾ ದರ್ವಾಜ, ೨.ಬ್ರಿಟಿಷರ ಮದ್ದುಗುಂಡಿನ ಉಗ್ರಾಣ, ೩.ಸೈಲಾನಿ ಶಾಹ ದರ್ಗಾ, ೪. ಕೋಟೆ ಕಟ್ಟಿದ ದಿನಾಂಕವನ್ನು ತಿಳಿಸುವ ತೆಲುಗು ಶಾಸನ, ೫.ಸೈಲಾನಿ ದರ್ವಾಜ, ೬.ಪುಷ್ಕರಿಣಿ, ೭.ಶೇಖಮಿಯಾ ಸಾಹೇಬರ ದರ್ಗಾ ಮತ್ತು ಮಸೀದಿ, ೮.ಕಾಲೀ ಮಸೀದಿ, ೯.ರಾಜವಾಡೆ, ೧೦.ರಾಜವಾಡೆಗೆ ಹೋಗುವ ಮೆಟ್ಟಿಲು, ೧೧. ಅಸರ್ ಷರೀಫ್, ೧೨.ಪ್ರಾಚೀನ ಹಿಂದೂ [illegible]ನೆ,೧೩. ಜಾಮೀ ಮಸೀದಿ, ೧೪.ಬಜಾರ ಬೇಗ್ ಮಸೀದಿ,೧೫.ಮೀರ್‌ಹಸನ್ ಸಾಹೇಬರ ದರ್ಗಾ,೧೬.ದಫ್ತರ್ ಕಿ ಮಸೀದಿ, ೧೭.ಸಿಕಂದರೀ ದರ್ವಾಜ ಮತ್ತು ಮಸೀದಿ. ೧೮.ಶಾ ಅಬು ತಾಹಿ ಹುಸೇನಿ ದರ್ಗಾ, ೧೯. ನವರಂಗ ದರ್ವಾಜ, ೨೦. ಏಕಮಿನಾರ್ ಮಸೀದಿ, ೨೧.ಯತೀಮ ಶಾಹ ಮಸೀದಿ, ೨೨.ಕಾಟೀ ದರ್ವಾಜ, ೨೩.ಅಂಧೇರಿ ಬೌಡಿ (ಬಾವಿ) ೨೪.ಖಾಸ್ ಬೌಡಿ, ೨೫.ಖಂದಕ ದರ್ವಾಜ, ೨೬.ದೊಡ್ಡಿ ದರ್ವಾಜ. ೨೭. ಪರಕೋಟ ದರ್ವಾಜ

(ಕೃಪೆ : Annual Report of the Archaeological Department of HEH the Nizam's Dominions for the year 1929-30.)



೭.    ರಾಯಚೂರು, ಒಳಕೋಟೆ, ಕಲ್ಲು ಸಾಗಿಸುವ ಚಿತ್ರ



ಕೋಟೆಗೆ ಪಶ್ಚಿಮಕ್ಕೆ ಸೈಲಾನಿ ದರ್ವಾಜ, ಪೂರ್ವಕ್ಕೆ ಸಿಕಂದರೀ ದರ್ವಾಜ ಮತ್ತು ಕೋಟೆ ಗೋಡೆಯಲ್ಲಿ ಅನೇಕ ಚೌಕ ಮತ್ತು ಆಯತಾಕಾರದ ಕೊತ್ತಳ ಅಥವಾ ಬುರುಜುಗಳಿವೆ. ಈ ಕೋಟೆಯಲ್ಲಿ ೨೧ ಕೊತ್ತಳಗಳಿದ್ದವು. ಅವುಗಳಲ್ಲಿ ಕೆಲವು ಈಗ ಉಳಿದಿಲ್ಲ.

ಈಗಿನ ಬಸ್ ನಿಲ್ದಾಣದ ಬಳಿ ಕೋಟೆಯ ಪಶ್ಚಿಮ ಗೋಡೆಯ ಒಂದು ದೊಡ್ಡ ಕಲ್ಲಿನ ಮೇಲೆ ಶಾಸನವಿದೆ. ಕಾಕತೀಯ ಪ್ರತಾಪರುದ್ರನ ಆಳ್ವಿಕೆಯ ಕಾಲದ ಶಾಸನವು ಅವನ ಅಧಿಕಾರಿಯಾದ ವಿಠಲನಾಥನು ಕೋಟೆಯನ್ನು ಕ್ರಿ.ಶ. ೧೯೪ಳರಲ್ಲಿ ಕಟ್ಟಿಸಿದನೆಂದು ತಿಳಿಸುತ್ತದೆ.[೨೨] ಈ ಶಾಸನವನ್ನು ಬರೆದಿರುವ ಕಲ್ಲು ೧೨.೭೦ ಮೀ. ಉದ್ದವಿದೆ (ಚಿತ್ರ ೬). ಅದೇ ಕಲ್ಲಿನ ಮೇಲೆ ಶಾಸನದ ಎಡ ಭಾಗದಲ್ಲಿ ನಿಂತ ದೇವತೆಯ ಮತ್ತು ಬಲಭಾಗದಲ್ಲಿ ಕುಳಿತಿರುವ ಗಣೇಶನ ಭಗ್ನ ಶಿಲ್ಪಗಳಿವೆ. ಶಾಸನದ ಬಲಕ್ಕೆ ಮತ್ತೊಂದು ಕಲ್ಲಿನ ಮೇಲೆ ಶಾಸನದ ಕಲ್ಲು ಅಥವಾ ಅಂತಹ ಮತ್ತೊಂದು ದೊಡ್ಡ ಕಲ್ಲನ್ನು ಬಂಡಿಯ ಮೇಲೆ ಸಾಗಿಸುತ್ತಿರುವ ರೇಖಾಚಿತ್ರವಿದೆ (ಚಿತ್ರ ೭). ನಾಲ್ಕು ಗಟ್ಟಿ ಗಾಲಿಗಳಿರುವ ಬಂಡಿಯಲ್ಲಿ ಕಲ್ಲನ್ನು ಹೇರಿದೆ. ಬಂಡಿಯನ್ನು



ನಾಲ್ಕು ಜೊತೆ ಕೋಣಗಳು ಎಳೆಯುತ್ತಿವೆ. ಎಲ್ಲಕ್ಕೂ ಮುಂದೆ ನಡೆದು ಹೋಗುತ್ತಿರುವ ಒಬ್ಬ ಮನುಷ್ಯನು ಮುಂದಿನ ಜೊತೆ ಕೋಣಗಳಿಗೆ ಕಟ್ಟಿದ ಹಗ್ಗವನ್ನು ಎರಡು ಕೈಗಳಲ್ಲಿ ಹಿಡಿದು ಜಗ್ಗುತ್ತ ಮುಂದೆ ಹೋಗುತ್ತಿದ್ದಾನೆ. ಒಂದೊಂದು ಜೊತೆ ಕೋಣಗಳನ್ನು ಒಂದೊಂದು ನೊಗಕ್ಕೆ ಕಟ್ಟಿದೆ. ಪ್ರತಿಯೊಂದು ಜೊತೆಯನ್ನು ಬಾರುಕೋಲು ಹಿಡಿದ ಒಬ್ಬ ಮನುಷ್ಯ ನಿಯಂತ್ರಿಸುತ್ತಿದ್ದಾನೆ. ಅವರು ಬಂಡಿಗೆ ಕಟ್ಟಿದ ಈಸು ಅಥವಾ ಹಗ್ಗದ ಮೇಲೆ ಕುಳಿತ್ತಿದ್ದಾರೆ. ಒಬ್ಬೊಬ್ಬರನ್ನು ಒಂದೊಂದು ಭಂಗಿಯಲ್ಲಿ ಚಿತ್ರಿಸಿದೆ. ಮೊದಲಿನವನು ನೆಟ್ಟಗೆ ಕುಳಿತು, ಕೋಣಗಳ ಹಗ್ಗವನ್ನು ಹಿಡಿದ ಎಡಗೈ ಮತ್ತು ಬಾರುಕೋಲು ಹಿಡಿದ ಬಲಗೈ ಎರಡನ್ನೂ ಸ್ವಲ್ಪ ಮೇಲೆತ್ತಿದ್ದಾನೆ. ಬಾಗಿ ಕುಳಿತಿರುವ ಎರಡನೆಯವನ ಕೈಗಳು ಮುಂದಕ್ಕೆ ಚಾಚಿವೆ. ನೆಟ್ಟಗೆ ಕುಳಿತ ಮೂರನೆಯವನು ಮುಂದೆ ಚಾಚಿದ ಎಡಗೈಯಲ್ಲಿ ಕೋಣಗಳ ಹಗ್ಗವನ್ನು ಮತ್ತು ತಲೆಯ ಎತ್ತರಕ್ಕೆ ಎತ್ತಿದ ಬಲಗೈಯಲ್ಲಿ ಬಾರಕೋಲನ್ನು

ಒಡಿದಿದ್ದಾನೆ. ಕಲ್ಲಿನ ಮುಂಭಾಗ ನಾಲ್ಕನೇ ಜೊತೆಯ ಕೋಣಗಳ ತಲೆಯ ಮೇಲಿನವರೆಗೆ ಚಾಚಿರುವುದರಿಂದ ನಾಲ್ಕನೆಯವನಿಗೆ ಈಸಿನ ಮೇಲೆ ಕೂಡಲು ಸಾಧ್ಯವಾಗಿಲ್ಲ. ಅವನು ಕಲ್ಲಿನ ಮುಂಭಾಗದ ಮೇಲೆ ಕುಳಿತು ಕೋಣಗಳ ಹಗ್ಗ ಮತ್ತು ಬಾರಕೋಲನ್ನು ಒಡಿದಿದ್ದಾನೆ. ಅದೇ ರೀತಿ ಪ್ರತಿಯೊಂದು ಕೋಣವನ್ನು ನೈಜವಾಗಿ ಚಿತ್ರಿಸಿದೆ. ಚಿತ್ರದಲ್ಲಿ ಪಾರ್ಶ್ವ ನೋಟವಿರುವುದರಿಂದ ನಾಲ್ಕು ಕೋಣಗಳು ಮಾತ್ರ ಕಾಣುತ್ತಿವೆ. ತಲೆ ಬಗ್ಗಿಸಿದ ಮೊದಲನೇ ಕೋಣದ ಬಾಲ ಒಂದು ಸುರುಳಿ ಸುತ್ತಿಕೊಂಡು ಬೆನ್ನ ಮೇಲೆ ಬಂದಿದೆ. ತಲೆ ಎತ್ತಿದ ಎರಡನೇ ಕೋಣದ ಬಾಲ ಕೆಳಗೆ ಇಳಿಬಿದ್ದಿದೆ. ತಲೆ ಬಗ್ಗಿಸಿದ ಮೂರನೇ ಕೋಣದ ನಾಲಗೆ ಹೊರ ಚಾಚಿದೆ ಮತ್ತು ಬಾಲ ಸ್ವಲ್ಪ ಮೇಲೆದ್ದು ಪಕ್ಕಕ್ಕೆ ಬಂದಿದೆ. ನಾಲ್ಕನೇ ಕೋಣದ ನಾಲಗೆಯೂ ಮುಂದೆ ಚಾಚಿದೆ ಮತ್ತು ಬಾಲ ಮೇಲಕ್ಕೆದ್ದು ಒಂದು ಸುರುಳಿಯಾಗಿ ಪಕ್ಕಕ್ಕೆ ಬಂದಿದೆ. ಕೋಣಗಳ ಕಾಲುಗಳನ್ನು ವಿಭಿನ್ನ ರೀತಿಯಲ್ಲಿ ಹಿಂದೆ ಮುಂದೆ ಚಿತ್ರಿಸಿ ಅವುಗಳ ಚಲನೆಯನ್ನು ಸೂಚಿಸಿದೆ. ಕೋಣಗಳ ಮೇಲೆ ಬಿದ್ದಿರುವ ಕಲ್ಲಿನ ಭಾರವು ಬಾಗಿದ ನಡು, ಮೇಲೆತ್ತಿದ ಬಾಲ ಮತ್ತು ಹೊರಬಂದ ನಾಲಗೆಯಿಂದ ವ್ಯಕ್ತವಾಗುತ್ತದೆ. ಕಲ್ಲನ್ನು ಸಾಗಿಸುವ ಕಾರ್ಯದಲ್ಲಿ ಇನ್ನೂ ಏಳು ಜನ ಕೋಣಗಳಿಗೆ ಸಹಾಯ ಹಸ್ತ ನೀಡುತ್ತಿದ್ದಾರೆ. ಬಂಡಿಯ ಹಿಂಭಾಗದಲ್ಲಿ ಒಂದು ದೊಡ್ಡ ಸನ್ನೆ ಕೋಲಿನ ಒಂದು ತುದಿಯನ್ನು ಹಿಂದಿನ ಚಕ್ರದಡಿಯಲ್ಲಿಟ್ಟಿದೆ. ಇನ್ನೊಂದು ತುದಿಯನ್ನು ಕೆಳಗೆ ನಿಂತ ಮೂವರು ಕೆಳಗೆಳೆಯುತ್ತಿದ್ದಾರೆ. ಇನ್ನೂ ಮೂವರು ಕೋಲಿನ ಮೇಲೆ ಕುಳಿತು ತಮ್ಮ ಭಾರದಿಂದ ಕೋಲನ್ನು ಕೆಳಗೆ ತಳ್ಳುತ್ತಿದ್ದಾರೆ. ಕೆಳಗಿನವರು ಮುಂದಕ್ಕೆ ಮುಖ ಮಾಡಿದರೆ ಮೇಲಿನವರು ಹಿಂದಕ್ಕೆ ಮುಖ ಮಾಡಿದ್ದಾರೆ. ಕಲ್ಲಿನ ಮಧ್ಯ ಭಾಗದ ಮೇಲೆ ಹಿಮ್ಮುಖವಾಗಿ ಕುಳಿತ ಮತ್ತೊಬ್ಬನು ಕೈಯಲ್ಲಿ ಹಗ್ಗವನ್ನು ಹಿಡಿದು ಹಿಂದಿನವರಿಗೆ ನಿರ್ದೇಶನ ನೀಡುತ್ತಿದ್ದಾನೆ. ಅಸಾಧಾರಣ ಭಾರದ ಕಲ್ಲನ್ನು ಸಾಗಿಸುತ್ತಿರುವ ಸಮಕಾಲೀನವಾದ ಈ ಚಿತ್ರ ಬಹಳ ಮಹತ್ವದ್ದು.

ಮೇಲಿನ ಚಿತ್ರದ ಬಲಕ್ಕೆ ಆರು ರಥಗಳ ಮೆರವಣಿಗೆಯ ದೃಶ್ಯವಿದೆ. ರಥಗಳನ್ನು ಎಳೆಯುತ್ತಿರುವ ಎತ್ತುಗಳ ಕೊರಳಲ್ಲಿ ಗೆಜ್ಜೆ ಸರಗಳಿವೆ. ಗಟ್ಟಿ ಗಾಲಿಗಳ ರಥಗಳ ಪಾರ್ಶ್ವಭಾಗಗಳನ್ನು ನಾಲ್ಕು ದಳಗಳ ಹೂವಿನ ಚಿತ್ರದಿಂದ ಅಲಂಕರಿಸಿದೆ. ಪ್ರತಿ ರಥಗಳಲ್ಲಿ ಒಂದು ಛತ್ರಿ ಮತ್ತು ಬಾವುಟಗಳಿವೆ. ಬಾವುಟದ ಸ್ತಂಭಕ್ಕೆ ಕೆಲವು ಪತಾಕೆಗಳೂ ಇವೆ (ಚಿತ್ರ ೮). ರಥಗಳು ಹೋಗುವ ರಭಸಕ್ಕೆ ಬಾವುಟಗಳು ಹಿಂದಕ್ಕೆ ಗಾಳಿಯಲ್ಲಿ ಹಾರಾಡುತ್ತಿವೆ. ಪ್ರತಿಯೊಬ್ಬ ಸಾರಥಿಯು ಎಡಗೈಯಲ್ಲಿ ಎತ್ತುಗಳ ಹಗ್ಗ ಮತ್ತು ಮೇಲೆತ್ತಿದ ಬಲಗೈಯಲ್ಲಿ ಬಾರುಕೋಲನ್ನು ಒಡಿದು ನಿಂತಿದ್ದಾನೆ. ಪ್ರತಿಯೊಂದು ರಥದಲ್ಲಿ ಒಬ್ಬ ಸಾರಥಿ ಮಾತ್ರ ಇದ್ದಾನೆ. ಆದರೆ ನಾಲ್ಕನೇ ರಥದಲ್ಲಿ



೯. ರಾಯಚೂರು, ಹೊರಕೋಟೆ, ಚೌಕಾಕಾರದ ಬುರುಜುಗಳು



೧೦. ರಾಯಚೂರು, ಹೊರಕೋಟೆ, ವೃತ್ತಾಕಾರದ ಬುರುಜುಗಳು



೧೧. ರಾಯಚೂರು, ಅಲಿ ಬುರುಜು



೧೨. ರಾಯಚೂರು, ಫತೇ ಬುರುಜು



೧೩. ರಾಯಚೂರು, ಹೊರಕೋಟೆ, ಖಾದರಿಯಾ ಬುರುಜು



೧೪. ರಾಯಚೂರು, ಹೊರಕೋಟೆ, ಬಂಡಾಬೌಡಿ ಬುರುಜು

ಸಾರಥಿಯ ಹಿಂದೆ ಮತ್ತೊಬ್ಬನಿದ್ದಾನೆ. ಒಂದು ಕೈಯಿಂದ ಛತ್ರಿಯ ಕಂಬವನ್ನು ಹಿಡಿದು ನಿಂತ ಈತನು ಮುಖವನ್ನು ಹಿಂದಕ್ಕೆ ತಿರುಗಿಸಿ, ಮತ್ತೊಂದು ಕೈಯನ್ನು ಅದೇ ದಿಕ್ಕಿನಲ್ಲಿ ಮುಂದೆ ಚಾಚಿ ಹಿಂದೆ ಬರುತ್ತಿರುವ ರಥದ ಸಾರಥಿಗೆ ನಿರ್ದೇಶನ ನೀಡುತ್ತಿದ್ದಾನೆ. ಈ ಚಿತ್ರವಿರುವ ಕಲ್ಲಿನ ಮೇಲ್ಭಾಗದಲ್ಲಿ ಎಡಕ್ಕಿರುವ ಕಲ್ಲಿನ ಮೇಲೆ ವೃತ್ತಾಕಾರದ ಹೂವಿನ ದೊಡ್ಡ ಚಿತ್ರವಿದೆ. ಅದರ ಪಕ್ಕದಲ್ಲಿ ಬಲಕ್ಕಿರುವ ಕಲ್ಲಿನ ಮೇಲೆ ಒಂದು ಪ್ರಾಣಿಯ ಅಸ್ಪಷ್ಟವಾದ ಚಿತ್ರವಿದೆ. ಅದರ ಹಿಂದೆ ಎರಡು ಪ್ರಾಣಿಗಳ ಚಿತ್ರಗಳಿವೆ. ಅವುಗಳ ಮೇಲ್ಭಾಗದಲ್ಲಿ ಕಾದಾಟದಲ್ಲಿ ತೊಡಗಿದ ಎರಡು ಹುಂಜಗಳಿವೆ. ಅವುಗಳ ಹಿಂದೆ ನಿಂತಿರುವ ಮನುಷ್ಯನೊಬ್ಬನು ಅವುಗಳಿಗೆ ಪ್ರೋತ್ಸಾಹ ನೀಡಿ ಪ್ರಚೋದಿಸುತ್ತಿದ್ದಾನೆ.

ಇಲ್ಲಿಂದ ಮುಂದಕ್ಕೆ ದಕ್ಷಿಣಕ್ಕೆ ಸ್ವಲ್ಪ ದೂರದಲ್ಲಿ ರಾಮಾಯಣದ ದೃಶ್ಯವಿದೆ. ವಾಲಿಸುಗ್ರೀವರ ಯುದ್ಧದಲ್ಲಿ ರಾಮನು ಸಪ್ತಸಾಲ ವೃಕ್ಷಗಳ ಹಿಂದೆ ನಿಂತು ಬಾಣವನ್ನು ಬಿಡುತ್ತಿದ್ದಾನೆ. ವೃಕ್ಷಗಳ ಕೆಳಗೆ ದೊಡ್ಡ ಸರ್ಪವಿದೆ. ಇಲ್ಲಿಂದ ದಕ್ಷಿಣಕ್ಕೆ ದೇವತೆ, ದ್ವಾರಪಾಲ, ಹೂಬಳ್ಳಿಯ ವಿನ್ಯಾಸಗಳು, ಬೇಟೆ ಮುಂತಾದ ವಿವಿಧ ಕ್ರಿಯೆಗಳಲ್ಲಿ ತೊಡಗಿದ ಮನುಷ್ಯರು, ಎತ್ತು, ಆನೆ, ಹಂದಿ, ನರಿ, ಹುಂಜ, ಹಂಸ, ಮುಂತಾದ ಚಿತ್ರಗಳಿವೆ.

ಪಶ್ಚಿಮಾಭಿಮುಖವಾಗಿರುವ ಸೈಲಾನಿ ದರ್ವಾಜ ಬಸ್ಸು ನಿಲ್ದಾಣದ ಹತ್ತಿರವಿದೆ. ಬಾಗಿಲ ಆವರಣದಲ್ಲಿ ಸೈಲಾನಿ ಮಸೀದಿ ಮತ್ತು ದರ್ಗಾಗಳಿದ್ದು, ಬಾಗಿಲ ದಕ್ಷಿಣ ಭಾಗವನ್ನು ಬೀಳಿಸಿ ರಸ್ತೆ ಮಾಡಿರುವುದರಿಂದ ಬಾಗಿಲಿನ ವಿವರಗಳು ತಕ್ಷಣದಲ್ಲಿ ಗೋಚರಿಸುವುದಿಲ್ಲ. ಈ ಬಾಗಿಲು ಎರಡು ಚೌಕಾಕಾರದ ಕೊತ್ತಳಗಳ ಮಧ್ಯದಲ್ಲಿದೆ. ದಕ್ಷಿಣ ದಿಕ್ಕಿನ ಕೊತ್ತಳದ ಮುಂದಿನಿಂದ ಪ್ರಾರಂಭವಾಗುವ ಒಂದು ಗೋಡೆ ಪಶ್ಚಿಮಕ್ಕೆ ಸಾಗಿ ಮುಂದೆ ಉತ್ತರಕ್ಕೆ ತಿರುಗಿ ಮುಂದೆ ಹೋಗಿದೆ. L ಆಕಾರದ ಈ ಗೋಡೆ ಬಾಗಿಲನ್ನು ವೈರಿಯ ಕಣ್ಣಿನಿಂದ ಮರೆಮಾಡುವುದಲ್ಲದೆ ಬಾಗಿಲ ಮುಂದೆ ಆವರಣವನ್ನು ನಿರ್ಮಿಸುತ್ತದೆ. ಈ ಆವರಣಕ್ಕೆ ಉತ್ತರದಿಂದ ಪ್ರವೇಶವಿದೆ. ಕಾಕತೀಯರ ಕಾಲದ ಈ ಬಾಗಿಲು ಈಗಲೂ ಸುಸ್ಥಿತಿಯಲ್ಲಿದೆ. ಆದರೆ ಆ ಕಾಲದ ಬಾಗಿಲ ಚೌಕಟ್ಟನ್ನು ತೆಗೆದು ಮುಸ್ಲಿಮರ ಕಾಲದ ಚೌಕಟ್ಟನ್ನು ಇಡಲಾಗಿದೆ. ತೋಳು ಮತ್ತು ತೊಲೆಗಳ ಬಾಗಿಲ ಚೌಕಟ್ಟಿನ ಮೇಲೆ ಕಮಾನು ಇಲ್ಲ. ಚೌಕಟ್ಟಿನ ಪಾರ್ಶ್ವಗಳಲ್ಲಿ ಕಮಾನಿನಾಕಾರದ ಎರಡು ಉಪ ಬಾಗಿಲುಗಳಿವೆ. ಬಾಗಿಲ ಮತ್ತು L ಆಕಾರದ ಗೋಡೆಯ ಮೇಲೆ ಮುಸ್ಲಿಮರ ಕಾಲದ ತೆನೆಗಳಿವೆ.

ಪೂರ್ವಾಭಿಮುಖವಾಗಿರುವ ಸಿಕಂದರೀ ದರ್ವಾಜವು ಸಹ ಎರಡು ಚೌಕಾಕಾರದ ಕೊತ್ತಳಗಳ ಮಧ್ಯದಲ್ಲಿದೆ. ಇಲ್ಲಿಯೂ ಸಹ ಉತ್ತರ ದಿಕ್ಕಿನ ಕೊತ್ತಳದ ಸ್ವಲ್ಪ ಭಾಗ ಮತ್ತು ಅದರ ಪಕ್ಕದ ಗೋಡೆಯನ್ನು

ಇತ್ತೀಚಿನ ವರ್ಷಗಳಲ್ಲಿ ಬೀಳಿಸಿ ರಸ್ತೆಯನ್ನು ನಿರ್ಮಿಸಲಾಗಿದೆ. ಬಾಗಿಲ ಚೌಕಟ್ಟುಗಳನ್ನು ತೆಗೆದು ಹಾಕಲಾಗಿದೆ. ಮುಖ್ಯ ಬಾಗಿಲ ಚೌಕಟ್ಟಿನ ಪಕ್ಕದಲ್ಲಿ ದಕ್ಷಿಣಕ್ಕೆ ಇದ್ದ ಉಪಬಾಗಿಲಿನ ಚೌಕಟ್ಟಿನ ಅವಶೇಷಗಳನ್ನು ಈಗಲೂ ಇಲ್ಲಿ ನೋಡಬಹುದು. ಬಾಗಿಲ ಮುಂದಿನ ಕೊತ್ತಳಗಳ ಗೋಡೆಯ ಮೇಲೆ ದೇವತೆಗಳ ಉಬ್ಬುಶಿಲ್ಪಗಳಿವೆ. ದಕ್ಷಿಣ ಗೋಡೆಯ ಮೇಲೆ ತೋರಣದಿಂದ ಅಲಂಕಾರಗೊಳಿಸಿದ ಕೋಷ್ಠದಲ್ಲಿ ಗಣೇಶನ ಶಿಲ್ಪವಿದೆ. ಉತ್ತರ ಗೋಡೆಯ ಕೋಷ್ಠದಲ್ಲಿ ನಿಂತ ದೇವತೆಯ ಶಿಲ್ಪವಿದೆ. ಶಿಲ್ಪಗಳನ್ನು ಮುಸ್ಲಿಮರ ಕಾಲದಲ್ಲಿ ಭಗ್ನ ಗೊಳಿಸಲಾಗಿದೆ. ಈ ಗೋಡೆಗಳ ಮೇಲೆ ವಿಜಯನಗರ ಅರಸರಾದ ಸದಾಶಿವರಾಯ ಮತ್ತು ರಾಮರಾಯರ ಮೂರು ಕನ್ನಡ ಶಾಸನಗಳಿವೆ. ಉತ್ತರ ದಿಕ್ಕಿನ ಕೊತ್ತಳದ ಮುಂಭಾಗದಲ್ಲಿ L ಆಕಾರದ ಗೋಡೆಯನ್ನು ಕಟ್ಟಿ ದಕ್ಷಿಣಾಭಿಮುಖವಾದ ಹೊಸ ಬಾಗಿಲನ್ನು ಕಟ್ಟಿದೆ. ತೋಳು ಮತ್ತು ತೊಲೆಗಳ ಬಾಗಿಲ ಮೇಲೆ ಕುರುಡು ಕಮಾನು (blind arch) ಇದೆ. ಕಮಾನಿನಲ್ಲಿರುವ ಪರ್ಶಿಯನ್ ಶಾಸನದಿಂದ ಈ ಬಾಗಿಲನ್ನು (ದಹ್‌ಲೀಜ್) ಬಿಜಾಪುರದ ಅರಸ ಸಿಕಂದರ್‌ನ ಕಾಲದಲ್ಲಿ ಆಖಾಖುಶ್ರೌ ಕ್ರಿ.ಶ. ೧[illegible]೭೩-೭೪ ರಲ್ಲಿ ಕಟ್ಟಿಸಿದನೆಂಬುದು ತಿಳಿಯುತ್ತದೆ.[೫೪] ಪ್ರವೇಶದ ಪಾರ್ಶ್ವಗಳಲ್ಲಿಯ ಕಟ್ಟೆಗಳ ಮೇಲೆ ಕಮಾನಿನ ಅಂಕಣಗಳಿವೆ. ಬಾಗಿಲ ಪಕ್ಕದಲ್ಲಿ ಎರಡು ಚಿಕ್ಕ ಉಪ ಬಾಗಿಲುಗಳಿವೆ. ಬಾಗಿಲಿನ ಆವರಣದ ಈಶಾನ್ಯ ಮೂಲೆಯಲ್ಲಿ ಒಂದು ದರ್ಗಾ ಇದೆ.

ಒಳಕೋಟೆಯ ಎರಡು ಬಾಗಿಲುಗಳ ಕಾಕತೀಯರ ಕಾಲದ ಚೌಕಟ್ಟುಗಳನ್ನು ಹೊರ ಕೋಟೆಯ ಕಾಟೀ ದರ್ವಾಜ ಮತ್ತು ನವರಂಗ್ ದರ್ವಾಜಗಳಲ್ಲಿ ಸೇರಿಸಿ ಕಟ್ಟಲಾಗಿದೆ.

### ಹೊರಕೋಟೆ

ಒಳಕೋಟೆಯನ್ನು ನಾಲ್ಕು ದಿಕ್ಕಿನಲ್ಲಿ ಸುತ್ತುವರಿದ ಹೊರಕೋಟೆ ಅನಿಮಿತಾಕಾರದಲ್ಲಿದ್ದು, ರಚನೆಯಲ್ಲಿ ಭಿನ್ನವಾಗಿದೆ. ಕೋಟೆಯ ಹೊರಗೆ ಅಗಲ ಮತ್ತು ಆಳವಾದ ಕಂದಕವಿದೆ. ಇತ್ತೀಚಿನ ವರ್ಷಗಳಲ್ಲಿ ಪೂರ್ವ ದಿಕ್ಕಿನ ಕಂದಕವನ್ನು ಮುಚ್ಚಿಹಾಕಿ ಅದರ ಮೇಲೆ ಮನೆಗಳನ್ನು ಕಟ್ಟಲಾಗಿದೆ. ದಕ್ಷಿಣ ದಿಕ್ಕಿನಲ್ಲಿ ಕೋಟೆ ಬೆಟ್ಟದ ಮೇಲಿದ್ದು ಬೆಟ್ಟದ ದಕ್ಷಿಣಕ್ಕೆ ದೊಡ್ಡ ಕೆರೆ ಇದೆ. ಈ ಕೆರೆಯಿಂದ ಕಂದಕಕ್ಕೆ ನೀರು ಬಿಡುತ್ತಿದ್ದರು. ಕೋಟೆಯ ನೈರುತ್ಯ ಭಾಗದಲ್ಲಿ ದಿಡ್ಡಿ ದರ್ವಾಜದ ಮೇಲಿರುವ ಶಾಸನವು ಇಲ್ಲಿಯ ದಿಡ್ಡಿ ಬಾಗಿಲು ಮತ್ತು ಕಡಿದಾದ ಬಂಡೆಯವರೆಗಿನ ಕಂದಕವನ್ನು ಎರಡನೇ ಇಬ್ರಾಹಿಮ್‌ಆದಿಲ್ ಶಾಹನ ಕಾಲದಲ್ಲಿ ಕಂದೀಲ್‌ದಾರನಾದ ಯೂಸುಫ್ ಅಲಿಯು ಕ್ರಿ.ಶ. ೧೫೮೨ರಲ್ಲಿ ಕಟ್ಟಿಸಿದನೆಂದು ಉಲ್ಲೇಖಿಸುತ್ತದೆ. ಕೋಟೆಯ ಸುತ್ತಲಿರುವ

ಕಂದಕದ ಎರಡು ಬದಿಗಳನ್ನು ದಪ್ಪ ಕಲ್ಲಿನಿಂದ ಕಟ್ಟಿದೆ. ಕೋಟೆಯ ಪಕ್ಕದಲ್ಲಿಯ ಬದಿಯನ್ನು ಕೋಟೆಯ ಆಕಾರವನ್ನು ಅನುಸರಿಸಿ ಅದರಂತೆಯೇ ರಚಿಸಿದೆ. ಕಂದಕವು ಕೋಟೆ ಗೋಡೆಯಿಂದ ಸ್ವಲ್ಪ ದೂರದಲ್ಲಿದೆ.

ಹೊರಕೋಟೆಯನ್ನು ದಪ್ಪ ಕಲ್ಲುಗಳಿಂದ ಕಟ್ಟಿದೆ. ಇವು ಗಾತ್ರದಲ್ಲಿ ಒಳಕೋಟೆಯ ಕಲ್ಲುಗಳಿಗಿಂತ ಬಹಳ ಚಿಕ್ಕವಾಗಿದ್ದು ಉದ್ದವಾಗಿರದೆ ಸರಿಸುಮಾರು ಚೌಕಾರದಲ್ಲಿವೆ. ಈ ಕೋಟೆಯ ಗೋಡೆಯ ರಚನೆಯಲ್ಲಿ ಸಹ ಯಾವುದೇ ಗಾರೆಯನ್ನು ಬಳಸಿಲ್ಲ. ಕೋಟೆಯಲ್ಲಿಯ ಕೊತ್ತಳ ಅಥವಾ ಬುರುಜುಗಳು ವೃತ್ತಾಕಾರವಾಗಿದ್ದರೂ ಅಲ್ಲಲ್ಲಿ ಚೌಕಾಕಾರದ ಕೊತ್ತಳಗಳಿವೆ (ಚಿತ್ರ ೯). ಬಾಗಿಲು ಮತ್ತು ಬುರುಜುಗಳ ಮೇಲಿನ ಅನೇಕ ಶಾಸನಗಳಿಂದ ಮತ್ತು ಬಾಗಿಲಿನಲ್ಲಿಯ ಶಿಲ್ಪಗಳಿಂದ ಈ ಕೋಟೆಯು ಗುಲ್ಬರ್ಗದ ಬಹಮನಿ, ಬಿಜಾಪುರದ ಆದಿಲ್‌ಶಾಹಿ ಮತ್ತು ವಿಜಯನಗರ ಅರಸರ ಕಾಲದಲ್ಲಿ ನಿರ್ಮಾಣವಾಗಿದೆ ಎಂಬುದು ತಿಳಿಯುತ್ತದೆ.

ಕೋಟೆ ಗೋಡೆಯ ಮೇಲ್ಭಾಗ ಅಗಲವಾಗಿದ್ದು ನಡೆದಾಡಲು ದಾರಿಯಿದೆ. ಗೋಡೆಯ ಮತ್ತು ಬುರುಜುಗಳ ಮೇಲೆ ಇರುವ ಎತ್ತರವಾದ ಕೈಪಿಡಿ ಗೋಡೆಯಲ್ಲಿ ಎತ್ತರವಾದ ತೆನೆಗಳು ಮತ್ತು ಮುಂಚಾಚು (projecting balcony)ಗಳಿವೆ (ಚಿತ್ರ ೧೦). ಇವುಗಳಲ್ಲಿ ಬಂದೂಕುಗಳಿಗಾಗಿ ಮಾಡಿದ ಚಿಕ್ಕ ಕಿಂಡಿಗಳು ಮತ್ತು ತೋಪುಗಳಿಗಾಗಿ ಮಾಡಿದ ಅಗಲವಾದ ಕಿಂಡಿಗಳು ಇವೆ. ತೆನೆಗಳ ಮೇಲ್ಭಾಗ ವೃತ್ತಾಕಾರವಾಗಿದೆ.

### ಬಾಗಿಲುಗಳು

ಹೊರ ಕೋಟೆಯಲ್ಲಿ ನಾಲ್ಕು ಮುಖ್ಯ ದಿಕ್ಕುಗಳಲ್ಲಿ ನಾಲ್ಕು ದೊಡ್ಡ ಬಾಗಿಲುಗಳು ಮತ್ತು ವಿವಿಧ ದಿಕ್ಕುಗಳಲ್ಲಿ ನಾಲ್ಕು ಚಿಕ್ಕ ಬಾಗಿಲುಗಳಿವೆ. ದೊಡ್ಡ ಬಾಗಿಲುಗಳಲ್ಲಿ ಪಶ್ಚಿಮಕ್ಕಿರುವುದು ಮಕ್ಕಾ ದರ್ವಾಜ, ಉತ್ತರಕ್ಕಿರುವುದು ನವರಂಗ್ ದರ್ವಾಜ, ಪೂರ್ವಕ್ಕಿರುವುದು ಕಾಟೀ ದರ್ವಾಜ ಮತ್ತು ದಕ್ಷಿಣಕ್ಕಿರುವುದು ಕಂದಕ್ ದರ್ವಾಜ. ನೈರುತ್ಯಕ್ಕಿರುವ ಚಿಕ್ಕ ಬಾಗಿಲನ್ನು ದೊಡ್ಡಿದರ್ವಾಜವೆಂದು ಕರೆಯುತ್ತಾರೆ. ದರ್ವಾಜ ಎಂದರೆ ಪರ್ಶಿಯನ್ ಮತ್ತು ಉರ್ದು ಭಾಷೆಗಳಲ್ಲಿ ಬಾಗಿಲು ಎಂದರ್ಥ. ಈಗ ಈ ಬಾಗಿಲುಗಳನ್ನು ಒಂದೊಂದಾಗಿ ಗಮನಿಸೋಣ.

ಮಕ್ಕಾ ದರ್ವಾಜ : ಮುಸ್ಲಿಮರು ದೇವರನ್ನು ಪ್ರಾರ್ಥಿಸುವಾಗ ಪಶ್ಚಿಮಕ್ಕೆ ಮುಖ ಮಾಡುತ್ತಾರೆ. ಕಾರಣ ಅವರಿಗೆ ಪವಿತ್ರವಾದ ಮಕ್ಕಾ ಇರುವುದು ಈ ದಿಕ್ಕಿಗೆ. ಕೋಟೆಗಳಲ್ಲಿ ಪಶ್ಚಿಮಾಭಿಮುಖವಾಗಿರುವ ಬಾಗಿಲಿಗೆ ಸಾಮಾನ್ಯವಾಗಿ ಮಕ್ಕಾದರ್ವಾಜವೆಂದೇ ಹೆಸರಿಸುವರು. ಅದೇ ಪದ್ಧತಿಯನ್ನು ಅನುಸರಿಸಿ ಈ




೧೫. ರಾಯಚೂರು, ಮಕ್ಕಾ ದರ್ವಾಜ



೧೬. ರಾಯಚೂರು, ಮಕ್ಕಾ ದರ್ವಾಜ, ಪಶ್ಚಿಮ ದಿಕ್ಕಿನ ಹೊರಬಾಗಿಲು, ಒಳಗಿನಿಂದ



೧೭. ರಾಯಚೂರು, ಮಕ್ಕಾ ದರ್ವಾಜ, ದಕ್ಷಿಣ ದಿಕ್ಕಿನ ಹೊರಬಾಗಿಲು, ಒಳಗಿನಿಂದ

ಬಾಗಿಲಿಗೆ ಮಕ್ಕಾದರ್ವಾಜವೆಂದೇ ಹೆಸರಿಟ್ಟಿದ್ದಾರೆ. ಈ ಬಾಗಿಲ ಸಂಕೀರ್ಣದಲ್ಲಿ ಹೊರಗಿನಿಂದ ಒಳಗೆ ಹೋಗಬೇಕಾದರೆ ಅಂಕುಡೊಂಕಾದ ದಾರಿಯಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ದಿಕ್ಕಿಗೆ ಮುಖ ಮಾಡಿರುವ ಮೂರು ಬಾಗಿಲುಗಳ ಮೂಲಕ ಹೋಗಬೇಕು. ವಾಹನಗಳ ಓಡಾಟಕ್ಕೆ ಅನುಕೂಲವಾಗುವಂತೆ ಮಾಡಲು ಸಂಕೀರ್ಣದ ಒಂದು ಭಾಗವನ್ನು ಬೀಳಿಸಿ ನೇರ ರಸ್ತೆಯನ್ನು ಇತ್ತೀಚಿನ ವರ್ಷಗಳಲ್ಲಿ ನಿರ್ಮಿಸಲಾಗಿದೆ.

ಬಾಗಿಲ ಸಂಕೀರ್ಣದ ಪಶ್ಚಿಮಕ್ಕೆ L ಆಕಾರದ ಗೋಡೆಯನ್ನು ಮುಂದೆ ಚಾಚಿ ಪಶ್ಚಿಮಾಭಿಮುಖವಾಗಿರುವ ಹೊರಬಾಗಿಲಿನ ಮುಂದೆ ಆಯತಾಕಾರದ ಆವರಣವನ್ನು ನಿರ್ಮಿಸಿದೆ (ಚಿತ್ರ ೧೬). L ಆಕಾರದ ಎರಡು ಹೊರ ಮೂಲೆಗಳಲ್ಲಿ ಎರಡು ವೃತ್ತಾಕಾರದ ಕೊತ್ತಳಗಳಿವೆ. ಆವರಣಕ್ಕೆ ದಕ್ಷಿಣದಿಂದ ಸಂಕೀರ್ಣದ ಗೋಡೆ ಮತ್ತು L ಆಕಾರದ ಗೋಡೆಯ ಹೊರ ಬುರುಜಿನ ಮಧ್ಯದಲ್ಲಿ ಪ್ರವೇಶವಿದೆ. ಪ್ರವೇಶಕ್ಕೆ ಅಭಿಮುಖವಾಗಿ ಆವರಣದ ಉತ್ತರ ಗೋಡೆಯಲ್ಲಿ ಮಧ್ಯದಲ್ಲಿ ಕಮಾನಿನ ಚಿಕ್ಕ ಬಾಗಿಲು ಮತ್ತು ಪಾರ್ಶ್ವಗಳಲ್ಲಿ ಎರಡು ಗೂಡುಗಳಿವೆ. ಈ ಆವರಣದ ಪಶ್ಚಿಮಕ್ಕೆ ಪೂರ್ವಾಭಿಮುಖವಾಗಿರುವ ಹೊರ ಬಾಗಿಲು ಇದೆ. ಈ ಬಾಗಿಲ ಹೊರ ಮತ್ತು ಒಳ ಬದಿಗಳಲ್ಲಿ ಕಮಾನುಗಳಿದ್ದು, ಮಧ್ಯದ ಪ್ರವೇಶದ ಎರಡೂ ಬದಿಗೆ ಕಟ್ಟೆಗಳ ಮೇಲೆ ಕಾವಲುಗಾರರ ಕೊಠಡಿಗಳಿವೆ. ಈ ಬಾಗಿಲಿನ ಛಾವಣಿಯ ಮೇಲೆ ನಾಲ್ಕು ದಿಕ್ಕಿನಲ್ಲಿ ನಾಲ್ಕು ಕಮಾನುಗಳ ಬಾಗಿಲುಗಳುಳ್ಳ ಕಾವಲು ಗೋಪುರವಿದೆ. ಹೊರ ಬಾಗಿಲ ಪಶ್ಚಿಮಕ್ಕೆ ಮತ್ತೊಂದು ಆವರಣವಿದೆ. ಈ ಆವರಣದ ದಕ್ಷಿಣಕ್ಕೆ ಉತ್ತರಾಭಿಮುಖವಾಗಿರುವ ಮಧ್ಯದ ಬಾಗಿಲು ಇದೆ (ಚಿತ್ರ ೧೭). ಈ ಬಾಗಿಲು ಹೊರ ಬಾಗಿಲಿನಂತೆಯೇ ಇದೆ. ಮಧ್ಯದ ಬಾಗಿಲಿನಿಂದ ಒಳಗೆ ಬಂದು ಪೂರ್ವಕ್ಕೆ ತಿರುಗಿ ಮುಂದೆ ಹೋದಾಗ ಪಶ್ಚಿಮಾಭಿಮುಖವಾಗಿರುವ ಒಳ ಬಾಗಿಲು ಎದುರಾಗುತ್ತದೆ. ವಾಹನಗಳ ಓಡಾಟಕ್ಕಾಗಿ ಈ ಬಾಗಿಲನ್ನು ಬೀಳಿಸಲಾಗಿದೆ. ಪ್ರವೇಶದ ಪಾರ್ಶ್ವಗಳಲ್ಲಿಯ ಪ್ರತಿ ಗೋಡೆಯಲ್ಲಿ ನಾಲ್ಕು ಅರೆಗಂಬಗಳು ಕಾಣುತ್ತವೆ. ಆದುದರಿಂದ ಈ ಬಾಗಿಲು ಹಲವು ಕಂಬಗಳಿಂದ ನಿರ್ಮಿತವಾಗಿದ್ದುದು ಸ್ಪಷ್ಟವಾಗುತ್ತದೆ. ಈ ಬಾಗಿಲಿನ ನೇರಕ್ಕೆ ಪಶ್ಚಿಮಕ್ಕಿರುವ ಗೋಡೆಯ ಭಾಗವನ್ನು ಬೀಳಿಸಿ ನೇರ ರಸ್ತೆಯನ್ನು ನಿರ್ಮಿಸಿದೆ. ಮಧ್ಯದ ಬಾಗಿಲ ಎದುರಿಗ ಮತ್ತೊಂದು ಬಾಗಿಲಿದೆ. ಈ ಬಾಗಿಲ ಉತ್ತರ ಬದಿಯಲ್ಲಿ ಕಮಾನಿನ ಪ್ರವೇಶವಿದ್ದರೆ ದಕ್ಷಿಣ ಬದಿಗೆ ತೋಳು-ತೊಲೆಗಳ ಚಿಕ್ಕ ಬಾಗಿಲ ಚೌಕಟ್ಟಿದೆ. ಈ ಬಾಗಿಲ ಮೇಲಿನ ಶಾಸನವು ಬಹಮನಿ ಅರಸ ಮೂರನೇ ಮಹಮ್ಮದ್‌ಶಾಹನ ಕಾಲದಲ್ಲಿ ಕ್ರಿ.ಶ. ೧೪೬೯-೭೦ರಲ್ಲಿ ಮಲ್ಲುಖಾನ್‌ನಾಸಿಬ್‌ನು ಬಾಗಿಲನ್ನು ಕಟ್ಟಿಸಿದನೆಂದು ಉಲ್ಲೇಖಿಸುತ್ತದೆ.[೪೪] ಈ ಬಾಗಿಲ ದಕ್ಷಿಣಕ್ಕೆ ಬಾದಶಾಹ ಬುರುಜು ಇದೆ. ಈ ಬುರುಜಿನ ಪಶ್ಚಿಮಕ್ಕಿರುವ ಎತ್ತರವಿಲ್ಲದ ಮತ್ತೊಂದು ಗೋಡೆಯಲ್ಲಿ ಚಿಕ್ಕ ಬಾಗಿಲಿದೆ.

**ನವರಂಗ್ ದರ್ವಾಜ :** ಕೋಟೆಯ ಉತ್ತರ ದಿಕ್ಕಿನಲ್ಲಿರುವ ವಿಶಾಲವಾದ ಈ ಬಾಗಿಲ ಸಂಕೀರ್ಣದಲ್ಲಿ ನಾಲ್ಕು ಬಾಗಿಲುಗಳು ಮತ್ತು ಮೂರು ಆವರಣಗಳಿವೆ. ಬಾಗಿಲುಗಳು ನೇರವಾಗಿರದೆ, ಬೇರೆ ಬೇರೆ ದಿಕ್ಕುಗಳಲ್ಲಿ ಮತ್ತು ಸ್ಥಳಗಳಲ್ಲಿರುವುದರಿಂದ ಒಳ ಹೋಗುವ ದಾರಿ ಅಂಕುಡೊಂಕಾಗಿದೆ. ಮುಸ್ಲಿಮ್ ಶೈಲಿಯಲ್ಲಿ ಕಟ್ಟಿದ ಕಟ್ಟಡವನ್ನು ಹಿಂದೂ ಶೈಲಿಯಲ್ಲಿ ದೇವ ದೇವತೆಯರ, ರಾಮಾಯಣದ ಮತ್ತು ಅರಸರ ಶಿಲ್ಪಗಳಿಂದ ಅಲಂಕರಿಸಿರುವುದರಿಂದ ಇದು ಹಿಂದೂ-ಮುಸ್ಲಿಮ್ (Indo-Saracenic) ಶೈಲಿಯಲ್ಲಿದೆ. ರಾಯಚೂರು ಕೋಟೆಯಲ್ಲಿಯ ಅತ್ಯಂತ ಆಕರ್ಷಕ ಮತ್ತು ಸುಂದರವಾದ ಬಾಗಿಲನ್ನು ನವರಂಗ್ ದರ್ವಾಜವೆಂದು ಕರೆದಿರುವುದು ಸೂಕ್ತವಾಗಿದೆ.

ಹೊರಗಿನಿಂದ ಕೋಟೆಯೊಳಕ್ಕೆ ಪ್ರವೇಶ ಮಾಡುವಾಗ ಮೊದಲು ಸಿಗುವುದು ಪೂರ್ವಾಭಿಮುಖ ವಾಗಿರುವ ಹೊರ ಬಾಗಿಲು. ಶಿಥಿಲವಾಗಿರುವ ಈ ಬಾಗಿಲಿನ ಛಾವಣಿ ಬಿದ್ದು ಹೋಗಿ ಪುಷ್ಪ ಬೋದಿಗೆಗಳು ಮತ್ತು ಒಂದು ತೊಲೆ ಮಾತ್ರ ಉಳಿದಿವೆ. ಪ್ರವೇಶದ ಪಾರ್ಶ್ವಗಳಲ್ಲಿ ಕಾವಲುಗಾರರ ಕಮಾನಿನಾಕಾರದ ಒಂದೊಂದು ಗೂಡುಗಳಿವೆ. ಬಾಗಿಲಿನಿಂದ ಒಳಗೆ ಹೋದಾಗ ಆವರಣವನ್ನು ಪ್ರವೇಶಿಸುತ್ತೇವೆ. ಆವರಣದ ಪೂರ್ವಕ್ಕೆ ಬಾಗಿಲ ಪಕ್ಕದಲ್ಲಿ ಕೋಟೆ ಗೋಡೆಯ ಹೊರಬದಿಗುಂಟ ದಾರಿಯಿದೆ. ಆವರಣದ ಪಶ್ಚಿಮಕ್ಕೆ ಚಿಕ್ಕಬಾಗಿಲಿದೆ. ಬಾಗಿಲ ಪ್ರವೇಶದ ಪಾರ್ಶ್ವಗಳಲ್ಲಿ ಕಾವಲುಗಾರರ ಒಂದೊಂದು ಗೂಡುಗಳಿವೆ. ಈ ಬಾಗಿಲು ಕೋಟೆಗೋಡೆಯ ಹೊರ ಬದಿಯಲ್ಲಿ ಹೋಗಲು ಅವಕಾಶವನ್ನೊದಗಿಸುತ್ತದೆ. ಆವರಣದ ದಕ್ಷಿಣಕ್ಕೆ ಉತ್ತರಾಭಿಮುಖವಾಗಿರುವ ಎರಡನೇ ಬಾಗಿಲು ಇದೆ (ಚಿತ್ರ ೧೯).

ಎರಡನೆಯ ಬಾಗಿಲು ಎರಡು ವೃತ್ತಾಕಾರಗ ಕೊತ್ತಳಗಳ ಮಧ್ಯದಲ್ಲಿದೆ. ಕೊತ್ತಳಗಳ ಮೇಲ್ಭಾಗದಲ್ಲಿ ಮುಂಚಾಚು (projecting balcony)ಗಳಿವೆ. ಇವು ಶಿಥಿಲವಾಗಿದ್ದು ಕೆಳಭಾಗ ಮಾತ್ರ ಉಳಿದಿದೆ. ಬಾಗಿಲ ಚೌಕಟ್ಟು ಶಿಥಿಲವಾಗಿರುವುದರಿಂದ ಕಲ್ಲುಗಳ ಕಮಾನಿನ ಆಸರೆಯನ್ನು ಕೊಡಲಾಗಿದೆ. ಬಾಗಿಲ ಚೌಕಟ್ಟಿನ ತೋಳುಗಳು ಕಾಕತೀಯರ ಕಾಲದ ವಾರಂಗಲ್ಲಿನ ಕೋಟೆಯ ತೋಳುಗಳಂತೆ ಇವೆ.[೫೬] ಇವನ್ನು ದೇವಾಲಯಗಳ ಅರೆಗಂಬಗಳಂತೆ ಅಲಂಕರಿಸಿದೆ. ಮೇಲೆ ಪುಷ್ಪ ಬೋದಿಗೆ ಮತ್ತು ಕೂಡು-ಕೀರ್ತಿ ಮುಖ ಮತ್ತು ಹೂದಳಗಳಿಂದ ಅಲಂಕೃತವಾದ ತೊಲೆ ಇವೆ. ಚೌಕಟ್ಟಿನ ಮೇಲೆ ಕುರುಡು ಕಮಾನು (blind arch) ಇದೆ. ಕಮಾನಿನಲ್ಲಿ ಕೆಳಗೆ ಚಪ್ಪಟೆಯಾದ ಮಕರ ತೋರಣ ಮತ್ತು ಮೇಲೆ ಮೂರು ಶಿಲ್ಪ ಪಟ್ಟಿಕೆಗಳಿವೆ. ಕಾಕತೀಯ ಶೈಲಿಯಲ್ಲಿರುವ ಮಕರ ತೋರಣದ[೫೭] ವಲಯಗಳಲ್ಲಿ ರಂಧ್ರಗಳಿದ್ದು ಜಾಲಂಧ್ರದಂತೆ ಕಾಣುತ್ತದೆ. ಕಾಕತೀಯರ ಕಾಲದ ಬಾಗಿಲ




೧೮. ರಾಯಚೂರು, ನವರಂಗ ದರ್ವಾಜ

ಚೌಕಟ್ಟನ್ನು ಇಲ್ಲಿ ಪುನಃ ಉಪಯೋಗಿಸಿ ಕಟ್ಟಲಾಗಿದೆ. ಮೇಲಿನ ಶಿಲ್ಪ ಪಟ್ಟಿಕೆಯಲ್ಲಿ ಶಂಖ, ಚಕ್ರ ಮತ್ತು ನಾಮಗಳಿವೆ. ಮಧ್ಯದ ಪಟ್ಟಿಕೆಯಲ್ಲಿ ರಾಮ, ಲಕ್ಷ್ಮಣ, ಸೀತೆ ಮತ್ತು ವಾನರರಿದ್ದಾರೆ. ಕೆಳಗಿನ ಪಟ್ಟಿಕೆಯಲ್ಲಿ ನೃತ್ಯಗಾರರು, ಮಹಿಳೆಯ ಅಂಗಾಲಿನಿಂದ ಮುಳ್ಳನ್ನು ತೆಗೆಯುತ್ತಿರುವ ಪುರುಷ, ಹನುಮಂತ-ಗರುಡ ಮತ್ತು ವಾಲಿಸುಗ್ರೀವರಿದ್ದಾರೆ. ಕಟ್ಟಡದ ಮೇಲಿನ ತುದಿಯಲ್ಲಿ ಒಂದು ಬದಿಯಿಂದ ಇನ್ನೊಂದು ಬದಿಯವರೆಗೆ ಚಾಚಿ ಕೊಂಡಿರುವ ಉದ್ದವಾದ ಶಿಲ್ಪ ಪಟ್ಟಿಕೆಯಿದೆ. ಇದರಲ್ಲಿ ರಾಮಾಯಣದ ದೃಶ್ಯಗಳಿವೆ. ಬಲತುದಿಯಲ್ಲಿ ರಾಮನು ಸಪ್ತಸಾಲ ವೃಕ್ಷಗಳನ್ನು ಭೇದಿಸಿ ಬಾಣ ಬಿಡುತ್ತಿದ್ದಾನೆ. ಬಾಗಿಲೊಳಗೆ ಪ್ರವೇಶದ ಬದಿಗಳಲ್ಲಿ ಕಟ್ಟೆಗಳಿವೆ. ಕಟ್ಟೆಯ ಕೆಳಭಾಗ ಮಣ್ಣಲ್ಲಿ ಮುಚ್ಚಿದೆ. ಪ್ರತಿಕಟ್ಟೆಯ ಮೇಲೆ ಚೌಕಾಕಾರದ ದಪ್ಪ ಕಂಬಗಳ ಮೂರು ಅಂಕಣಗಳಿವೆ. ಕಂಬಗಳ ಮೇಲೆ ಆನೆಯ ಮೇಲೆ ಕುಳಿತ ಸಿಂಹ, ಗೋಪಿಕೆಯರ ವಸ್ತ್ರಗಳನ್ನು ಅಪಹರಿಸಿ ಮರದ ಮೇಲೆ ಕುಳಿತ ಕೃಷ್ಣ, ನರ್ತನ, ಬೇಟೆಯ ದೃಶ್ಯ ಮತ್ತು ಹಾವನ್ನು ಹಿಡಿದುಕೊಂಡ ಮಂಗನ ಶಿಲ್ಪಗಳಿವೆ. ಕಂಬಗಳ ಮೇಲಿರುವ ಕಮಾನುಗಳ ಮೇಲಿನ ಪಟ್ಟಿಕೆಯಲ್ಲಿ ಗಣೇಶ, ವಾಮನ, ನೃತ್ಯಗಾರರು, ಸಂಗೀತಗಾರರು, ಬೇಟೆಗಾರರು ಮತ್ತು ಪ್ರಾಣಿ ಪಕ್ಷಿಗಳ ಶಿಲ್ಪಗಳಿವೆ. ಈ ಬಾಗಿಲು ಮುಂಭಾಗದಲ್ಲಿ ಆಯತಾಕಾರದ ಚೌಕಟ್ಟಿನಿಂದ ಪ್ರಾರಂಭವಾಗಿ ಹಿಂಭಾಗದಲ್ಲಿ ಕಾಮಾನಿನಲ್ಲಿ ಮುಕ್ತಾಯವಾಗುತ್ತದೆ.

ಎರಡನೆಯ ಬಾಗಿಲನ್ನು ದಾಟಿದಾಗ ಚೌಕಾಕಾರದ ದೊಡ್ಡ ಆವರಣ ಸಿಗುತ್ತದೆ. ಈ ಆವರಣದ ಸುತ್ತಲೂ ಕಮಾನುಗಳ ಕೈಸಾಲೆಯಿದೆ. ಕಮಾನುಗಳ ಮೇಲ್ಭಾಗದಲ್ಲಿ ಗೋಡೆಯುದ್ದಕ್ಕೂ ಹರಡಿದ ಶಿಲ್ಪ ಪಟ್ಟಿಕೆಗಳಿವೆ. ಇನ್ನೂ ಮೇಲೆ ಮುಂಚಾಚು (projecting balcony)ಗಳಿವೆ. ಪ್ರತಿ ಮುಂಚಾಚು ಮೂರು ಬೋದಿಗೆಗಳ ಮೇಲೆ ನಿಂತಿತ್ತು. ಈಗ ಬೋದಿಗೆಗಳು ಮಾತ್ರ ಉಳಿದಿವೆ. ಬೋದಿಗೆಗಳ ಮುಂಭಾಗವನ್ನು ಸಿಂಹ ಮತ್ತು ವಿವಿಧ ಭಂಗಿಗಳಲ್ಲಿ ನಿಂತಿರುವ ಸ್ತ್ರೀಯರ ಶಿಲ್ಪಗಳಿಂದ ಅಲಂಕರಿಸಿದೆ (ಚಿತ್ರ ೨೭). ಕೆಲವು ಬೋದಿಗೆಗಳ ಪಾರ್ಶ್ವಭಾಗವನ್ನು ಯೋಧರ ಶಿಲ್ಪಗಳಿಂದ ಅಲಂಕರಿಸಿದೆ. ನವರಂಗ್ ದರ್ವಾಜದ ಮುಖ್ಯ ಆಕರ್ಷಣೆ ಎಂದರೆ ಇಲ್ಲಿರುವ ಶಿಲ್ಪ ಪಟ್ಟಿಕೆಗಳು. ಈ ಶಿಲ್ಪಗಳಲ್ಲಿ ವಿಷ್ಣುವಿನ ಅವತಾರಗಳು, ಕೃಷ್ಣನ ಬಾಲಲೀಲೆ ಗಳು, ರಾಮಾಯಣದ ದೃಶ್ಯಗಳು, ಗರುಡ-ಹನುಮಂತ, ಸ್ತ್ರೀ-ಪುರುಷರು ಮತ್ತು ಪ್ರಾಣಿ ಪಕ್ಷಿಗಳನ್ನು ಕಾಣಬಹುದು. ವಿಷ್ಣುವಿನ ಅವತಾರಗಳಲ್ಲಿ ಮತ್ಸ್ಯ, ವರಾಹ, ನರಸಿಂಹ, ವಾಮನ ಮತ್ತು ರಾಮನ ಅವತಾರಗಳಿವೆ. ನರಸಿಂಹನ ಅವತಾರದ ಎರಡು ದೃಶ್ಯಗಳಿವೆ. ಮೊದಲನೇ ದೃಶ್ಯದಲ್ಲಿ ಹಿರಣ್ಯಕಶಿಪು ಕಂಬಕ್ಕೆ ಖಡ್ಗದಿಂದ ಹೊಡೆದಾಗ ಅದರೊಳಗಿನಿಂದ ನರಸಿಂಹ ಹೊರ ಬರುತ್ತಿದ್ದಾನೆ. ಎರಡನೆಯ ದೃಶ್ಯದಲ್ಲಿ ನರಸಿಂಹನು

ಹಿರಣ್ಯಕಶಿಪುವನ್ನು ಕೊಲ್ಲುತ್ತಿದ್ದಾನೆ. ಪಕ್ಕದಲ್ಲಿ ಪ್ರಹ್ಲಾದ ಕೈಮುಗಿದು ನಿಂತಿದ್ದಾನೆ. ವಾಮನ ಅವತಾರದ ಒಂದು ದೃಶ್ಯದಲ್ಲಿ ಬಲಿಚಕ್ರವರ್ತಿಯಿಂದ ದಾನ ಪಡೆಯುತ್ತಿರುವ ವಾಮನನನ್ನು ಮತ್ತು ಇನ್ನೊಂದರಲ್ಲಿ ತ್ರಿವಿಕ್ರಮನನ್ನು ಚಿತ್ರಿಸಲಾಗಿದೆ. ಕೃಷ್ಣಲೀಲೆಯಲ್ಲಿ ವೇಣುಗೋಪಾಲ, ಗೋವರ್ಧನಧಾರಿ ಕೃಷ್ಣ, ಬೆಣ್ಣೆ ಕೃಷ್ಣ ಕಾಳಿಂಗಮರ್ಧನ ಕೃಷ್ಣ, ಗೋಪಿಕಾ ಸ್ತ್ರೀಯರ ವಸ್ತ್ರಾಪಹರಣ, ಯಶೋದೆಯಿಂದ ಶಿಕ್ಷೆಗೊಳಪಟ್ಟಿರುವ ಕೃಷ್ಣ ಮುಂತಾದ ದೃಶ್ಯಗಳಿವೆ. ರಾಮಾಯಣಕ್ಕೆ ಸಂಬಂಧಿಸಿದಂತೆ ರಾಮ ಮತ್ತು ಹನುಮಂತನ ಭೇಟಿ, ವಾಲಿ-ಸುಗ್ರೀವರ ಯುದ್ಧ, ರಾಮ ಹನುಮಂತನಿಗೆ ಮುದ್ರೆಯುಂಗುರ ಕೊಡುತ್ತಿರುವುದು, ಹನುಮಂತ ಅಶೋಕವನದಲ್ಲಿ ಸೀತೆಯನ್ನು ಭೇಟಿಯಾಗುತ್ತಿರುವುದು, ವಾನರರು ಸಮುದ್ರಕ್ಕೆ ಸೇತುವೆ ಕಟ್ಟುತ್ತಿರುವುದು ಮತ್ತು ರಾಮ ರಾವಣರ ಯುದ್ಧದ ದೃಶ್ಯಗಳಿವೆ. ಇವಲ್ಲದೆ ಶೇಷಶಾಯಿ ವಿಷ್ಣುವಿನ ಶಿಲ್ಪವೂ ಇದೆ. ಶಿವನಿಗೆ ಸಂಬಂಧಿಸಿದಂತೆ ಹಸುವೊಂದು ಲಿಂಗಕ್ಕೆ ಕ್ಷೀರಾಭಿಷೇಕ ಮಾಡುವ ಮತ್ತು ಬೇಡರ ಕಣ್ಣಪ್ಪನು ಲಿಂಗಕ್ಕೆ ತನ್ನ ಕಣ್ಣುಗಳನ್ನು ಅರ್ಪಿಸುವ ದೃಶ್ಯಗಳಿವೆ. ಅರಸರಿಗೆ ಸಂಬಂಧಿಸಿದ ಎರಡು ದೃಶ್ಯಗಳಿವೆ. ಒಂದರಲ್ಲಿ ಅರಸನು ಸಿಂಹಾಸನದ ಮೇಲೆ ಕುಳಿತು ಸಭೆ ನಡೆಸುತಿದ್ದರೆ, ಮತ್ತೊಂದರಲ್ಲಿ ಸಿಂಹಾಸನದ ಮೇಲೆ ಕುಳಿತು ಸೇವಕಿಯರಿಂದ ಸೇವೆಯನ್ನು ಅನುಭವಿಸುತ್ತ ತನ್ನ ರಾಣಿಯರೊಂದಿಗೆ ಸಂವಾದದಲ್ಲಿ ತೊಡಗಿದ್ದಾನೆ. ಅರಸನು ಉದ್ದವಾದ ಕಿರೀಟವನ್ನು ಧರಿಸಿದ್ದಾನೆ. ಕುಳಿತಿರುವ ಭಂಗಿ ಮತ್ತು ವೇಷ ಭೂಷಣಗಳನ್ನು ನೋಡಿದಾಗ ಇದು ಹಂಪೆಯಲ್ಲಿ ಸಾಮಾನ್ಯವಾಗಿ ಕಾಣುವ ವಿಜಯನಗರ ಅರಸರ ವ್ಯಕ್ತಿ ಶಿಲ್ಪದಂತೆಯೇ ಇದೆ. ಇವಲ್ಲದೆ ಖಡ್ಗಯುದ್ಧ, ಆನೆ ಬೇಟೆ, ಹುಲಿ ಬೇಟೆ, ನೃತ್ಯ, ಸಂಗೀತ, ಕೋಲಾಟದ ದೃಶ್ಯಗಳಿವೆ. ಪ್ರಣಯಾಸಕ್ತ ದಂಪತಿಗಳು, ರತಿಕ್ರೀಡೆಯಲ್ಲಿ ತೊಡಗಿದ ಸ್ತ್ರೀ-ಪುರುಷರು , ಸಿಂಹದ ಮೇಲೆ ಕುಳಿತ ಪುರುಷ, ಮಗುವನ್ನು ಎತ್ತಿಕೊಂಡು ನಿಂತ ಸ್ತ್ರೀ ಮುಂತಾದವರ ಶಿಲ್ಪಗಳೂ ಇವೆ. ಪ್ರಾಣಿ ಪಕ್ಷಿ ಸಮೂಹದಲ್ಲಿ ಹಣ್ಣು ತಿನ್ನುತ್ತಿರುವ ಮಂಗ, ಒಂದು ತಲೆ ಎರಡು ದೇಹದ ಸಿಂಹ, ಒಂದು ಕಡೆಯಿಂದ ಆನೆಯಂತೆ ಮತ್ತೊಂದು ಕಡೆಯಿಂದ ಎತ್ತಿನಂತೆ ಕಾಣುವ ಗಜ-ವೃಷಭ ಶಿಲ್ಪಗಳು ಗಮನ ಸೆಳೆಯುತ್ತವೆ. ಈ ಆವರಣದ ಪೂರ್ವಕ್ಕೆ ಒಂದು ಚಿಕ್ಕ ಬಾಗಿಲಿದೆ. ಇದು ಆವರಣದಿಂದ ಕೋಟೆಗೋಡೆಯ ಹೊರಬದಿಯಲ್ಲಿ ಹೋಗಲು ಅನುವು ಮಾಡಿಕೊಡುತ್ತದೆ. ಆವರಣದ ಪಶ್ಚಿಮಕ್ಕೆ ಸಂಕೀರ್ಣದ ಮೂರನೇ ಬಾಗಿಲಿದೆ.

ಪೂರ್ವಾಭಿಮುಖವಾಗಿರುವ ಮೂರನೇ ಬಾಗಿಲು ಕಮಾನಿನಾಕಾರದಲ್ಲಿದೆ (ಚಿತ್ರ ೨೦). ಮೇಲ್ಭಾಗ ದಲ್ಲಿಯ ಕೈಪಿಡಿ ಗೋಡೆಯಲ್ಲಿ ಚಿಕ್ಕ ಕಮಾನು ಕಿಂಡಿಗಳಿವೆ. ಕೈಪಿಡಿ ಗೋಡೆಯ ಮಧ್ಯ ಭಾಗದಲ್ಲಿ ಮುಂಚಾಚು

(projecting balcony) ಇದೆ. ಮುಂಚಾಚನ್ನು ನಾಲ್ಕು ಸಿಂಹ ಬೋದಿಗೆಗಳು ಹೊತ್ತು ನಿಂತಿವೆ. ಮೇಲೆ ಮೂರು ಕಮಾನು ಕಿಂಡಿಗಳಿವೆ. ಬಾಗಿಲ ಪ್ರವೇಶದ ಎಡಕ್ಕೆ ಹಾವನ್ನು ಹಿಡಿದಿರುವ ಗರುಡ ಮತ್ತು ಬಲಕ್ಕೆ ಕುಳಿತಿರುವ ಮನುಷ್ಯನ ಶಿಲ್ಪಗಳಿವೆ. ಮೂರನೇ ಬಾಗಿಲನ್ನು ದಾಟಿದಾಗ ಆಯತಾಕಾರದ ಆವರಣವಿದೆ. ಆವರಣದ ಪಶ್ಚಿಮಕ್ಕೆ ಚಿಕ್ಕ ಬಾಗಿಲಿದೆ. ಇದರ ಮೂಲಕ ಕೋಟೆ ಗೋಡೆಯ ಹೊರಬದಿಗೆ ಹೋಗಬಹುದು. ಆವರಣದ ದಕ್ಷಿಣಕ್ಕೆ ಉತ್ತರಾಭಿಮುಖವಾಗಿರುವ ನಾಲ್ಕನೇ ಮತ್ತು ಕೊನೆಯ ಬಾಗಿಲಿದೆ. ಕಮಾನಿನಾಕಾರದ ಈ ಬಾಗಿಲಿನ ಕಮಾನಿನ ಕೆಳಗೆ ಗೋಡೆಯಿಂದ ಮುಂದೆ ಚಾಚಿದ ಬೋದಿಗೆಗಳ ಮೇಲೆ ತೊಲೆಯಿದೆ. ಬಾಗಿಲ ಪಾರ್ಶ್ವಗಳಲ್ಲಿ ಎತ್ತರವಾದ ಎರಡು ಕಮಾನುಗಳಿವೆ. ಎಡ ಕಮಾನಿನ ಕೆಳಭಾಗದಲ್ಲಿ ಉಪ ಬಾಗಿಲಿದೆ ಮತ್ತು ಬಲಭಾಗದ ಕಮಾನಿನ ಕೆಳಗೆ ಕಾವಲುಗಾರರ ಕೊಠಡಿಯಿದೆ.

ನವರಂಗ್ ದರ್ವಾಜದ ಸಂಕೀರ್ಣದಲ್ಲಿಯ ಉಬ್ಬು ಶಿಲ್ಪಗಳು ವಿಜಯನಗರ ಶೈಲಿಯಲ್ಲಿವೆ. ಕೃಷ್ಣದೇವರಾಯನು ಈ ಕೋಟೆಯನ್ನು ಗೆದ್ದಾಗ ಈ ಬಾಗಿಲನ್ನು ಕಟ್ಟಿಸಿದ್ದಾನೆ.

**ಕಾಟೀ ದರ್ವಾಜ :** ಪೂರ್ವ ದಿಕ್ಕಿನಲ್ಲಿರುವ ಕಾಟೀ ದರ್ವಾಜದ ಒಂದು ಭಾಗವನ್ನು ಇತ್ತೀಚಿನ ವರ್ಷಗಳಲ್ಲಿ ಬೀಳಿಸಿ ನೇರ ರಸ್ತೆಯನ್ನು ಮಾಡಿರುವುದರಿಂದ ಈ ಸಂಕೀರ್ಣದ ಹೊರಬಾಗಿಲು ಮತ್ತು ಅದರ ನಂತರವಿರುವ ಆವರಣ ಮಾತ್ರ ಉಳಿದಿದೆ. ದಕ್ಷಿಣಾಭಿಮುಖವಾಗಿರುವ ಈ ಬಾಗಿಲು ಎರಡು ವೃತ್ತಾಕಾರದ ಬುರುಜುಗಳ ಮಧ್ಯದಲ್ಲಿದೆ (ಚಿತ್ರ ೨೪). ಬುರುಜುಗಳ ಮೇಲ್ಭಾಗದಲ್ಲಿ ಮುಂಚಾಚುಗಳಿವೆ. ಮುಂಚಾಚುಗಳ ಬೋದಿಗೆಗಳು ಅಲಂಕಾರ ರಹಿತವಾಗಿವೆ. ಬಾಗಿಲ ಚೌಕಟ್ಟಿನ ಮೇಲೆ ಕುರುಡು ಕಮಾನು ಇದೆ. ಕಾಕತೀಯರ ಕಾಲದ ಬಾಗಿಲ ಚೌಕಟ್ಟನ್ನು ಇಲ್ಲಿ ಪುನಃ ಉಪಯೋಗಿಸಿ ಕಟ್ಟಲಾಗಿದೆ. ಬಾಗಿಲ ತೋಳುಗಳು ಅರೆಗಂಬದಾಕಾರದಲ್ಲಿವೆ. ತೋಳುಗಳ ಮೇಲೆ ಎರಡು ತೊಲೆಗಳಿವೆ. ಕೆಳಗಿನ ತೊಲೆಯ ಮೇಲೆ ಶಂಖ, ಚಕ್ರ, ಸೂರ್ಯ ಮತ್ತು ಚಂದ್ರರ ಶಿಲ್ಪಗಳಿವೆ. ಮೇಲಿನ ತೊಲೆಯ ಮೇಲೆ ಮಕರ ತೋರಣದ ಉಬ್ಬು ಶಿಲ್ಪವಿದೆ. ಈ ತೊಲೆಯ ಮೇಲ್ಭಾಗದಲ್ಲಿ ಜಾಲಂಧ್ರದಂತೆ ದುಂಡಾಗಿ (carved in sound) ಕೆತ್ತಿದ ಮಕರ ತೋರಣವಿದೆ. ಚಪ್ಪಟೆಯಾದ ಮಕರ ತೋರಣದ ವಲಯಗಳಲ್ಲಿ ರಂಧ್ರಗಳಿವೆ. ತೋರಣದ ಮೇಲ್ಭಾಗದಲ್ಲಿ ಉದ್ದವಾದ ಅರಾಬಿಕ್ ಮತ್ತು ಪರ್ಶಿಯನ್ ಶಾಸನದ ಕಲ್ಲಿದೆ. ಒಂದನೇ ಇಬ್ರಾಹಿಮ್ ಆದಿಲ್ ಶಾಹನ ಕಾಲದಲ್ಲಿ ಕ್ರಿ.ಶ. ೧೫೫೦ರಲ್ಲಿ ಶಮ್‌ಶೀರುಲ್‌ಮುಲ್ಕ್ ಈ ಬಾಗಿಲನ್ನು ಕಟ್ಟಿಸಿದನೆಂದು ಶಾಸನ ಉಲ್ಲೇಖಿಸುತ್ತದೆ.[೫೮] ಪ್ರವೇಶದ ಮೇಲೆ ಆಳವಾದ ಗುಮ್ಮಟಾಕಾರದ ಛಾವಣಿಯಿದೆ.




0 1 2 3 4 5 ಮೀ

೨೩. ರಾಯಚೂರು, ಕಾಟೀ ದರ್ವಾಜ

ಪ್ರವೇಶದ ಎರಡೂ ಬದಿಗೆ ಕಟ್ಟೆಗಳಿವೆ. ಪ್ರತಿ ಕಟ್ಟೆಯ ಮೇಲೆ ಕಮಾನಿನ ಮೂರು ಅಂಕಣಗಳಿವೆ. ಈ ಅಂಕಣಗಳ ಮೇಲೆ ಸಹ ಗುಮ್ಮಟಾಕಾರದ ಛಾವಣಿಯಿದೆ (ಚಿತ್ರ ೨೫). ಉತ್ತರ ದಿಕ್ಕಿನ ಗೋಡೆಗೆ ಕಾಕತೀಯರ ಕಾಲದ ದೇವಾಲಯದ ಎರಡು ಕಲ್ಲುಗಳನ್ನು ಸೇರಿಸಿ ಕಟ್ಟಲಾಗಿದೆ. ಒಂದು ಕಲ್ಲಿನ ಮೇಲೆ ಆನೆಗಳು ಮತ್ತೊಂದರ ಮೇಲೆ ಹೂವಿನ ಶಿಲ್ಪಗಳಿವೆ.

ಬಾಗಿಲನ್ನು ದಾಟಿ ಮುಂದೆ ಹೋದಾಗ ಆಯತಾಕಾರದ ವಿಶಾಲವಾದ ಆವರಣವಿದೆ. ಆವರಣದ ಪೂರ್ವ ಬದಿಯಲ್ಲಿ ಹಜರತ್ ಪೀರ್ ಅಲಾವುದ್ದೀನ್ ಖಾದ್ರಿ ಇಲಾಹಿ ದರ್ಗಾ ಇದೆ. ದರ್ಗಾದ ಗೋಡೆಯಲ್ಲಿ ಉದ್ದವಾದ ಪರ್ಶಿಯನ್ ಶಾಸನವಿದೆ. ಈ ಶಾಸನವನ್ನು ಈಗ ಅಸ್ತಿತ್ವದಲ್ಲಿ ಇಲ್ಲದ ಕಮಾನಿ ದರ್ವಾಜದಿಂದ ತಂದು ಇಲ್ಲಿ ಸೇರಿಸಲಾಗಿದೆ. ಬಹಮನಿ ಅರಸ ಮೂರನೇ ಮಹಮ್ಮದ್ ಶಾಹನ ಕಾಲದ ಕ್ರಿ.ಶ. ೧೪೬೮-೬೯ರ ಈ ಶಾಸನವು ಮಲ್ಲುಖಾನ್‌ಹಫೀಜನು ಬಾಗಿಲನ್ನು ಕಟ್ಟಿಸಿದನೆಂದು ಉಲ್ಲೇಖಿಸುತ್ತದೆ. ಶಾಸನವು ಬಾಗಿಲನ್ನು ಈ ರೀತಿ ಹೊಗಳುತ್ತದೆ : "ಈ ಬಾಗಿಲು ಇಡೀ ಜಗತ್ತಿಗೇ ತೆರೆದಿರಲಿ. ಓ ದೇವರೇ, ಶತ್ರು ಈ ಬಾಗಿಲ ಧೂಳಿನ ಕೆಳಗಿರಲಿ. ಈ ಬಾಗಿಲು ಇಂತಹ ಖಾನನನ್ನು ಹೊಂದಿಲ್ಲದೆ ಇರದಿರಲಿ."[೫೯] ಕಮಾನಿ ಬಾಗಿಲು ಆವರಣದ ಪಶ್ಚಿಮಕ್ಕೆ ಇತ್ತು. ೧೯೨೯-೩೦ರಲ್ಲಿ ಶಿಥಿಲಾವಸ್ಥೆಯಲ್ಲಿದ್ದ ಈ ಬಾಗಿಲಿನ ಕಮಾನಿನ ಮೇಲೆ ಈ ಶಾಸನವಿತ್ತು. ಬಾಗಿಲಿನ ಕಮಾನು, ಛಾವಣಿಯಿಲ್ಲದ ಕಂಬಗಳು ಮತ್ತು ಪಕ್ಕದ ಬುರುಜುಗಳು ಮಾತ್ರ ಉಳಿದಿದ್ದವು.[೬೦] ಪೂರ್ವಾಭಿಮುಖವಾಗಿದ್ದ ಈ ಬಾಗಿಲು ಕಾಟೀ ದರ್ವಾಜ ಸಂಕೀರ್ಣದ ಒಳ ಬಾಗಿಲು ಆಗಿತ್ತು. ಈಗ ಇದರ ಅವಶೇಷಗಳು ಉಳಿದಿಲ್ಲ.

ಆವರಣದ ಉತ್ತರ ಬದಿಯಲ್ಲಿ ಒಂಬತ್ತು ಕಮಾನುಗಳ ಕೈಸಾಲೆಯಿದೆ. ಕೈಸಾಲೆಯ ಮೇಲ್ಭಾಗದಲ್ಲಿ ಬಾಗಿಲಿಗೆ ಅಭಿಮುಖವಾಗಿ ಒಂದು ಕೊಠಡಿಯಿದೆ. ಕೊಠಡಿಯ ಮುಂಭಾಗದಲ್ಲಿ ದೊಡ್ಡ ಕಮಾನಿದೆ (ಚಿತ್ರ ೨೬). ಕೈಸಾಲೆ ಮತ್ತು ಮೇಲಿನ ಕೊಠಡಿಯನ್ನು ಎರಡನೇ ಇಬ್ರಾಹಿಮ್ ಆದಿಲ್ ಶಾಹನ ಕಾಲದಲ್ಲಿ ಕ್ರಿ.ಶ. ೧೬೨೨-೨೩ರಲ್ಲಿ ಈ ಭಾಗದ ಪ್ರಾಂತ್ಯಾಧಿಕಾರಿ (governor) ಆಗಿದ್ದ ಅಬ್ದುಲ್‌ಮಹಮ್ಮದ್‌ನು ಕಟ್ಟಿಸಿದನೆಂದು ತಿಳಿಸುತ್ತವೆ. ಒಂದು ಶಾಸನವು ಸಂಪೂರ್ಣ ಅಲಂಕಾರಮಯವಾದ ಒಂಬತ್ತು ಕಮಾನು (mihrab)ಗಳನ್ನು, ಮೇಲಿನ ಕೊಠಡಿ ಸಹಿತ ಕಟ್ಟಿಸಿದನು ಮತ್ತು ಕಟ್ಟಡವು ಬಾಬುಲ್ ಫತ್‌ಗೆ (ವಿಜಯದ ಬಾಗಿಲು) ಅಭಿಮುಖವಾಗಿದೆ ಎಂದು ತಿಳಿಸುತ್ತದೆ.[೬೧] ಮತ್ತೊಂದುಶಾಸನವು ಕಟ್ಟಡವನ್ನು ದೊಡ್ಡ ಮತ್ತು ಬಲಿಷ್ಠವಾದ ಅರಮನೆ ಎಂದು ಉಲ್ಲೇಖಿಸಿ, ಈ ಸ್ಥಳದಲ್ಲಿ ಕೋಟೆಗೋಡೆಯಲ್ಲದೆ ಮತ್ತೇನು ಇರಲಿಲ್ಲ, ಈ




೨೪. ರಾಯಚೂರು, ಕಾಟೀ ದರ್ವಾಜ, ಹೊರಭಾಗ



೨೫. ರಾಯಚೂರು, ಕಾಟೀ ದರ್ವಾಜ, ಒಳಭಾಗ



೨೬. ರಾಯಚೂರು, ಕಾಟೀ ದರ್ವಾಜ, ಕೈಸಾಲೆಯ ಮೇಲಿನ ಕೊಠಡಿ



೨೭. ರಾಯಚೂರು, ಡಿಡ್ಡಿ ದರ್ವಾಜ

ಕಟ್ಟಡವನ್ನು ಹೊಸತಾಗಿ ಕಟ್ಟಲಾಯಿತೆಂದು ತಿಳಿಸುತ್ತದೆ.[೬೨] ಕಾಟೀ ದರ್ವಾಜದ ಹೆಸರು ಹಿಂದೆ ಬಾಬುಲ್ ಫತ್ ಆಗಿತ್ತೆಂಬುದು ಈ ಶಾಸನದಿಂದ ತಿಳಿಯುತ್ತದೆ. ಬಾಗಿಲಿನಲ್ಲಿಯ ಕದಗಳ ಮೇಲೆ ಚೂಪಾದ ಉದ್ದವಾದ ಶೂಲದಂತಹ ಮೊಳೆಗಳು ಇದ್ದುದರಿಂದ ಇದನ್ನು ಕಾಟೀ ದರ್ವಾಜವೆಂದು ಕರೆಯುತ್ತಾರೆ. ಕದಗಳು ಈಗ ಉಳಿದಿಲ್ಲ.

**ಕಂದಕ್ ದರ್ವಾಜ :** ಈ ಬಾಗಿಲ ಅವಶೇಷಗಳು ಈಗ ಉಳಿದಿಲ್ಲ. ಕೋಟೆಯ ದಕ್ಷಿಣ ದಿಕ್ಕಿಗಿದ್ದ ಈ ಬಾಗಿಲು ೧೯೭೯-೮೦ ರಲ್ಲಿಯೇ ಬಹಳ ಶಿಥಿಲಾವಸ್ಥೆಯಲ್ಲಿ ಇತ್ತು.[೬೩] ಇಲ್ಲಿದ್ದ ಶಾಸನವು ಒಂದನೇ ಇಬ್ರಾಹಿಮ್ ಆದಿಲ್ ಶಾಹನ ಕಾಲದಲ್ಲಿ ಕ್ರಿಶ. ೧೫೫೧ರಲ್ಲಿ ಈ ಬಾಗಿಲನ್ನು ಕಟ್ಟಿಸಲಾಯಿತೆಂದು ತಿಳಿಸುತ್ತದೆ.

**ದಿಡ್ಡಿಗಳು :** ಚಿಕ್ಕ ಬಾಗಿಲುಗಳನ್ನು ದಿಡ್ಡಿ ಎನ್ನುತ್ತಾರೆ. ಹೊರಕೋಟೆಯಲ್ಲಿ ದೊಡ್ಡಿ (ದಿಡ್ಡಿ) ದರ್ವಾಜ, ಪರ್‌ಕೋಟ ದರ್ವಾಜ, ಬಸವನ ಕೋಟ ದರ್ವಾಜ ಮತ್ತೊಂದು ದಿಡ್ಡಿ ಇವೆ.

**ದೊಡ್ಡಿ (ದಿಡ್ಡಿ) ದರ್ವಾಜ:** ಕೋಟೆಯ ನೈರುತ್ಯ ದಿಕ್ಕಿನಲ್ಲಿರುವ ದೊಡ್ಡಿ ಅಥವಾ ದಿಡ್ಡಿ ದರ್ವಾಜ ಚಿಕ್ಕ ಬಾಗಿಲು. ಇದರ ಉತ್ತರ ಮುಖ ಕಮಾನಿನಿಂದ ನಿರ್ಮಾಣವಾದರೆ ದಕ್ಷಿಣ ಮುಖ ತೋಳು ಮತ್ತು ತೊಲೆಗಳಿಂದ ನಿರ್ಮಾಣವಾಗಿ ಆಯತಾಕಾರದಲ್ಲಿದೆ. ಉತ್ತರ ಮುಖದಲ್ಲಿ ಗೋಡೆಯಿಂದ ಹೊರಚಾಚಿದ ಬೋದಿಗೆಗಳು ತೊಲೆಯನ್ನು ಹೊತ್ತು ನಿಂತಿವೆ (ಚಿತ್ರ ೨೮). ಬೋದಿಗೆಗಳನ್ನು ಹಂಸ ಶಿಲ್ಪದಿಂದ ಅಲಂಕರಿಸಿದೆ. ತೊಲೆಯ ಮಧ್ಯದಲ್ಲಿ ಚೌಕಾಕಾರದ ಪರ್ಶಿಯನ್ ಶಾಸನ, ಅದರ ಬದಿಗಳಲ್ಲಿ ವೃತ್ತಾಕಾರದ ಹೂ ಮತ್ತು ತುದಿಗಳಲ್ಲಿ ಸಿಂಹ ಶಿಲ್ಪಗಳಿವೆ. ಮೇಲಿನ ಕುರುಡು ಕಮಾನು ಭಾಗದಲ್ಲಿ ಎರಡು ಚಿಕ್ಕ ಕಮಾನು ಗೂಡುಗಳು ಮತ್ತು ಎರಡು ಹೂಗಳಿವೆ. ಇಲ್ಲಿರುವ ಶಾಸನವು ದಿಡ್ಡಿ ಮತ್ತು ಬಾವಿಯ ಅಡಿಗಲ್ಲನ್ನು ಒಂದನೇ ಅಲಿಆದಿಲ್ ಶಾಹನ ಕಾಲದಲ್ಲಿ ಹಾಕಲಾಯಿತು ಮತ್ತು ಪರ್‌ಕೋಟ ಮತ್ತು ಕೋಟೆಗೋಡೆ (ಹಿಸಾರ್)ನ್ನು ಎರಡನೇ ಇಬ್ರಾಹಿಮ್ ಆದಿಲ್‌ಶಾಹನ ಕಂದೀಲದಾರನಾದ ಯೂಸುಫ್ ಅಲಿಯು ಕ್ರಿ.ಶ. ೧೫೮೨ರಲ್ಲಿ ಕಟ್ಟಿಸಿದನೆಂದು ಉಲ್ಲೇಖಿಸುತ್ತದೆ.[೬೪] ಈ ಶಾಸನದಲ್ಲಿ ಉಲ್ಲೇಖಗೊಂಡ 'ದಿಡ್ಡಿ,' 'ಪರ್‌ಕೋಟ'ಮತ್ತು 'ಹಿಸಾರ್' ಪದಗಳು ಸಮಕಾಲಿನ ಸೈನಿಕ ವಾಸ್ತುವಿನ ಅಧ್ಯಯನಕ್ಕೆ ಬಹಳ ಉಪಯುಕ್ತವಾಗಿವೆ. ಬಾಗಿಲ ದಕ್ಷಿಣಮುಖದ ಬಾಗಿಲ ಚೌಕಟ್ಟಿನ ತೊಲೆಯ ಮೇಲೆ ಹೂ ಮತ್ತು ಹಂಸಗಳ ಅಲಂಕಾರವಿದೆ. ಬಾಗಿಲ ಮೇಲ್ಭಾಗದ ಗೋಡೆಯಲ್ಲಿ ಎರಡು ಬೋದಿಗೆಗಳು ಮುಂದೆ ಚಾಚಿವೆ. ಒಂದು ಬೋದಿಗೆಯನ್ನು ಸಿಂಹ ಮತ್ತೊಂದನ್ನು ಕುದುರೆಯ ಕುತ್ತಿಗೆ ಭಾಗದ ಉಬ್ಬು ಶಿಲ್ಪಗಳಿಂದ ಅಲಂಕರಿಸಿದೆ (ಚಿತ್ರ ೨೯). ಬೋದಿಗೆಗಳ ಮೇಲೆ ಉದ್ದವಾದ ಕಲ್ಲಿನಲ್ಲಿ



೨೮. ರಾಯಚೂರು, ದಿಡ್ಡಿ ದರ್ವಾಜ



೨೯. ರಾಯಚೂರು, ಬಂಡಾಬೌಡಿ

ಪರ್ಶಿಯನ್ ಶಾಸನವಿದೆ. ಶಾಸನವು ಅದೇ ಯೂಸುಫ್ ಅಲಿಯು ಅದೇ ವರ್ಷ ಬಾಗಿಲು ಮತ್ತು ಕಂದಕಗಳನ್ನು ಕಡಿದಾದ ಬಂಡೆಯ ಹತ್ತಿರ ಕಟ್ಟಿಸಿದನೆಂದು ಉಲ್ಲೇಖಿಸುತ್ತದೆ.[೬೬] ಶಾಸನದಲ್ಲಿ ಉಲ್ಲೇಖಗೊಂಡ 'ಕಂದಕ' ಪದವು ಅಧ್ಯಯನಕ್ಕೆ ಉಪಯುಕ್ತವಾಗಿದೆ.

ಬಾಗಿಲ ಉತ್ತರ ಮುಖದ ಶಾಸನದಲ್ಲಿ ಉಲ್ಲೇಖಗೊಂಡ ಬಾವಿ ಬಾಗಿಲ ಪಕ್ಕದಲ್ಲಿದೆ. ಇದನ್ನು ಬಂಡಾಬೌಲಿ (ಚಿತ್ರ ೨೯). ಎಂದು ಕರೆಯುತ್ತಾರೆ. ಬಾವಿಯ ಕೆಳಭಾಗ ಚೌಕಾಕಾರ ಮತ್ತು ಮೇಲ್ಭಾಗ ಅಷ್ಟಭುಜಾ ಕೃತಿಯಲ್ಲಿವೆ. ನೀರನ್ನು ಮೇಲೆಳೆಯಲು ಅನುಕೂಲವಾಗುವಂತೆ ನೆಲಮಟ್ಟದಲ್ಲಿ ಬಾವಿಯ ಸುತ್ತಲು ಅಲ್ಲಲ್ಲಿ ಮುಂದೆ ಚಾಚಿದ ಕಲ್ಲುಗಳಿವೆ. ಕೆಳಗಿಳಿಯಲು ಮೆಟ್ಟಿಲುಗಳೂ ಇವೆ.

**ಪರ್‌ಕೋಟ ದರ್ವಾಜ :** ಇದು ದೊಡ್ಡಿ(ದಿಡ್ಡಿ) ದರ್ವಾಜದ ಪೂರ್ವಕ್ಕಿದೆ. ಇದರಲ್ಲಿ ಆಯತಾಕಾರದ ಬಾಗಿಲ ಚೌಕಟ್ಟಿನ ಮೇಲೆ ಕಮಾನಿದೆ. ಈ ಕಮಾನಿನ ರಚನೆ ಆಸಕ್ತಿದಾಯಕವಾಗಿದೆ. ಪಕ್ಕದ ಗೋಡೆಗಳಲ್ಲಿನ ತೊಲೆಯಂತಹ ಉದ್ದವಾದ ಕಲ್ಲುಗಳನ್ನು ಕ್ರಮೇಣವಾಗಿ ಮುಂದೆ ಚಾಚುತ್ತ (corbelling) ಕಮಾನನ್ನು ರಚಿಸಿದೆ (ಚಿತ್ರ ೩೨). ಕಮಾನಿನ ತುದಿಯನ್ನು ಮೇಲಿನ ತೊಲೆಯನ್ನು ಕಮಾನಿನಾಕಾರದಲ್ಲಿ ಚಿಕ್ಕದಾಗಿ ಕೊರೆದು ಮಾಡಿದೆ. ಈ ತೊಲೆಯ ಮೇಲೆ ಎರಡೂ ಬದಿಗೆ ಗಂಡಭೇರುಂಡದ ಶಿಲ್ಪಗಳಿವೆ. ಬಲಭಾಗದ ಗಂಡಭೇರುಂಡ ಎರಡು ಕೊಕ್ಕುಗಳಲ್ಲಿ ಒಂದೊಂದು ಮತ್ತು ಕಾಲಿನಲ್ಲಿ ಒಂದು, ಒಟ್ಟು ಮೂರು ಆನೆಗಳನ್ನು ಹಿಡಿದುಕೊಂಡಿದೆ. ಇದರ ಬಲಕ್ಕೆ ಒಂದು ಮರವಿದೆ. ಮರದಲ್ಲಿಯ ಗೂಡಿನಲ್ಲಿ ಗಂಡಭೇರುಂಡದ ಚಿಕ್ಕಮರಿ ಇದೆ. ಮರದ ಕೆಳಗಿರುವ ಉದ್ದವಾದ ಹಾವು ಮರಿಯನ್ನು ತಿನ್ನುವುದಕ್ಕಾಗಿ ಮರವನ್ನೇರಲು ಹವಣಿಸುತ್ತಿದೆ. ಈ ತೊಲೆಯ ಮೇಲಿನ ಸಾಲಿನಲ್ಲಿ ಬಲಭಾಗಕ್ಕೆ ಪರ್ಶಿಯನ್ ಶಾಸನವಿದೆ. ಈ ಶಾಸನವು ನೀಡುವ ಮಾಹಿತಿ ಬಹಳ ಮಹತ್ವದ್ದಾಗಿದೆ. ಈ ಬಾಗಿಲಿರುವ ಸ್ಥಳದಲ್ಲಿ ಒಂದು ದೊಡ್ಡ ಬಂಡೆಯಿದ್ದುದರಿಂದ ಬೆಟ್ಟದ ಮೇಲಕ್ಕೆ ಹೋಗುವವರಿಗೆ ಬಹಳ ಕಷ್ಟವಾಗುತ್ತಿತ್ತು. ಎರಡನೇ ಇಬ್ರಾಹಿಮ್ ಆದಿಲ್‌ಶಾಹನ ಸೇವಕನಾದ ಯೂಸುಫ್ ಅಲಿಖಾನನು ಈ ಬಂಡೆಯನ್ನು ಕತ್ತರಿಸಿ ಅದರ ಸ್ಥಳದಲ್ಲಿ ಕ್ರಿ.ಶ. ೧೫೮೩ರಲ್ಲಿ ಈ ದಿಡ್ಡಿಯನ್ನು ನಿರ್ಮಿಸಿದನೆಂದು ಶಾಸನದಿಂದ ತಿಳಿಯುತ್ತದೆ. ಅಲ್ಲದೆ ಇದನ್ನು 'ತವಕ್ಕಲ್ ದಿಡ್ಡಿ' ಎಂದು ಶಾಸನದಲ್ಲಿ ಉಲ್ಲೇಖಿಸಿದೆ.[೬೭] ಪರ್‌ಕೋಟ ದರ್ವಾಜ ಮತ್ತು ದೊಡ್ಡಿ(ದಿಡ್ಡಿ) ದರ್ವಾಜಗಳು ಚಿಕ್ಕವಾಗಿರುವುದರಿಂದ ಶಾಸನಗಳಲ್ಲಿ ಇವುಗಳನ್ನು ದಿಡ್ಡಿಗಳೆಂದು ಉಲ್ಲೇಖಿಸಿದ್ದು ಗಮನಾರ್ಹವಾಗಿದೆ.



೩೨. ರಾಯಚೂರು, ಪರಕೋಟ ದರ್ವಾಜ.



೩೩. ರಾಯಚೂರು, ಬಸವನ ಕೋಟ ದರ್ವಾಜ

**ಬಸವನ ಕೋಟ ದರ್ವಾಜ :** ಇದು ಕೋಟೆಯ ಪೂರ್ವ ಗೋಡೆಯಲ್ಲಿ ಮತ್ತು ಕಾಟೀ ದರ್ವಾಜದ ದಕ್ಷಿಣಕ್ಕಿದೆ (ಚಿತ್ರ ೩೩). ಬಾಗಿಲ ಪಕ್ಕದ ಕೋಟೆ ಶಿಥಿಲವಾಗಿದ್ದರೂ ಬಾಗಿಲು ಸುಸ್ಥಿತಿಯಲ್ಲಿದೆ. ಪೂರ್ವಾಭಿಮುಖವಾಗಿರುವ ಬಾಗಿಲಿಗೆ ಆಯತಾಕಾರದ ಚೌಕಟ್ಟಿದೆ. ಇಲ್ಲಿ ಪ್ರತ್ಯೇಕ ತೋಳುಗಳಿಲ್ಲ. ಗೋಡೆಯ ಕಲ್ಲುಗಳೇ ಮುಂದೆ ಚಾಚಿಕೊಂಡು ತೋಳುಗಳ ನಿರ್ಮಾಣವಾಗಿದೆ. ತೋಳುಗಳ ಮೇಲೆ ದ್ವಾರಪಾಲಕರ ಶಿಲ್ಪಗಳಿವೆ. ಮೇಲ್ಭಾಗದಲ್ಲಿ ಪುಷ್ಪ ಮತ್ತು ಸುರುಳಿಯಾಕಾರದ ಬೋದಿಗೆಗಳಿವೆ. ಮೇಲಿನ ತೊಲೆಯ ಮೇಲೆ ಗಣೇಶನ ಮತ್ತು ಮೂರು ಮೀನುಗಳ ಶಿಲ್ಪಗಳಿವೆ. ಪ್ರವೇಶದ ಬದಿಗಳಲ್ಲಿ ಒಂದಂಕಣದ ಕಟ್ಟೆಯಿದೆ. ಪರ್‌ಕೋಟ ದರ್ವಾಜದ ಆಗ್ನೇಯ ದಿಕ್ಕಿಗೆ ಮತ್ತೊಂದು ಓಡ್ಡಿ ಇದೆ.

## ಬುರುಜುಗಳು

ಹೊರಕೋಟೆಯಲ್ಲಿ ಅನೇಕ ಬುರುಜುಗಳಿವೆ. ಅವುಗಳಲ್ಲಿ ೪೬ ವೃತ್ತಾಕಾರ ೧೪ ಚೌಕಾಕಾರವಾಗಿವೆ. ಮತ್ತು ಇವುಗಳಲ್ಲಿ ಹದಿನೇಳು ಬುರುಜುಗಳನ್ನು ಅವುಗಳಲ್ಲಿರುವ ಶಾಸನಗಳಿಂದ ಅಥವಾ ಈಗಲೂ ಅವು ಹೊಂದಿರುವ ಹೆಸರುಗಳಿಂದ ಗುರುತಿಸಬಹುದು. ಕೆಲವು ಬುರುಜುಗಳ ಶಾಸನಗಳನ್ನು ಹೈದರಾಬಾದಿನ ವಸ್ತು ಸಂಗ್ರಹಾಲಯಕ್ಕೆ ತೆಗೆದುಕೊಂಡು ಹೋಗಿರುವುದರಿಂದ ಅವುಗಳಲ್ಲಿ ಕೆಲವನ್ನು ಗುರುತಿಸುವುದು ಕಷ್ಟಕರವಾಗಿದೆ.

**ಬಾದಶಾಹಿ ಬುರುಜು :** ಇದು ಮಕ್ಕಾ ದರ್ವಾಜದ ಪಕ್ಕದಲ್ಲಿ ದಕ್ಷಿಣಕ್ಕಿದೆ. ಇದು ಅಲಂಕಾರರಹಿತ ಆದರೆ ದೊಡ್ಡದಾದ ಬುರುಜು. ಇದನ್ನು ಮಲಿಕ್ ರೈಹಾನ್ ಕ್ರಿ.ಶ. ೧೫೯೭ರಲ್ಲಿ ನಿರ್ಮಿಸಿದನು. ಇಲ್ಲಿರುವ ಶಾಸನವು ಅಷ್ಟೊಂದು ಸುಂದರ ಮತ್ತು ಆಕರ್ಷಕವಲ್ಲದ ಆದರೆ ಬಲಿಷ್ಠವಾದ ಈ ಬುರುಜಿಗೆ ಸಮನಾದುದು ಮತ್ತೊಂದು ಇಲ್ಲವೆಂದು ತಿಳಿಸುತ್ತದೆ.[೬೮]

**ಹಮಾಮ್ ಬುರುಜು :** ಈ ಬುರುಜಿನ ಉತ್ತರ ಗೋಡೆಯಲ್ಲಿದ್ದ ಕ್ರಿ.ಶ. ೧೬೦೯ರ ಶಾಸನವು ಈಗ ಹೈದರಾಬಾದ್ ಸಂಗ್ರಹಾಲಯದಲ್ಲಿದೆ. ಇದರ ಅಡಿಗಲ್ಲನ್ನು ಇಬ್ರಾಹಿಮ್ ಆದಿಲ್‌ಶಾಹನ ಆಳ್ವಿಕೆಯಲ್ಲಿ ಹಾಕಲಾಯಿತು. ಇದನ್ನು ಮಲಿಕ್ ರೈಹಾನ್‌ನ ಪ್ರೋತ್ಸಾಹದಿಂದ ಮಲಿಕ್ ಯಾಕೂತ್ ನಾಯಿಬ್‌ನು ಕಟ್ಟಿಸಿದನು. ಇದು ಖಿಬ್ಲ (ಮಕ್ಕಾ) ಕ್ಕೆ ಅಭಿಮುಖವಾಗಿದೆ. ಈ ಸನ್ಮಾನಕರವಾದ ಸ್ಥಳದಿಂದ ಇದು ಉನ್ನತ ಸ್ಥಾನ ಪಡೆದಿದೆ ಎಂದು ಶಾಸನವು ತಿಳಿಸುತ್ತದೆ.[೬೯] ಈ ಬುರುಜನ್ನು ಈಗ ಖಚಿತವಾಗಿ ಗುರುತಿಸಲು ಸಾಧ್ಯವಾಗುವುದಿಲ್ಲ. ಶಾಸನದಲ್ಲಿ ಉಲ್ಲೇಖಗೊಂಡಂತೆ ಇದು ಮಕ್ಕಾಕ್ಕೆ ಅಂದರೆ ಪಶ್ಚಿಮಕ್ಕೆ ಅಭಿಮುಖವಾಗಿರುವುದರಿಂದ ಪಶ್ಚಿಮ ದಿಕ್ಕಿನ ಗೋಡೆಯಲ್ಲಿಯೇ ಇದೆ.

**ಅಲಿ ಬುರುಜು :** ಮಕ್ಕಾ ದರ್ವಾಜದಿಂದ ಉತ್ತರಕ್ಕೆ ಮೂರನೆಯ ಬುರುಜೇ ಅಲಿ ಬುರುಜು. ಇದನ್ನು ಎರಡನೇ ಇಬ್ರಾಹಿಮ್ ಆದಿಲ್ ಶಾಹನ ಕಾಲದಲ್ಲಿ ಖವಾಸ್ ಖಾನ್‌ನು ಕ್ರಿ.ಶ. ೧೫೭೮ರಲ್ಲಿ ಆರು ತಿಂಗಳಲ್ಲಿ ಕಟ್ಟಿಸಿ ಅಲೀಬಿನ್‌ಅಬೀ ತಾಲಿಬ್ ಎಂದು ಹೆಸರಿಟ್ಟನು[೨೦] (ಚಿತ್ರ ೧೧).

**ಫತೇ ಬುರುಜು :** ಉತ್ತರ ದಿಕ್ಕಿಗಿರುವ ಈ ಬುರುಜನ್ನು ಇಸ್ಮಾಯಿಲ್ ಆದಿಲ್ ಶಾಹನ ಆಳ್ವಿಕೆಯಲ್ಲಿ ಮಲಿಕಲ್ ಮುಕರ್ರಮ್ ನಿಜಾಮುದ್ದೀನ್ ಅಹಮದ್ ಅಲ್ ಕಿರ್ಮಾನಿಯ ಅಧಿಕಾರಾವಧಿಯಲ್ಲಿ ಕ್ರಿ.ಶ. ೧೫೧೫ರಲ್ಲಿ ಕಟ್ಟಿಸಲಾಯಿತು. ಇದರ ಹೆಸರು ಬುರ್ಜಲ್‌ಫತ್.[೨೧] ನವಾಬ್ ಸದುಲ್ಲಾ ಖಾನ್ ಬಹಾದೂರ್ ಮುಜಾಫರ್ ಜಂಗ್ ಪ್ರಾಂತ್ಯಾಧಿಕಾರಿ (governor) ಆಗಿದ್ದಾಗ ಶೇಖ್ ಅಬ್ದುಲ್‌ವಾಹಿದ್‌ನ ಮೇಲ್ವಿಚಾರಣೆಯಲ್ಲಿ ಕ್ರಿ.ಶ. ೧೭೫೦-೫೧ರಲ್ಲಿ ಇದನ್ನು ಪುನರ್‌ನಿರ್ಮಿಸಲಾಯಿತು.[೨೨] (ಚಿತ್ರ ೧೨).

**ತಾಹಿರ್ ಖಾನ್ ಬುರುಜು :** ಇದು ಉತ್ತರ ದಿಕ್ಕಿನಲ್ಲಿ ಫತೇ ಬುರುಜು ಮತ್ತು ನವರಂಗ್ ದರ್ವಾಜ ಮಧ್ಯದಲ್ಲಿದೆ. ಮೊದಲನೇ ಅಲಿ ಆದಿಲ್ ಶಾಹನ ಕಾಲದಲ್ಲಿ ಕ್ರಿ.ಶ. ೧೫೭೦-೭೧ರಲ್ಲಿ ತಾಹಿರ್ ಖಾನ್‌ನು ಇದನ್ನು ಕಟ್ಟಿಸಿದನು.[೨೩]

**ಖಾದಿರೀಯ ಬುರುಜು :** ಇದು ಪೂರ್ವ ದಿಕ್ಕಿನ ಕೋಟೆಗೋಡೆಯಲ್ಲಿ ಕಾಟೀ ದರ್ವಾಜದ ಉತ್ತರಕ್ಕಿದೆ. ಇದರ ನಿರ್ಮಾಣವು ಎರಡನೇ ಇಬ್ರಾಹಿಮ್ ಆದಿಲ್ ಶಾಹನ ಆಳ್ವಿಕೆಯಲ್ಲಿ ಕ್ರಿ.ಶ. ೧೬೧೮ರಲ್ಲಿ ಪ್ರಾರಂಭವಾಗಿ ಮಹಮ್ಮದ್ ಆದಿಲ್ ಶಾಹನ ಆಳ್ವಿಕೆಯಲ್ಲಿ ಕ್ರಿ.ಶ. ೧೬೨೯-೩೦ರಲ್ಲಿ ಮುಗಿಯಿತು. ಇದನ್ನು ರೈಹಾನ್‌ನ ಮಗ ಅಬ್ದುಲ್ ವಹಾಬ್‌ನು ಕಟ್ಟಿಸಿದನು. ಶಾಸನದ ಪ್ರಕಾರ ಬುರುಜಿನ ನಿರ್ಮಾಣ ಏಳು ವರ್ಷ ಹಿಡಿಯಿತು[೨೪] (ಚಿತ್ರ ೧೩).

**ಖುಶ್ರವೀ ಬುರುಜು :** ಇದನ್ನು ಪೇಟ್ಲಾ ಬುರುಜು ಎಂದು ಕರೆಯಲಾಗುತ್ತಿತ್ತು. ಕಾಟೀ ದರ್ವಾಜದ ಹತ್ತಿರ ಅದರ ದಕ್ಷಿಣಕ್ಕೆ ಇದ್ದ ಈ ದೊಡ್ಡ ಬುರುಜನ್ನು ಇತ್ತೀಚಿನ ವರ್ಷಗಳಲ್ಲಿ ಬೀಳಿಸಿ ಇದರ ಸ್ಥಳದಲ್ಲಿ ಅಂಗಡಿಗಳನ್ನು ಕಟ್ಟಿಸಲಾಗಿದೆ. ಎರಡನೇ ಅಲಿ ಆದಿಲ್ ಶಾಹನ ಆಳ್ವಿಕೆಯಲ್ಲಿ ರಾಯಚೂರು ಕೋಟೆಯ ಕಿಲ್ಲೇದಾರನಾಗಿದ್ದ ಆಕಾಖುಶ್ರೌ ಕ್ರಿ.ಶ. ೧೬೭೦-೭೧ರಲ್ಲಿ ಈ ಬುರುಜನ್ನು ಕಟ್ಟಿಸಿದನು.[೨೫] ಶಾಸನವು ಇದನ್ನು ಖುಶ್ರಾವೀ ಬುರುಜು ಎಂದು ಉಲ್ಲೇಖಿಸುತ್ತದೆ.

ಖುಶ್ರೌವೀ ಬುರುಜಿನ ಹತ್ತಿರದ ಬುರುಜು : ಈ ಬುರುಜನ್ನು ಈಗ ಗುರುತಿಸಲು ಸಾಧ್ಯವಾಗುವುದಿಲ್ಲ. ಇದನ್ನು ಒಂದನೇ ಇಬ್ರಾಹಿಮ್ ಆದಿಲ್ ಶಾಹನ ಕಾಲದಲ್ಲಿ ಕ್ರಿ.ಶ. ೧೫೪೮-೪೯ರಲ್ಲಿ ಕಟ್ಟಿಸಲಾಯಿತು. ಶಾಸನದಲ್ಲಿ ಬುರುಜಿನ ವರ್ಣನೆ ಇದೆ. ಅದು ಈ ಕೊತ್ತಳವು ದ್ರೋಹಿಗಳಿಗೆ ಎಟುಕುವದಿಲ್ಲ, ಇದರ ಬಾನಂಚಿನಿಂದ ಬಿದಿಗೆ ಚಂದ್ರನ ಮುಖವು ಕಾಣುವುದರಿಂದ (ಅಂದರೆ ಬುರುಜಿನ ಮೇಲೆ ಬಿದಿಗೆ ಚಂದ್ರನ ಚಿಹ್ನೆ ಇರುವ ಧ್ವಜವು ಹಾರಾಡುವುದರಿಂದ) ಇದರ ಸ್ಥಾನ ಆಕಾಶದಲ್ಲಿಯ ಪೂರ್ಣಚಂದ್ರನಂತಿದೆ ಎಂದು ವರ್ಣಿಸುತ್ತದೆ.[೭೬]

ರಫಿ ಬುರುಜು : ಇದು ಸಹ ಕಾಟೀ ದರ್ವಾಜದ ದಕ್ಷಿಣಕ್ಕಿದೆ. ಇದರ ನಿರ್ಮಾಣ ಆದಿಲ್‌ಶಾಹಿ ಅರಸ ಮಲ್ಲುಆದಿಲ್ ಖಾನನ ಕಾಲದಲ್ಲಿ ಕ್ರಿ.ಶ. ೧೫೩೪-೩೫ರಲ್ಲಿ ಆಗಿದೆ.[೭೭]

ಬಸವನ ಕೋಟಾ ಬುರುಜು : ಇದು ಬಸವನಕೋಟಾ ದರ್ವಾಜದ ಹತ್ತಿರವಿದೆ. ಇದು ಇಂದು ಶಿಥಿಲಾವಸ್ಥೆಯಲ್ಲಿದೆ. ಇದರ ಅರ್ಧ ಭಾಗ ಬಿದ್ದುಹೋಗಿದೆ. ಇದರ ನಿರ್ಮಾಣವು ನವಾಬ ಸಾದುಲ್ಲಾಖಾನ್‌ನ ಕಾಲದಲ್ಲಿ ಮುಜಾಫರ್ ಜಂಗ್‌ನ ನೇತೃತ್ವದಲ್ಲಿ ಕ್ರಿ.ಶ. ೧೭೪೩ರಲ್ಲಿ ಆಯಿತು.[೭೮]

ತಾಲೀಮು ಬುರುಜು : ಇದು ಕಂದಕ್ ದರ್ವಾಜದ ಪಕ್ಕದಲ್ಲಿ ಪಶ್ಚಿಮಕ್ಕೆ ಇತ್ತು. ಈಗ ಇದರ ಅವಶೇಷಗಳು ಉಳಿದಿಲ್ಲ. ಇದರ ನಿರ್ಮಾಣ ಒಂದನೇ ಇಬ್ರಾಹಿಮ್ ಆದಿಲ್‌ಶಾಹನ ಆಳ್ವಿಕೆಯಲ್ಲಿ ಕ್ರಿ.ಶ. ೧೫೪೬-೪೭ರಲ್ಲಿ ಅಹ್ಮದ್ ಹಾಜಿ ಗುನಾಬಾದಿ ನೇತೃತ್ವದಲ್ಲಿ ಆಯಿತು. ಇದರ ಹೆಸರನ್ನು ಶಾಸನದಲ್ಲಿ ಬುರ್ಜ್-ಇ-ಹಮಲ್ ಎಂದು ಉಲ್ಲೇಖಿಸಿದೆ.[೭೯]

ಬಂಡಾಬೌಡಿ ಬುರುಜು : ಇದು ಪರ್‌ಕೋಟಾ ದರ್ವಾಜ ಮತ್ತು ದಿಡ್ಡಿ ದರ್ವಾಜಗಳ ಮಧ್ಯದಲ್ಲಿದೆ. ಮೊದಲನೇ ಅಲಿ ಆದಿಲ್‌ಶಾಹನ ಆಳ್ವಿಕೆಯಲ್ಲಿ ಅಡಿಗಲ್ಲನ್ನು ಹಾಕಿದ ಬುರುಜಿನ ನಿರ್ಮಾಣವು ಯೂಸುಫ್ ಅಲಿ ಕಂದೀಲ್‌ದಾರನ ಅಧಿಕಾರಾವಧಿಯಲ್ಲಿ ಕ್ರಿ.ಶ.೧೫೯೬ರಲ್ಲಿ ಪೂರ್ಣಗೊಂಡಿತು[೮೦] (ಚಿತ್ರ ೧೪). ಮೇಲಿನ ತೆನೆಗಳ ಸಹಿತ ಈ ಬುರುಜು ಸುಸ್ಥಿತಿಯಲ್ಲಿದೆ.

ನಿಯಬತ್ ಬುರುಜು : ಇದು ಪರ್‌ಕೋಟಾ ದರ್ವಾಜದ ಪಶ್ಚಿಮಕ್ಕೆ ಎರಡನೇ ಬುರುಜು. ಇದನ್ನು ಕ್ರಿ.ಶ. ೧೫೯೭ರಲ್ಲಿ ನಿರ್ಮಿಸಲಾಯಿತು.[೮೧] ಚೌಕಾಕಾರವಾಗಿರುವ ಈ ಬುರುಜು ಶಿಥಿಲಾವಸ್ಥೆಯಲ್ಲಿದೆ.

ಶಾಹ ಬುರುಜು : ಈ ಬುರುಜಿನ ಅಡಿಪಾಯವನ್ನು ಒಂದನೇ ಅಲಿಆದಿಲ್ ಶಾಹನ ಕಾಲದಲ್ಲಿ ಕ್ರಿ.ಶ. ೧೫೬೬ರಲ್ಲಿ ಇಕ್ಲಾಸ್ ಖಾನನು ಹಾಕಿದನು. ಶಾಸನವು ಇದನ್ನು ಶಾಹ ಬುರುಜೆಂದು ಉಲ್ಲೇಖಿಸುತ್ತದೆ.[೮೨] ಇದನ್ನು ಗುರುತಿಸುವುದು ಸಾಧ್ಯವಾಗುವುದಿಲ್ಲ.

ಸಾಟಿ ಇಲ್ಲದ ಬುರುಜು : ಹೈದರಾಬಾದ್ ವಸ್ತು ಸಂಗ್ರಹಾಲಯದಲ್ಲಿರುವ ಒಂದು ಶಾಸನವು ಎರಡನೇ ಇಬ್ರಾಹಿಮ್ ಆದಿಲ್‌ಶಾಹನ ಕಾಲದಲ್ಲಿ ಮಲಿಕ್ ರೈಹಾನ್‌ನ ಅಧಿಕಾರಾವಧಿಯಲ್ಲಿ, ಮಲಿಕ್ ರೈಹಾನ್‌ನ ಅಳಿಯ ಮಲಿಕ್ ಯಾಕೂತ್ ಕ್ರಿ.ಶ. ೧೬೧೯ರಲ್ಲಿ ಒಂದು ಬುರುಜನ್ನು ಕಟ್ಟಿಸಿದನೆಂದು ಉಲ್ಲೇಖಿಸುತ್ತದೆ. ಶಾಸನವು ಬುರುಜನ್ನು ಈ ರೀತಿ ವರ್ಣಿಸುತ್ತದೆ." ಈ ಬುರುಜಿಗೆ ಸಾಟಿಯಾದುದು ಜಗತ್ತಿನಲ್ಲಿ ಇಲ್ಲ, ಅಂತರಿಕ್ಷದ ಮೂಲ ಬದಲಾವಣೆಗಳು ಸಹ ಇಂತಹದನ್ನು ಸೃಷ್ಟಿಸಿಲ್ಲ. ಇಂತಹ ಬುರುಜನ್ನು ಯಾರೂ ನೋಡಿಲ್ಲ ಮತ್ತು ಇದರಂತೆ ಇರುವ ಇನ್ನೊಂದರ ಬಗ್ಗೆ ಯಾವ ಕಿವಿಯೂ ಕೇಳಿಲ್ಲ. ಇದೊಂದು ಬುರುಜು ಅಥವಾ ಮಾಣಿಕ್ಯದ ಭರಣಿ."[೮೩]

## ರಾಜವಾಡೆ

ಒಳಕೋಟೆಯ ದಕ್ಷಿಣ ಭಾಗದಲ್ಲಿರುವ ಪಾಂಚ್‌ಬೀಬಿ ಪಹಾಡ್ ಬೆಟ್ಟದ ಮೇಲಿರುವ ರಾಜವಾಡೆಯನ್ನು ಬಾಲಹಿಸಾರ್ ಅಥವಾ ಕಡೆಗಾಪು (citadel) ಎಂದೂ ಕರೆಯಬಹುದು. ಇಲ್ಲಿಗೆ ಹೋಗಲು ಒಳಕೋಟೆಯ ಆಗ್ನೇಯ ಮೂಲೆಯಲ್ಲಿ ಗೋಡೆಬದಿಗೆ ಮೆಟ್ಟಿಲುಗಳಿವೆ. ಅರ್ಧದಷ್ಟು ಮೇಲೆ ಹೋದಾಗ ಆಯತಾಕಾರದ ಚೌಕಟ್ಟಿರುವ ಬಾಗಿಲಿದೆ. ರಾಜವಾಡೆ ಪ್ರವೇಶಿಸುವಾಗ ಮತ್ತೊಂದು ಬಾಗಿಲ ಚೌಕಟ್ಟಿದೆ.

ದೊಡ್ಡ ಕಲ್ಲು ಬಂಡೆಗಳ ಮೇಲ್ಭಾಗದಲ್ಲಿ ಕಲ್ಲು ಮಣ್ಣನ್ನು ತುಂಬಿ ಸಮತಟ್ಟಾದ ನೆಲವನ್ನು ನಿರ್ಮಿಸಿ ಅದರ ಮೇಲೆ ಕಟ್ಟಡಗಳನ್ನು ಕಟ್ಟಿದೆ. ಇಲ್ಲಿರುವ ಮುಖ್ಯ ಕಟ್ಟಡ ದರ್ಬಾರ್ ಹಾಲ್ ಅಥವಾ ರಾಜ ಸಭಾಂಗಣವೆಂದು ಕರೆಯುವ ಕಟ್ಟಡ (ಚಿತ್ರ ೩೫). ದಕ್ಷಿಣಾಭಿಮುಖವಾಗಿರುವ ಈ ಕಟ್ಟಡವನ್ನು ಪ್ರವೇಶಿಸಲು ಕಟ್ಟಡದಷ್ಟು ಅಗಲವಾದ ಮೆಟ್ಟಿಲುಗಳಿವೆ. ಮುಂಭಾಗದಲ್ಲಿ ಮೂರು ಕಮಾನುಗಳಿವೆ. ಪೂರ್ವ ಪಶ್ಚಿಮಕ್ಕೆ ಮೂರು ಮತ್ತು ಉತ್ತರ ದಕ್ಷಿಣಕ್ಕೆ ಎರಡು (3x2) ಅಂಕಣಗಳ ಒಳಭಾಗದಲ್ಲಿ ಕಮಾನುಗಳು ಮತ್ತು ಮೇಲೆ ಗುಮ್ಮಟಾಕಾರದ ಛಾವಣಿಗಳು ಇವೆ. ಕಟ್ಟಡದ ಒಳಭಾಗಕ್ಕೆ ಮಾಡಿದ ಗಾರೆಯಲ್ಲಿ ಕೆಲವು ಗಾರೆಯ ಅಲಂಕಾರಿಕ ವಿನ್ಯಾಸಗಳ ಅವಶೇಷಗಳಿವೆ. ಮಧ್ಯದ ಅಂಕಣದಿಂದ ಉತ್ತರ ದಿಕ್ಕಿಗೆ ಒಂದು ಮುಂಚಾಚು (projecting

balcony) ಇದೆ. ಗೋಡೆಯಿಂದ ಹೊರಬಂದ ಬೋದಿಗೆಗಳ ಮೇಲೆ ಇದು ನಿಂತಿದೆ. ಮುಂಚಾಚಿನಲ್ಲಿ ಕುಳಿತುಕೊಳ್ಳಲು ವೇದಿಕೆಯನ್ನು ನಿರ್ಮಿಸಿದೆ. ಇಂತಹ ವೇದಿಕೆಯನ್ನೇ ಮುದುಗಲ್ಲಿನಲ್ಲಿ ಸೊಫೆ ಎಂದು ಶಾಸನದಲ್ಲಿ ಕರೆದಿರುವುದು. ಮುಂಚಾಚಿನ ಉತ್ತರಗೋಡೆಯಲ್ಲಿ ಕೆಳಭಾಗದಲ್ಲಿ ಕಮಾನಿನಾಕಾರದ ಮೂರು ಮತ್ತು ಮೇಲೆ ಆಯತಾಕಾರದ ಒಂದು ಕಿಟಕಿಗಳಿವೆ. ಕಟ್ಟಡದ ಮೇಲಿನ ಕೈಪಿಡಿ ಗೋಡೆಯಲ್ಲಿ ಆಯತಾಕಾರದ ತೆನೆಗಳಿವೆ. ಕೈಪಿಡಿ ಗೋಡೆ ಮತ್ತು ತೆನೆಗಳಲ್ಲಿ ಬಂದೂಕುಗಳಿಗಾಗಿ ಮಾಡಿದ ಕಿಂಡಿಗಳಿವೆ. ಮುಂಭಾಗದಲ್ಲಿ ತೆನೆಗಳ ಮೇಲ್ಭಾಗ ವಕ್ರಾಕಾರವಾಗಿ ಇಳಿಜಾರಾಗಿದೆ. ತೆನೆಗಳ ಆಕಾರದಲ್ಲಿ ಬದಲಾವಣೆಯನ್ನು ಇಲ್ಲಿ ಗಮನಿಸಬಹುದು. ಹದಿನೆಂಟನೇ ಶತಮಾನದ ಕೊನೆಯ ಪಾದದಲ್ಲಿ ಇಂತಹ ತೆನೆಗಳು ಕಂಡುಬರುತ್ತವೆ.

ಈ ಕಟ್ಟಡಕ್ಕೆ ಸಂಬಂಧಿಸಿದ ಎರಡು ಪರ್ಶಿಯನ್ ಶಾಸನಗಳು ಇದರ ಪಕ್ಕದಲ್ಲಿ ಆಗ್ನೇಯಕ್ಕಿರುವ ಚಿಕ್ಕ ಮಂಟಪದ ಉತ್ತರ ದಿಕ್ಕಿನ ಕಂಬಗಳ ಮೇಲಿವೆ. ಒಂದು ಶಾಸನವು ಇದನ್ನು 'ಬಂಗಲ' (ಬಂಗಲೆ) ಎಂದು ಉಲ್ಲೇಖಿಸಿ, ಇದನ್ನು ನವಾಬ್‌ಮಹಮ್ಮದ್ ಹುಸೇನ್ ಖಾನ್ ಬಹಾದೂರ್‌ನ ಕಾಲದಲ್ಲಿ ಕ್ರಿ.ಶ. ೧೭೮೧ರಲ್ಲಿ ನಿರ್ಮಿಸಲಾಯಿತೆಂದು ತಿಳಿಸುತ್ತದೆ.[೮೪] ಮತ್ತೊಂದು ಶಾಸನವು ಇದನ್ನು 'ತಾಜ್‌ಬಂಗಲ' ಎಂದು ಉಲ್ಲೇಖಿಸಿ, ಅದೇ ವ್ಯಕ್ತಿ, ಅದೇ ವರ್ಷ ಪಾಂಚ್‌ಬೀಬಿ ಬೆಟ್ಟದ ಮೇಲೆ ಮರದ ಕೆಳಗೆ ಕಟ್ಟಿಸಿದನೆಂದು ತಿಳಿಸುತ್ತದೆ.[೮೫] ಕಟ್ಟಡದ ಹೆಸರು ಮತ್ತು ಕಾಲವನ್ನು ಸೂಚಿಸುವ ಈ ಶಾಸನಗಳು ಬಹಳ ಮಹತ್ವದವಾಗಿವೆ.

ಮೇಲೆ ತಿಳಿಸಿದ ಶಾಸನಗಳಿರುವ ಮಂಟಪವನ್ನು ಪನ್ನೆರಡು-ಹದಿಮೂರನೇ ಶತಮಾನಗಳ ದೇವಾಲಯದ ನಾಲ್ಕು ಕಂಬಗಳು, ಬೋದಿಗೆಗಳು ಮತ್ತು ತೊಲೆಗಳನ್ನು ಪುನಃ ಉಪಯೋಗಿಸಿ ಕಟ್ಟಲಾಗಿದೆ. ಇದು ಈಗ ಶಿಥಿಲಾವಸ್ಥೆಯಲ್ಲಿದೆ. ಇದೊಂದು ಕಾವಲು ಗೋಪುರವಾಗಿದೆ (ಚಿತ್ರ ೩೬).

ದರ್ಬಾರ್ ಹಾಲ್‌ನ ಮುಂಭಾಗದಲ್ಲಿ ಚೌಕಾಕಾರದ ದೊಡ್ಡ ನೀರಿನ ತೊಟ್ಟಿಯಿದೆ. ಇದು ಈಗ ಮಣ್ಣಿನಿಂದ ಮುಚ್ಚಿ ಹೋಗಿದೆ. ಇದರ ಮುಂದೆ ವೃತ್ತಾಕಾರದ ದೊಡ್ಡ ವೇದಿಕೆಯಿದೆ. ವೇದಿಕೆಯ ಮೇಲೆ ೬.೨೦ ಮೀ. ಉದ್ದವಿರುವ ಕಬ್ಬಿಣದ ತೋಪು ಬಿದ್ದಿದೆ (ಚಿತ್ರ ೩೮). ಇದನ್ನು ಉದ್ದವಾದ ಪಟ್ಟಿಗಳ ಒಳಪದರು ಮತ್ತು ಅಗಲವಾದ ಬಳೆಗಳ ಹೊರಪದರುಗಳಿಂದ ಮಾಡಲಾಗಿದೆ. ಕೆಲವು ವರ್ಷಗಳ ಹಿಂದೆ ಇದು ಸುತ್ತಲೂ ತಿರುಗಿಸಬಹುದಾದ ಅಡ್ಡಣಿಗೆ (mount) ಮೇಲೆ ನಿಂತಿತ್ತು. ಅಡ್ಡಣಿಗೆಯನ್ನು ಇಲ್ಲಿಂದ ಅಪಹರಿಸಲಾಗಿದೆ.

ದರ್ಬಾರ್ ಹಾಲ್‌ನ ಪಶ್ಚಿಮಕ್ಕೆ ಒಂದಂಕಣದ ಚಿಕ್ಕ ಮಸೀದಿಯಿದೆ. ಇದರ ನಾಲ್ಕು ಮೂಲೆಗಳಲ್ಲಿ




೩೪. ರಾಯಚೂರು, ತಾಚ್ ಬಂಗಲೆ



೩೫. ರಾಯಚೂರು, ತಾಜ್ ಬಂಗಲೆ



೩೬. ರಾಯಚೂರು, ಮಂಟಪ

ಚಿಕ್ಕ ಮಿನಾರ್‌ಗಳಿವೆ (ಚಿತ್ರ ೩೯). ಮೇಲಿನ ಕೈಪಿಡಿಗೋಡೆಯಲ್ಲಿ ಕೆಳಭಾಗದಲ್ಲಿ ಕಳವಾರ ಆಕಾರದ ಕಿಂಡಿಗಳನ್ನು ಮತ್ತು ಮೇಲ್ಭಾಗದಲ್ಲಿ ತೆನೆಗಳು ಇವೆ. ತೋಪಿನ ವೇದಿಕೆಯ ಪಶ್ಚಿಮಕ್ಕೆ ಪಾಂಚ್‌ಬೀಬಿ ದರ್ಗಾ ಇದೆ. ಇದರಲ್ಲಿ ಐವರು ಮಹಿಳಾ ಸಂತರ ಗೋರಿಗಳಿವೆ. ದರ್ಬಾರ್ ಹಾಲ್ ಹಿಂದೆ ಬಂಡೆಗಳ ಮಧ್ಯದಲ್ಲಿ ಒಂದು ಬಂಡೆಯ ಮೇಲೆ ನಂದಿಯನ್ನು ಕೆತ್ತಿದೆ. ನಂದಿಯ ತಲೆ ಮತ್ತು ಹಿಂದಿನ ಭಾಗ ಭಗ್ನವಾಗಿದೆ. ಇದರ ಕೆಳಭಾಗ ಮತ್ತು ಕಾಲುಗಳನ್ನು ನೈಜವಾಗಿ ಕೆತ್ತಿದೆ.

## ಇತರ ಕಟ್ಟಡಗಳು

ಕೋಟೆಯೊಳಗೆ ಮತ್ತು ಹೊರಗೆ ಅನೇಕ ಬಾವಿ, ಮಸೀದಿ, ದರ್ಗಾ, ಗೋರಿ ಮುಂತಾದವುಗಳಿವೆ. ಒಳಕೋಟೆಯೊಳಗಡೆ ಕಾಲಿಮಸೀದಿ, ದಫ್ತರ್-ಕಿ-ಮಸೀದಿ, ಕೋಟೆ ಜಾಮಿ ಮಸೀದಿ, ಬಾಲಹಿಸಾರ್ ಮಸೀದಿ, ಪೀರ್ ಶೈಲಾನಿಶಾಹ ದರ್ಗಾ, ಪೀರ್ ಪಟೋಲ ಸಾಹಿಬ್ ಗೋರಿ, ಹಜರತ್‌ಶೇಖ್ ಮಿಯಾ ಸಾಹಿಬ್ ದರ್ಗಾ, ಪಾಂಚ್‌ಬೀಬಿ ದರ್ಗಾ, ನೀರಿನ ಹೌದು, ಒಂದು ಅರಮನೆ, ಅಸರ್‌ಶರೀಫ್, ಹಜಾರ ಬೇಗ್ ಮಸೀದಿ ಮತ್ತು ಮೀರ್ ಹಸನ್ ಸಾಹಿಬ್ ದರ್ಗಾ ಇವೆ. ಹೊರಕೋಟೆಯೊಳಗೆ ಸಿಕಂದರೀ ಮಸೀದಿ, ಏಕಮಿನಾರ್ ಮಸೀದಿ, ಬೀಬಿ ಹಲೀಮಾ ಅಥವಾ ಲೋಹಾರೊಂಕಿ ಮಸೀದಿ, ಬ್ರಿಟಿಷ್ ಮದ್ದಿನ ಮನೆ, ಯತೀಮ್‌ಶಾಹ ಮಸೀದಿ, ಖಾಸ್ ಬೌಡಿ ಮತ್ತು ಅಂಧೇರಿ ಬೌಡಿ ಇವೆ. ಹೊರ ಕೋಟೆಯ ಹೊರಗೆ ಶ್ರಾಫ್ ಬಜಾರದಲ್ಲಿರುವ ಜಾಮಿ ಮಸೀದಿ, ಚೌಕ ಮಸೀದಿ, ದಾರ ಜಾಹ್ ಗೋರಿ, ಪೀರ್ ಕಾಬಿಲ್‌ವಲಿ ದರ್ಗಾ ಮತ್ತು ಶಾಹಅಬುತಾಹ ಹುಸೇನಿ ದರ್ಗಾ ಇವೆ.

ಸಿಕಂದರೀ ದರ್ವಾಜದಿಂದ ಸ್ವಲ್ಪ ದೂರ ಪಶ್ಚಿಮಕ್ಕೆ ಬಂದಾಗ ರಸ್ತೆಯ ದಕ್ಷಿಣಕ್ಕೆ ಪ್ರಾಚೀನ ಹಿಂದು ಅರಮನೆಯ ಅವಶೇಷಗಳಿವೆ. ಈಗಿನ ಜೈಲು (ಬಂದಿಖಾನೆ) ಅರಮನೆಯ ಒಂದು ಭಾಗವಾಗಿತ್ತು. ಕಟ್ಟಡದಲ್ಲಿ ಅನೇಕ ಬದಲಾವಣೆಗಳನ್ನು ಮಾಡಿರುವುದರಿಂದ ಅದರ ಮೂಲ ಸ್ವರೂಪಕ್ಕೆ ಬಹಳಷ್ಟು ಹಾನಿಯಾಗಿದೆ. ಎರಡನೇ ಇಬ್ರಾಹಿಮ್ ಆದಿಲ್ ಶಾಹನ ಕಾಲದ ಕ್ರಿ.ಶ. ೧೬೨೨-೨೩ರ ಒಂದು ಶಾಸನವು ಅಬ್ದುಲ್ ಮಹಮ್ಮದ್‌ನು ಅಂಬರ್‌ಖಾನವನ್ನು ಕಟ್ಟಿಸಿದನೆಂದು ಉಲ್ಲೇಖಿಸಿದೆ. ಅಂಬರ್‌ಖಾಸ ಎಂದರೆ ಕಣಜ. ಆದರೆ ಈ ಶಾಸನವು ಮೂಲಸ್ಥಾನದಲ್ಲಿರದೆ ಕೋಟೆ ಜಾಮಿ ಮಸೀದಿಯ ಹತ್ತಿರದ ಶಾಹ ಮೀರ್ ಹುಸೇನ್ ದರ್ಗಾದ ಬಾಗಿಲ ಮೇಲಿದೆ. ಆದುದರಿಂದ ಶಾಸನದಲ್ಲಿ ಉಲ್ಲೇಖಗೊಂಡ ಕಣಜವನ್ನು ಈಗ ಗುರುತಿಸ ಲಾಗುವುದಿಲ್ಲ.

ಕಂದಕ್ ದರ್ವಾಜದ ಹತ್ತಿರವಿರುವ ಖಾಸ್ ಬೌಡಿ ಆಯತಾಕಾರದ ದೊಡ್ಡ ಬಾವಿ. ಇದರ ನಾಲ್ಕು ಮೂಲೆಗಳಲ್ಲಿ ಮೆಟ್ಟಿಲುಗಳಿವೆ. ಬಾವಿಯ ಮಧ್ಯದಲ್ಲಿ ಎತ್ತರವಾದ ಕಟ್ಟೆಯಿದೆ. ಕಟ್ಟೆಯನ್ನು ತಲುಪಲು ಪಶ್ಚಿಮದಿಂದ ಸೇತುವೆಯ ದಾರಿಯಿದೆ. ಈ ಬಾವಿ ಇಡೀ ಕೋಟೆಯೊಳಗಿನ ಜನರಿಗೆ ನೀರನ್ನು ಪೂರೈಸುತ್ತಿತ್ತೆಂದು ಹೇಳಲಾಗುತ್ತದೆ. ಈ ಬಾವಿಯ ಉತ್ತರ ದಿಕ್ಕಿನಲ್ಲಿ ಮೆಟ್ಟಿಲುಗಳಿವೆ. ಶಕ್ಕರ್‌ಬೌಡಿ ಎಂದು ಕರೆಯುವ ಬಾವಿಯನ್ನು ಕ್ರಿ.ಶ. ೧೫೦೮ರಲ್ಲಿ ನೂರುದ್ದೀನ್ ಕರೀಮನು ಕಟ್ಟಿಸಿದನು.[೮] ಬಂಡಾ ಬೌಡಿ ಬಾವಿಯನ್ನು ದಿಡ್ಡಿ ದರ್ವಾಜದೊಂದಿಗೆ ಈಗಾಗಲೇ ಗಮನಿಸಿದ್ದೇವೆ. ಕೋಟೆಯೊಳಗಿನ ಬಾವಿಗಳಲ್ಲದೆ ಕೋಟೆಯ ಹೊರಗೆ ದಕ್ಷಿಣಕ್ಕೆ ದೊಡ್ಡ ಕೆರೆಯಿದೆ.

### ಅಡಿ ಟಿಪ್ಪಣಿಗಳು

೧. Patil Channabasappa S. and Vinoda C. Patil 1998, (Eds) *Inscriptions of Raichur District*, Nos. 423-425, *ARIE*, 1957-58, Nos. B 386-388, 1961-62, No. B 614.

೨. *ಅದೇ,* No, 460.

೩. *EC,* IV, ನಾಗಮಂಗಲ 70; V, ಬೇಲೂರು 137,193.

೪. Desai P.B. Shrinivas H. Ritti and B.R. Gopal, 1981, A *History of Karnataka,* Dharwad, p. 245; Sastri P.V. Parabrahma,1978, The *Kakatiyas,* Hyderbad, p. 131.

೫. Patil Channabasappa S. and Vinoda C.Patil, *ಪೂರ್ವೋಕ್ತ,* No. 420; *ARIE,* 1957-58, No. B 383, *APGAS,* 3, No. 78; Sarma V. Suguna, 1998, *History and Antiquities of Raichur Fort*. Delhi, No. 1, pp. 53-57.

೬. *ಅದೇ,* No. 427; *ARIE,* 1958-59, No. B 128; *EIAPS,* 1962, pp. 58-59. pl. xvi (b)

೭. *ಅದೇ,* No. 432; *ARIE*, 1958-59, No. B 133, 1962-63, No. B178; *EIAPS*,1962, pp. 59-60, pl. xvii (b)

೮. ಅದೇ, No. 457; *ARIE,* 1958-59, No.B 156; *EIAPS,* 1962, pp 60-6. pl. xvii (b).

೯. Nilakantasastri K.A.,1971, *A History of South India*, p. 275.

೧೦. Patil Channabasappa S. and Vinoda C. Patil, *ಪೂರ್ವೋಕ್ತ,* No. 480; *EIM,* 1939-40, p.13, pl. iv (b); Sarma V. Suguna, *ಪೂರ್ವೋಕ್ತ,* No. 2.

೧೧. *ಅದೇ,* No. 481; *EIM*, 1939-40, p. 13-14, pl. v (a); Sarma V Suguna, *ಪೂರ್ವೋಕ್ತ,* No. 3.

೧೨. *ಅದೇ,* No. 440; *EIAPS*,1962, pp. 65-66, pl. xx (a); Sarma V. Suguna, *ಪೂರ್ವೋಕ್ತ,* No. 17.

೧೩. *ಅದೇ,* No. 482; *EIM,* 1939-40, pp. 14-15, pl. v (b); Sarma V. Suguna, *ಪೂರ್ವೋಕ್ತ,* No. 5.

೧೪. *ಅದೇ,* No. 483; *EIM,* 1939-40, p. 16, pl. vi (a); Sarma V. Suguna, *ಪೂರ್ವೋಕ್ತ,* No. 4.

೧೫. Desai P.B. etal, *ಪೂರ್ವೋಕ್ತ,* p. 384.

೧೬. Sewell Robert, 1982, (Reprint), *A Forgotten Empire, New* Delhi, p. 330.

೧೭. Desai P. B. *et al, ಪೂರ್ವೋಕ್ತ,* ಪು.388.

೧೮. Patil Channabasappa S. and Vonoda C. Patil, *ಪೂರ್ವೋಕ್ತ,* No. 484; *EIM,* 1939-40, p. 16, pl. vi (a) Sarma Suguna, *ಪೂರ್ವೋಕ್ತ,* No. 5.

೧೯. *ಅದೇ,* No. 430; *ARIE,* 1958-59, No. D 131; *EIAPS,* 1963, p. 62, pl. xix (a).

೨೦. *ಅದೇ,* No. 431; *ARIE,* 1958-59, No. D 132; *EIAPS,* 1963, p. 63; pl. xx (a).

೨೧. *ಅದೇ,* No. 465; *ARIE*, 1962-63, No. D 179; *EIAPS,* 1963, pp. 63-64. pl. xx (b).

೨೨. *ಅದೇ,* No. 466; *ARIE,* 1962-63, No. D 180; *EIAPS*, 1963, pp.64-65, pl. xix (c).

೨೩. Sewell Robert, *ಪೂರ್ವೋಕ್ತ,* p. 190.

೨೪. Patil Channabasappa S. and Vinoda C. Patil, *ಪೂರ್ವೋಕ್ತ,* No. 422; *ARIE,* 1957-58, No. B 385.

೨೫. *ಅದೇ,* No. 421; *ARIE,* 1957-58, No. B 384.

೨೬. *ಅದೇ,* No. 426; *ARIE*, 1958-59, No. B 723.

೨೭. Desai P. B. *et al, ಪೂರ್ವೋಕ್ತ,* p. 394-395.

೨೮. Patil Channabasappa S. and Vinoda C. Patil, *ಪೂರ್ವೋಕ್ತ,* No. 485; *EIM*,1939-40, pp.17-18, pl. vii (a); Sarma V. Suguna, *ಪೂರ್ವೋಕ್ತ,* No. 7.

೨೯. *ಅದೇ,* No. 445; *IA,* XI, p.130; *ARIE,* 1958-59, No.D 146; *EIAPS,* 1963, p. 65, pl. xix (b).

೩೦. *ಅದೇ,* No. 433; *ARIE,* 1958-59, No. D 134; *EIAPS,*1963, p. 66, pl. xxi (b).

೩೧. *ಅದೇ,* No. 467; *ARIE,* 1962-63, No. D 181; *EIAPS,* 1963, pp. 68-69, pl. xxii (b).

೩೨. *ಅದೇ,* No. 468; *ARIE,* 1962-63, No. D 182; *EIAPS,* 1963, pp. 67-68; pl. xxii (c).

೩೩. *ಅದೇ,* No, 469; *ARIE,* 1962-63, No. D 183; *EIAPS,* 1963, p. 69, pl. xxii (a).

೩೪. *ಅದೇ,* No. 486; *EIM*, 1939-40, pp. 18-19, pl. vii (b); Sarma V. Suguna, *ಪೂರ್ವೋಕ್ತ,* No. 8.

೩೫. *ಅದೇ,* No. 487; *EIM,* 1939-40, pp.19-20, pl. viii (a); Sarma V. Suguna, *ಪೂರ್ವೋಕ್ತ,* No. 9.

೩೬. *ಅದೇ,* No. 488; *EIM*, 1939-40, pp.20-21, pl. viii (b); Sarma V. Suguna, *ಪೂರ್ವೋಕ್ತ,* No. 10.

೩೭. *ಅದೇ,* No. 489; *IA*, XI, pp. 129-131; *EIM,* 1939-40, pp. 21-22, pl. ix; Sarma V. Suguna, *ಪೂರ್ವೋಕ್ತ,* No. 11.

೩೮. *ಅದೇ,* No. 428; *ARIE,*1958-59, No. D 129; *EIAPS,* 1963, pp. 70-71, pl. xxiii (b).

೩೯. *ಅದೇ,* No. 429; *ARIE*, 1958-59, No. D 130; *EIAPS,* 1963, pp. 71-72, pl. xxiii (c).

೪೦. *ಅದೇ,* No. 437; *ARIE,*1958-59, No. D 131; *EIAPS*, 1963, p. 75, pl. xxi (a).

೪೧. *ಅದೇ,* Nos. 434-435; *ARIE*, 1958-59, No. D 135-136; *EIAPS,* 1963, pp. 72-75, pl. xxi (c), xxiii(a).

೪೨. *ಅದೇ,* No. 446; *ARIE,* 1958-59, No. D147; *EIAPS,* 1963, pp.76-77, pl. xxvi (a).

೪೩. *ಅದೇ,* Nos. 453-454; *ARIE*, 1958-59, No. D 152-153.

೪೪. *ಅದೇ,* No. 490; *EIM,* 1939-40, pp. 22-23, pl. x (a); Sarma V. Suguna, *ಪೂರ್ವೋಕ್ತ,* No. 12.

೪೫. *ಅದೇ,* No. 470; *ARIE,* 1962-63, No. D 184; *EIAPS,* 1963, pp. 77-78, pl. xxiv (b).

೪೬. *ಅದೇ,* No. 441; *ARIE,*1958-59, No. D 142.

೪೭. *ಅದೇ,* No. 471; *ARIE*, 1962-63, No. D 185.

೪೮. *ಅದೇ,* Nos. 472-473; *ARIE,* 1962-63, No. D 186-187.

೪೯. *ಅದೇ,* No. 455; *ARIE,* 1958-59, No. D 154.

೫೦ *ARADND,* 1929-30, pp. 6-19; Toy Sidney,1965, *The Fortified Cities of India,* London, pp.10-15 ಪಾಟೀಲ ಚನ್ನಬಸಪ್ಪ ಎಸ್. "ರಾಯಚೂರು ಕೋಟೆ" *ದಿಕ್ಸೂಚಿ,* ಮಾಸಪತ್ರಿಕೆ, ಅಕ್ಟೋಬರ್ ೧೯೯೯ ಪು.೨೮-೩೦ ೧೯೯೯, ಕರ್ನಾಟಕ ಕೋಟೆಗಳು, ಪು. ೫೪-೬೨ Sarma V. Suguna, 1994, "Raichur Fort" A Brief Sketch," *JAPSARI,* xx, pp. 37-43; 1998, History and Antiquities of Raichur Fort, Delhi; ಸುಜಾತ ಮಲ್ಲನಗೌಡ, ೧೯೯೮, "ರಾಯಚೂರು ಕೋಟೆಯಲ್ಲಿನ ಕೊತ್ತಳಗಳು," *ಇತಿಹಾಸ ದರ್ಶನ,* ಸಂ ೧೩, ಪು.೮೫-೮೬; ೧೯೯೮, "ಕೃಷ್ಣದೇವರಾಯನ ರಾಯಚೂರು ದಂಡಯಾತ್ರೆ ಮತ್ತು ರಾಯಚೂರು ಕೋಟೆಯ ನವರಂಗ ದರ್ವಾಜ," *ವಿಜಯನಗರ ಅಧ್ಯಯನ,* ಸಂ.೩,(ಸಂ.) ಎಂ.ಎಲ್. ಶಿವಶಂಕರ ಮತ್ತು ಚನ್ನಬಸಪ್ಪ ಎಲ್ ಪಾಟೀಲ, ಮೈಸೂರು, ಪು. ೪೭-೫೧.

೫೧. ಆಂಧ್ರಪ್ರದೇಶದಲ್ಲಿಯ ವಾರಂಗಲ್ಲಿನಲ್ಲಿಯ ಕೋಟೆಯಲ್ಲಿ ಇಂತಹ ಕಲ್ಲುಗಳನ್ನು ಬಳಸಿದೆ. Ramachandra Murthy N.S.,1966, *Forts of Andhra Pradesh; From the eariest times upto sixteenth century A.D.,*Delhi, pls. 5-9.

೫೨. Patil Channabasappa S. and Vinoda C. Patil, *ಪೂರ್ವೋಕ್ತ,* No. 420; *ARIE,* 1957-58, No.B 383; *APGAS*, 3, No. 78; Sarma V. Suguna, 1998, *ಪೂರ್ವೋಕ್ತ,* No. 1, pp. 53-57.

೫೩. *ಅದೇ,* Nos. 421, 422,426; *ARIE*, 1957-58, Nos. B 384, 385; 1958-59, No. B 723.

೫೪. *ಅದೇ,* No. 470; *ARIE,* 1962-63, No. D 184; *EIAPS,* 1963, pp. 77-78, pl. xxiv (b).

೫೫. *ಅದೇ,* No. 432; *ARIE,* 1958-59, No. D 133; 1962-63, No. D 178; *EIAPS,* 1962, pp. 59-60, pl. xvii (a); Sarma V. Suguna, *ಪೂರ್ವೋಕ್ತ,* No. 14.

೫೬. Ramachandra Murthy, *ಪೂರ್ವೋಕ್ತ,* pl. 3.

೫೭. Dhaky M. A., 1996, Encyclopaedia of *Indian Temple Architecture, South India,* Upper Dravidadesa, Later Phase, A.D. 973-1326, pl. 1535.

೫೮. Patil Channabasappa S.and Vinoda C. Patil, *ಪೂರ್ವೋಕ್ತ,* No. 465; *ARIE,* 1962-63, No. D 179; *EIAPS,* 1963, pp. 63-64, pl. xx (b).

೫೯. *ಅದೇ,* No. 427; *ARIE,* 1958, No. D 128; *EIAPS,* 1962, pp. 58-59, pl. xvi (b); Sarma V. Suguna, *ಪೂರ್ವೋಕ್ತ,* No. 13.

೬೦. *ARADND,* 1929-30, p.14.

೬೧. Patil Channabasappa S. and Vinoda C. Patil, *ಪೂರ್ವೋಕ್ತ,* No. 428; *ARIE,* 1958-59, No. D 129; *EIAPS*, 1963, pp. 70-71, pl. xxiii (b).

೬೨. *ಅದೇ,* No. 429; *ARIE,* 1958-59, No. D 130; *EIAPS,* 1963, pp. 71-72, pl. xxiii (c).

೬೩. *ARADND,* 1929-30, p. 16.

೬೪. Patil Channabasappa S. and Vinoda C. Patil, *ಪೂರ್ವೋಕ್ತ,* No. 466; *ARIE,* 1962-63, No. D 180; *EIAPS,* 1963, pp. 64-65, pl. xix (c).

೬೫. *ಅದೇ,* No. 467; *ARIE,* 1962-63, No. D 181; *EIAPS*, 1963, pp. 68-69, pl. xxii(b).

೬೬. *ಅದೇ,* No. 468; *ARIE,* 1962-63, No. D 182; *EIAPS,* 1963, pp. 67-68, pl. xxii (c).

೬೭. ಅದೇ, No. 469; *ARIE*, 1962-63, No. D 183; *EIAPS,* 1963, p. 69, pl. xxii (a).

೬೮. ಅಹಮ್ಮದ್ ಬಶೀರುದ್ದೀನ್, ವಾಕಿಯತ್-ಎ-ಮುಮಲಿಕತ್-ಎ-ತಾರೀಕ್-ಎ-ಬಿಜಾಪುರ, ಪು. ೩೨೦

೬೯. Patil Channabasappa S. and Vinoda C. Patil, *ಪೂರ್ವೋಕ್ತ,* No. 487; IA, xi, pp. 129-131; *EIM,* 1939-40, pp.19-20, pl. viii (a); Sarma V. Suguna, *ಪೂರ್ವೋಕ್ತ,* No. 9.

೭೦. *ಅದೇ,* No. 486; *EIM,* 1939-40, pp. 18-19, pl. vii(b); Sarma V. Suguna, *ಪೂರ್ವೋಕ್ತ,* No. 8.

೭೧. *ಅದೇ,* No. 483; *EIM*, 1939-40, p. 16, pl. vi (a); Sarma V. Suguna, *ಪೂರ್ವೋಕ್ತ,* No. 5.

೭೨. *ಅದೇ,* No. 471; *ARIE,* 1962-63, No. D 185.

೭೩. *ಅದೇ,* No. 445; *IA*, XI, p. 130; *ARIE,* 1958-59, No. D 146; *EIAPS,* 1963, p. 65, pl. xix(b).

೭೪. *ಅದೇ,* No. 489; *IA,* XI, pp. 129-131; *EIM,* 1939-40, pp. 21-22, pl. ix, Sarma V. Suguna, *ಪೂರ್ವೋಕ್ತ,* No. 11.

೭೫. *ಅದೇ,* No. 490; *EIM,* 1939-40, pp.22-23, pl. x (a); Sarma V. Suguna, *ಪೂರ್ವೋಕ್ತ,* No. 12.

೭೬. *ಅದೇ,* No. 431; *ARIE,* 1958-59, No. D 132; *EIAPS,* 1963, p. 63, pl.xx (a).

೭೭. *ಅದೇ,* No. 484; *EIM,* 1939-40, pp. 16-17, pl. vi(b); Sarma V. Suguna, *ಪೂರ್ವೋಕ್ತ,* No. 6.

೭೮. ಅಹಮದ್ ಬಶೀರುದ್ದೀನ್, 1915, *ಪೂರ್ವೋಕ್ತ,* ಪು. ೩೨೨.

೭೯. Patil Channabasappa S. and Vinoda C. Patil, *ಪೂರ್ವೋಕ್ತ,* No. 430; *ARIE,* 1958-59, No. D 131; *EIAPS,*1963, p. 62, pl. xix (a).

೮೦. ಅಹಮದ್ ಬಶೀರುದ್ದೀನ್, *ಪೂರ್ವೋಕ್ತ,* ಪು. ೩೧೬.

೮೧. *ಅದೇ,* ಪು ೩೨೧.

೮೨. Patil Channabasappa S. and Vinoda C. Patil, *ಪೂರ್ವೋಕ್ತ,* No. 485; *EIM,* 1939-40, pp. 17-18, pl. vii (a); Sarma V. Suguna, *ಪೂರ್ವೋಕ್ತ,* No. 7.

೮೩. *ಅದೇ,* No. 488; *EIM,* 1939-40, pp. 20-21, pl. viii (b); Sarma V. Suguna, *ಪೂರ್ವೋಕ್ತ,* No. 10.

೮೪. *ಅದೇ,* No. 472; *ARIE,*1962-63, No. D 186.

೮೫. *ಅದೇ,* No. 473; *ARIE,* 1962-63, No. D 187.

೮೬. *ಅದೇ,* No. 481; *EIM,* 1939-40, p. 13-14, pl. v (a); Sarma V. Suguna, *ಪೂರ್ವೋಕ್ತ,* No. 3.

## ೨. ಮಲಿಯಾಬಾದ

ಮಲಿಯಾಬಾದ ರಾಯಚೂರು ತಾಲೂಕಿನ ರಾಯಚೂರಿನ ದಕ್ಷಿಣಕ್ಕೆ ೮ ಕಿ.ಮೀ. ದೂರದಲ್ಲಿರುವ ಚಿಕ್ಕ ಗ್ರಾಮ. ಅಕ್ಷಾಂಶ ೧೬° ೧೧' ಉತ್ತರ ಮತ್ತು ೭೭° ೨೮' ಪೂರ್ವ ರೇಖಾಂಶದಲ್ಲಿದೆ. ಇಲ್ಲಿ ನೆಲದ ಮಟ್ಟದಲ್ಲಿ ಮತ್ತು ಸ್ವಲ್ಪ ಭಾಗ ಬೆಟ್ಟದ ಮೇಲೆ ಕಟ್ಟಿದ ಬಲಿಷ್ಠವಾದ ಎರಡು ಸುತ್ತಿನ ಕೋಟೆಯಿದೆ. ಕೋಟೆಯ ಒಳ ಸುತ್ತು ಕಾಕತೀಯರ ಕಾಲದಲ್ಲಿ ಹದಿಮೂರನೇ ಶತಮಾನದ ಕೊನೆಯಲ್ಲಿ ಮತ್ತು ಹೊರ ಸುತ್ತ ಸುಮಾರು ಹದಿನೈದನೇ ಶತಮಾನದಲ್ಲಿ ನಿರ್ಮಾಣಗೊಂಡಿವೆ. ಕೋಟೆಯೊಳಗೆ ಜನವಾಸವಿಲ್ಲ. ಈಗಿನ ಊರು ಕೋಟೆಯ ಹೊರಗೆ ಸ್ವಲ್ಪ ದೂರದಲ್ಲಿದೆ.

### ಐತಿಹಾಸಿಕ ಹಿನ್ನೆಲೆ

ಮಲಿಯಾಬಾದಿನ ಇತಿಹಾಸವನ್ನು ಶಾಸನಗಳ ಆಧಾರದ ಮೇಲೆ ಒಂಬತ್ತನೇ ಶತಮಾನದಷ್ಟು ಹಿಂದಕ್ಕೆ ಒಯ್ಯಬಹುದು. ಈ ಶತಮಾನದ ಎರಡು ಶಾಸನಗಳು ಈ ಊರಿನಲ್ಲಿವೆ. ಅವುಗಳಲ್ಲಿ ಕೋಟೆಯ ಪಶ್ಚಿಮಕ್ಕೆ ಇರುವ ಶಾಸನ ರಾಷ್ಟ್ರಕೂಟ ಅರಸ ಒಂದನೇ ಅಮೋಘವರ್ಷನ ಆಳ್ವಿಕೆಯ ಕ್ರಿ.ಶ. ೮೭೦ರದು. ಅವನ ಸಾಮಂತ ನೊಳಂಬ ವಂಶದ ಪಲ್ಲ ಅರಸನು ಎಡೆದೊರೆ -೨೦೦೦ವನ್ನು ಆಳುತ್ತಿದ್ದು ಇಲ್ಲಿ ಪಲ್ಲೇಶ್ವರದೇವರ ದೇವಾಲಯವನ್ನು ಕಟ್ಟಿಸಿದನೆಂದು ಈ ಶಾಸನ ತಿಳಿಸುತ್ತದೆ.[೧] ಒಂಬತ್ತನೇ ಶತಮಾನದ ಮತ್ತೊಂದು ಶಾಸನವು ಕೋಟೆಯ ಪಕ್ಕದ ಬೆಟ್ಟದ ಮೇಲಿನ ಗವಿಯಲ್ಲಿದೆ. ಇಲ್ಲಿಗೆ ಬಂದು ತಪಸ್ಸು ಮಾಡಿ, ಕೊಂಡದಲ್ಲಿ ಮಿಂದು, ದೇವರನ್ನು ಕಂಡು, ಗುಹೆಯನ್ನು ನೋಡಿದರೆ ಪಾಪಪ್ರ ನಾಶವಾಗುವುದೆಂದು ಇದು ತಿಳಿಸುತ್ತದೆ.[೨] ಆ ಕಾಲದಲ್ಲಿ ಮಲಿಯಾಬಾದ ಒಂದು ಪುಣ್ಯ ಕ್ಷೇತ್ರವಾಗಿತ್ತೆಂದು ಸ್ಪಷ್ಟವಾಗುತ್ತದೆ. ಹನ್ನೆರಡನೇ ಶತಮಾನದ ಒಂದು ಶಾಸನವು ಸಿದ್ದನಾಥ ದೇವರಿಗೆ ಗೊಡವಂಚಿಯ ಬಾಣಸಿಗ ಒಮ್ಮಯ ಕೆರೆಯ ಗದ್ದೆಯನ್ನು ದಾನವಾಗಿ ಕೊಟ್ಟದ್ದನ್ನು ತಿಳಿಸುತ್ತದೆ.[೩]

ಕಾಕತೀಯ ಪ್ರತಾಪರುದ್ರನ ಕಾಲದಲ್ಲಿ ಕ್ರಿ.ಶ. ೧೨೯೪ರಲ್ಲಿ ವಿಠಲನಾಥನು ರಾಯಚೂರನ್ನು ಗೆದ್ದು ಅಲ್ಲಿ ಕೋಟೆಯನ್ನು ಕಟ್ಟಿಸಿದನು.[೪] ಅದೇ ಕಾಲದಲ್ಲಿ ಕಾಕತೀಯರಿಂದಲೇ ಮಲಿಯಾಬಾದ ಕೋಟೆಯ ನಿರ್ಮಾಣ ಆಗಿದೆ.

ಹದಿನಾರನೇ ಶತಮಾನದಲ್ಲಿ ಮೊದಲು ಇದು ಮುಸ್ಲಿಮ್ ಅರಸರ ವಶದಲ್ಲಿತ್ತು. ಕ್ರಿ.ಶ. ೧೫೧೩ರಲ್ಲಿ

ಮಲಿಕುಶ್ಶರ್ಕ್ ಮಲಿಕ್ ಅಂಬರ್ ಗ್ರಾಮದ ರೈತರು, ಗಾಣಿಗರು, ನೇಕಾರರು, ದರ್ಜಿಗಳು ಮುಂತಾದವರಿಗೆ ಅವರು ಕೊಡಬೇಕಾದ ತೆರಿಗೆಯನ್ನು ಕಡಿತಗೊಳಿಸಿದನೆಂದು ಪರ್ಶಿಯನ್ ಶಾಸನದಿಂದ ತಿಳಿಯುತ್ತದೆ.[೫] ರಾಯಚೂರು ಮತ್ತು ಮಲಿಯಾಬಾದ ಪ್ರದೇಶವು ಕ್ರಿ.ಶ. ೧೫೧೩-೧೪ರಲ್ಲಿ ಗುಲ್ಬರ್ಗದ ಬಹಮನಿ ಮಹಮ್ಮದ್ ಶಾಹನ ವಶದಲ್ಲಿತ್ತು. ಆಗ ಅಂಬರ್ ಎನ್ನುವ ಅಧಿಕಾರಿಯು ರಾಯಚೂರಿನಲ್ಲಿ ಏಕ ಮಿನಾರ ಮಸೀದಿಯನ್ನು ಕಟ್ಟಿಸಿದನು.[೬] ಈ ಅಂಬರ್‌ನೇ ಮಲಿಯಾಬಾದದ ಅಂಬರ್ ಆಗಿರಲು ಸಾಧ್ಯ. ಕ್ರಿ.ಶ. ೧೫೨೦ರಲ್ಲಿ ಇದು ವಿಜಯನಗರ ಅರಸರ ವಶದಲ್ಲಿತ್ತು. ಕೃಷ್ಣದೇವರಾಯ ರಾಯಚೂರಿನ ಮೇಲೆ ದಂಡೆತ್ತಿ ಬಂದಾಗ ಸೈನ್ಯದ ಬೀಡನ್ನು ಮಲಿಯಾಬಾದಿನ ಬಿಟ್ಟಿದ್ದನು. ಇತರ ದಂಡನಾಯಕರು ಬಂದು ಇಲ್ಲಿ ಅವನನ್ನು ಸೇರಿದರು. ಪ್ರಯಾಣದ ದಣಿವನ್ನಾರಿಸಿಕೊಂಡು, ಯಜ್ಞಯಾಗಾದಿಗಳನ್ನು ಪೂರೈಸಿ, ರಾಯಚೂರನ್ನು ಮುತ್ತಿದನು.[೭]

## ಕೋಟೆ

ಮಲಿಯಾಬಾದಿನಲ್ಲಿ ಎರಡು ಸುತ್ತಿನ ಕೋಟೆಯಿದೆ (ಚಿತ್ರ ೩೯). ಸುಮಾರಾಗಿ ಆಯತಾಕಾರದಲ್ಲಿರುವ ಈ ಕೋಟೆಯ ಒಳ ಕೋಟೆಯನ್ನು ಹದಿಮೂರನೇ ಶತಮಾನದ ಕೊನೆಯಲ್ಲಿ ಮತ್ತು ಹೊರಕೋಟೆಯನ್ನು ಸುಮಾರು ಹದಿನೈದನೇ ಶತಮಾನದಲ್ಲಿ ಕಟ್ಟಲಾಗಿದೆ.[೮]

## ಒಳಕೋಟೆ

ಒಳಕೋಟೆಯು ಪೂರ್ವ ಮತ್ತು ಉತ್ತರ ದಿಕ್ಕುಗಳಲ್ಲಿ ನೆಲಮಟ್ಟದಲ್ಲಿದ್ದು, ಪಶ್ಚಿಮದಲ್ಲಿ ಭಾಗಶಃ ನೆಲದ ಮೇಲೆ ಭಾಗಶಃ ಬೆಟ್ಟದ ಮೇಲೆ, ಮತ್ತು ದಕ್ಷಿಣ ದಿಕ್ಕಿನಲ್ಲಿ ಬೆಟ್ಟದ ಮೇಲಿದೆ. ಕೋಟೆಯನ್ನು ಬಹಳ ದೊಡ್ಡ ದಿಮ್ಮಿಯಾಕಾರದ ಕಲ್ಲುಗಳಿಂದ ಕಟ್ಟಿದೆ (ಚಿತ್ರಗಳು ೪೨-೪೩). ಕೆಲವು ಕಲ್ಲುಗಳು ಮೂರರಿಂದ ಐದು ಮೀಟರ್ ಉದ್ದ ಮತ್ತು ಒಂದರಿಂದ ಎರಡು ಮೀಟರ್ ದಪ್ಪ ಇವೆ. ಒಂದು ಕಲ್ಲು ೨೦ ಮೀಟರ್ ಉದ್ದವಿದೆ ಕಲ್ಲುಗಳ ಬದಿಗಳನ್ನು ಪಕ್ಕದ ಕಲ್ಲುಗಳ ಬದಿಗಳಿಗೆ ಹೊಂದಿಕೊಳ್ಳುವಂತೆ ರೂಪಿಸಿ ಮಧ್ಯದಲ್ಲಿ ಸಂದಿ ಬಿಡದಂತೆ ಕಟ್ಟಿದೆ. ಕಲ್ಲುಗಳ ಮಧ್ಯದಲ್ಲಿ ಯಾವುದೇ ಗಾರೆಯನ್ನು ಬಳಸಿಲ್ಲ. ಕೋಟೆಯ ಗೋಡೆಯನ್ನು ಎರಡು ವಿಧಾನದಲ್ಲಿ ಕಟ್ಟಲಾಗಿದೆ. ಮೊದಲಿನ ವಿಧಾನದಲ್ಲಿ ಪ್ರತಿಯೊಂದು ಸಾಲಿನಲ್ಲಿ ಒಂದು ಕಲ್ಲನ್ನು ಉದ್ದವಾಗಿ, ಅದರ ಪಕ್ಕದ ಕಲ್ಲನ್ನು ಅಡ್ಡವಾಗಿ, ಮೂರನೆಯದನ್ನು ಉದ್ದವಾಗಿ, ನಾಲ್ಕನೆಯದನ್ನು ಅಡ್ಡವಾಗಿ, ಹೀಗೆ ಉದ್ದ ಮತ್ತು ಅಡ್ಡವಾಗಿ ಇಂಗ್ಲಿಷ್ ಬಾಂಡ್ ಎಂದು ಸಾಮಾನ್ಯವಾಗಿ ಕರೆಯುವ ಪದ್ಧತಿಯಲ್ಲಿ ಕಟ್ಟಲಾಗಿದೆ (ಚಿತ್ರಗಳು ೪೦-೪೧).. ಕೋಟೆಯ ಹೆಚ್ಚಿನ ಭಾಗವನ್ನು ಈ ಪದ್ಧತಿಯಲ್ಲಿ ಕಟ್ಟಲಾಗಿದೆ. ಎರಡನೇ ಪದ್ಧತಿಯಲ್ಲಿ ಒಂದು




೩೯. ಮಲಿಯಾಬಾದ ಕೋಟೆ : ೧. ಗೋಶಾಲ, ೨. ಪಶ್ಚಿಮಬಾಗಿಲು, ೩. ದಕ್ಷಿಣ ಬಾಗಿಲು, ೪. ಕೊಳ, ೫. ಬಾವಿ, ೬. ಉತ್ತರದ ಬಾಗಿಲು, ೭. ಆನೆಗಳು, ೮. ಪೂರ್ವದ ಬಾಗಿಲು, ೯. ಬಾಗಿಲು, ೧೦. ಬಾಗಿಲು, ೧೧. ರಾಮಲಿಂಗೇಶ್ವರ ದೇವಾಲಯ,೧೨. ಗುಹೆಯಲ್ಲಿನ ಲಿಂಗ

ಸಾಲಿನ ಎಲ್ಲಾ ಕಲ್ಲುಗಳನ್ನು ಉದ್ದುದ್ದ ಹಾಕಿ ಅದರ ಮೇಲಿನ ಸಾಲಿನ ಕಲ್ಲುಗಳನ್ನು ಅಡ್ಡಡ್ಡ ಹಾಕಿ, ಮೂರನೇ ಸಾಲಿನಲ್ಲಿ ಪುನಃ ಉದ್ದುದ್ದ, ನಾಲ್ಕನೇ ಸಾಲಿನಲ್ಲಿ ಪುನಃ ಅಡ್ಡಡ್ಡ, ಹೀಗೆ ಒಂದು ಸಾಲು ಉದ್ದುದ್ದ ಮತ್ತೊಂದನ್ನು ಅಡ್ಡಡ್ಡ ಹಾಕಿ ಕಟ್ಟಲಾಗಿದೆ. ಕೋಟೆ ಗೋಡೆಯ ಬದಿಯನ್ನು ಕಲ್ಲಿನಿಂದ ಮತ್ತು ಒಳ ಬದಿಯನ್ನು ಮಣ್ಣಿನ ಇಳಿಪೋರೆ (ramp) ಯಿಂದಕಟ್ಟಿದೆ. ಕೋಟೆಯಲ್ಲಿ ಅನೇಕ ಚೌಕಾಕಾರದ ಕೊತ್ತಳಗಳು ಮತ್ತು ನಾಲ್ಕು ದಿಕ್ಕಿನಲ್ಲಿ ನಾಲ್ಕು ಬಾಗಿಲುಗಳು ಇವೆ.

ಕೋಟೆ ಗೋಡೆಯ ಕಲ್ಲುಗಳ ಮೇಲೆ ಕೆಲವು ರೇಖಾಚಿತ್ರಗಳು ಮತ್ತು ಶಿಲ್ಪಗಳು ಇವೆ. ಪೂರ್ವ ದಿಕ್ಕಿನ ಗೋಡೆಯ ದಕ್ಷಿಣ ತುದಿಯ ಮೊದಲನೇ ಕೊತ್ತಳದ ಮೇಲೆ ಆಂಜನೇಯನ ಮತ್ತು ಗಣೇಶನ ಶಿಲ್ಪಗಳಿವೆ. ಎರಡನೇ ಕೊತ್ತಳದ ಪಕ್ಕದ ಉತ್ತರ ಗೋಡೆಯ ಮೇಲೆ ಆಂಜನೇಯನ ರೇಖಾಚಿತ್ರವಿದೆ. ಉತ್ತರ ದಿಕ್ಕಿನ ಬಾಗಿಲಪಶ್ಚಿಮಕ್ಕೆ, ಬಾಗಿಲಿನಿಂದ ಮೂರು ಮತ್ತು ನಾಲ್ಕನೆಯ ಕೊತ್ತಳಗಳ ಮಧ್ಯದಲ್ಲಿ ಹೂ ಮತ್ತು ಮನುಷ್ಯನ ರೇಖಾಚಿತ್ರಗಳು ಮತ್ತು ಗಣೇಶನ ಶಿಲ್ಪ ಇವೆ. ಹದಿನಾರು ದಳಗಳ ವರ್ತುಲಾಕಾರದ ಹೂವಿನ ದೊಡ್ಡ ಚಿತ್ರದ ಪಕ್ಕದಲ್ಲಿ ಮನುಷ್ಯನ ಬಹಳ ಚಿಕ್ಕ ಚಿತ್ರವಿದೆ. ಬಾಗಿದ ಮನುಷ್ಯನು ಕೈಯಲ್ಲಿಯ ಕೋಲನ್ನು ಊರುತ್ತ ಮುಂದೆ ಹೋಗುವ ಭಂಗಿಯಲ್ಲಿದ್ದಾನೆ. ಗಣೇಶನ ಅಪೂರ್ಣ ಶಿಲ್ಪದ ಪಕ್ಕದಲ್ಲಿ ಒಂದು ಬದಿಗೆ ಒಂದು ಮತ್ತೊಂದು ಬದಿಗೆ ಎರಡು ಆನೆಗಳಿವೆ.

ವಾಯುವ್ಯ ಭಾಗದ ಗೋಡೆಯ ಮೇಲೆ ಆಂಜನೇಯ, ಮೆರವಣಿಗೆ ಮತ್ತು ದೊಡ್ಡ ಕಲ್ಲನ್ನು ಸಾಗಿಸುವ ರೇಖಾಚಿತ್ರಗಳಿವೆ. ಆಂಜನೇಯನು ಬಲಗೈಯಲ್ಲಿಯ ಗದೆಯನ್ನು ಹೆಗಲ ಮೇಲಿಟ್ಟು ಎಡಗೈಯಲ್ಲಿ ಚಿಕ್ಕ ಕೋಲನ್ನು ಹಿಡಿದಿದ್ದಾನೆ. ಮುಖವನ್ನು ಎಡಕ್ಕೆ (ತನ್ನ ಬಲಕ್ಕೆ) ತಿರುಗಿಸಿದ್ದಾನೆ (ಚಿತ್ರ ೪೪). ತಲೆಯ ಮೇಲೆ ದೊಡ್ಡ ತುರುಬು ಇದೆ. ಮೆರವಣಿಗೆಯ ದೃಶ್ಯದಲ್ಲಿ ಒಂದೇ ರಥವಿದೆ. ರಥವನ್ನು ಎಳೆಯುತ್ತಿರುವ ಎರಡು ಎತ್ತುಗಳು ನಾಗಾಲೋಟದಲ್ಲಿ ಓಡುತ್ತಿವೆ. ರಥದಲ್ಲಿ ಸಾರಥಿ ಮಾತ್ರ ಇದ್ದಾನೆ. ರಥದ ಮೇಲ್ಭಾಗದಲ್ಲಿ ಬಾವುಟ ಮತ್ತು ಪತಾಕೆಗಳು ಹಾರಾಡುತ್ತಿವೆ. ಕಲ್ಲನ್ನು ಸಾಗಿಸುವ ದೃಶ್ಯದಲ್ಲಿ ದೊಡ್ಡ ಕಲ್ಲನ್ನು ನಾಲ್ಕು ಚಕ್ರಗಳ ಬಂಡಿಯಲ್ಲಿ ಇಟ್ಟಿದೆ. ಬಂಡಿಯನ್ನು ನಾಲ್ಕು ಜೊತೆ ಎತ್ತುಗಳು ಎಳೆಯುತ್ತಿವೆ. ಬಂಡಿಯ ಮುಂದಿನ ಎರಡನೇ ಜೊತೆಯ ಕೋಣಗಳನ್ನು ಎರಡು ಚಕ್ರಗಳ ಈಸುಗಳ ನೊಗಕ್ಕೆ ಕಟ್ಟಿದೆ. ಬಂಡಿಗೆ ಇರುವ ನಾಲ್ಕು ಚಕ್ರಗಳಲ್ಲದೆ ಇವೆರಡು ಹೆಚ್ಚುವರಿ ಚಕ್ರಗಳು. ಬಂಡಿಯಲ್ಲಿಯ ಕಲ್ಲಿನ ಮುಂಭಾಗದ ಮೇಲೆ ಕುಳಿತ ಮನುಷ್ಯ ಎಡಗೈಯಲ್ಲಿ ಕೋಣಗಳ ಹಗ್ಗ ಮತ್ತು ಬಲಗೈಯಲ್ಲಿ ಬಾರಕೋಲನ್ನು ಹಿಡಿದಿದ್ದಾನೆ. ಒಂದೊಂದು ಜೊತೆ



೪೨. ಮಲಿಯಾಬಾದ, ಒಳಕೋಟೆ



೪೩. ಮಲಿಯಾಬಾದ, ಕೋಟೆ ಮತ್ತು ಕೊತ್ತಳ



೪೪. ಮಲಿಯಾಬಾದ, ರೇಖಾ ಚಿತ್ರಗಳು: ಆಂಜನೇಯ ಮತ್ತು ರಥ



೪೫. ಮಲಿಯಾಬಾದ, ರೇಖಾಚಿತ್ರ: ಕಲ್ಲನ್ನು ಸಾಗಿಸುತ್ತಿರುವುದು

ಕೋಣಗಳನ್ನುಒಬ್ಬೊಬ್ಬನು ನಿಯಂತ್ರಿಸುತ್ತಿದ್ದಾನೆ (ಚಿತ್ರ ೪೫). ಮೆರವಣಿಗೆ ಮತ್ತು ಕಲ್ಲು ಸಾಗಿಸುವ ಚಿತ್ರಗಳಲ್ಲಿ ರಾಯಚೂರು ಕೋಟೆಯ ಮೇಲಿನ ಇಂತಹವೇ ಚಿತ್ರಗಳನ್ನು ಅನುಕರಿಸಲು ಪ್ರಯತ್ನಿಸಲಾಗಿದೆ. ಆ ಗುಣಮಟ್ಟವನ್ನು ಇಲ್ಲಿ ಸಾಧಿಸಲಾಗಿಲ್ಲ.

**ಪೂರ್ವ ಬಾಗಿಲು:** ಎರಡು ದೊಡ್ಡ ಕೊತ್ತಳಗಳ ಮಧ್ಯದಲ್ಲಿರುವ ಈ ಬಾಗಿಲ ಸಂಕೀರ್ಣದಲ್ಲಿ ಮೂರು ಬಾಗಿಲುಗಳಿವೆ (ಚಿತ್ರ ೪೬). ಎರಡು ಕೊತ್ತಳಗಳ ಮುಂದೆ ಎರಡು ಗೋಡೆಗಳನ್ನು ಪೂರ್ವಕ್ಕೆ ಚಾಚುವಂತೆ ಕಟ್ಟಿ,ಅವುಗಳನ್ನು ಮತ್ತೊಂದು ಉತ್ತರ-ದಕ್ಷಿಣ ಗೋಡೆಯಿಂದ ಬಂಧಿಸಿದೆ. ಉತ್ತರ-ದಕ್ಷಿಣ ಗೋಡೆಯ ಪಶ್ಚಿಮಕ್ಕೆ ಅದಕ್ಕೆ ಸಮಾನಾಂತರದಲ್ಲಿ ಮತ್ತೊಂದು ಗೋಡೆಯನ್ನು ಕಟ್ಟಿ ಎರಡು ಆವರಣಗಳನ್ನು ನಿರ್ಮಿಸಿದೆ. ಈ ಸಂಕೀರ್ಣದ ಹೊರಬಾಗಿಲು ದಕ್ಷಿಣಾಭಿಮುಖವಾಗಿದೆ. ಇದರ ಮೂಲಕ ಪ್ರವೇಶಿಸಿ ಮೊದಲನೇ ಆವರಣದಲ್ಲಿ ಮುಂದೆ ಹೋಗಿ ಎಡಕ್ಕೆತಿರುಗಿದಾಗ ಪೂರ್ವಾಭಿಮುಖವಾಗಿರುವ ಎರಡನೇ ಬಾಗಿಲಿದೆ. ಇದನ್ನು ಪ್ರವೇಶಿಸಿ ಎಡಕ್ಕೆ ತಿರುಗಿ ಮುಂದೆ ಹೋಗಿ ಬಲಕ್ಕೆ ತಿರುಗಿದಾಗ ಮೂರನೇ ಅಥವಾ ಒಳಬಾಗಿಲು ಎದುರಾಗುತ್ತದೆ. ಇದು ಸಹ ಪೂರ್ವಾಭಿಮುಖವಾಗಿದೆ. ಕೋಟೆಯಲ್ಲಿಯ ಎರಡು ಕೊತ್ತಳಗಳು ಮಾತ್ರ ಸುಸ್ಥಿತಿಯಲ್ಲಿವೆ. ಅವುಗಳ ಪೂರ್ವಕ್ಕಿರುವ ಭಾಗದ ಗೋಡೆಗಳ ಕೆಳಭಾಗ ಮಾತ್ರ ಉಳಿದಿದೆ. ಕೊತ್ತಳಗಳಿಂದ ಮುಂದೆ ಚಾಚಿದ ಭಾಗವನ್ನು ಚಿಕ್ಕ ಕಲ್ಲುಗಳಿಂದ ಕಟ್ಟಿರುವುದರಿಂದ ಅದು ಬಿದ್ದುಹೋಗಿದೆ. ಹೊರ ಮತ್ತು ಮಧ್ಯದ ಬಾಗಿಲುಗಳಿಗೆ ಚೌಕಟ್ಟುಗಳಿಲ್ಲ. ಒಳ ಬಾಗಿಲಿಗೆ ಇದ್ದ ಚೌಕಟ್ಟು ಈಗ ಉಳಿದಿಲ್ಲ. ಒಳಬಾಗಿಲ ಹತ್ತಿರ ಉತ್ತರ ದಿಕ್ಕಿನ ಕೊತ್ತಳದ ಮೇಲೆ ಒಂದು, ಮತ್ತು ದಕ್ಷಿಣ ದಿಕ್ಕಿನ ಕೊತ್ತಳದ ಮೇಲೆ ಮತ್ತೊಂದು ಗಣೇಶನ ಶಿಲ್ಪಗಳಿವೆ. (ಚಿತ್ರ ೪೭).

**ಉತ್ತರ ಬಾಗಿಲು :** ಉತ್ತರ ದಿಕ್ಕಿನ ಬಾಗಿಲು ಸಹ ಎರಡು ಕೊತ್ತಳಗಳ ಮಧ್ಯದಲ್ಲಿದೆ. ಇಲ್ಲಿ ಸಹ ಚಿಕ್ಕ ಕಲ್ಲುಗಳಿಂದ ಕಟ್ಟಿದ ಗೋಡೆಗಳನ್ನು ಮುಂದೆ ಚಾಚಿ ಎರಡು ಆವರಣಗಳನ್ನು ಮತ್ತು ಮೂರು ಬಾಗಿಲುಗಳನ್ನು ನಿರ್ಮಿಸಿದೆ. ಹೊರ ಬಾಗಿಲು ಪೂರ್ವಾಭಿಮುಖವಾಗಿದ್ದು, ಮಧ್ಯದ ಮತ್ತು ಒಳಬಾಗಿಲು ಉತ್ತರಾಭಿ ಮುಖವಾಗಿದೆ. ಒಳಬಾಗಿಲು ಶಿಥಿಲಾವಸ್ಥೆಯಲ್ಲಿದೆ. ಬಾಗಿಲ ತೋಳು ಮತ್ತು ಭಾವಣಿಯ ಮಧ್ಯದ ಕಲ್ಲು ಕೆಳಗೆ ಬಿದ್ದಿವೆ. ಭಾವಣಿಯ ಕಲ್ಲಿನ ಮೇಲೆ ಹೂವಿನ ದೊಡ್ಡ ಉಬ್ಬು ಶಿಲ್ಪವಿದೆ. ಬಾಗಿಲ ಚೌಕಟ್ಟಿನ ಪಕ್ಕದಲ್ಲಿ ಪೂರ್ವಕ್ಕೆ ಉಪಬಾಗಿಲ ಚೌಕಟ್ಟಿನ ಅವಶೇಷಗಳಿವೆ. ಬಾಗಿಲ ತೋಳುಗಳ ಭಾಗಗಳು ಮೂಲ ಸ್ಥಾನದಲ್ಲಿ ನಿಂತಿವೆ.



೪೬. ಮಲಿಯಾಬಾದ, ಒಳಕೋಟೆ, ಪೂರ್ವಬಾಗಿಲು



೪೭. ಮಲಿಯಾಬಾದ, ಪೂರ್ವ ಬಾಗಿಲ ಮೇಲಿನ ಗಣೇಶ

**ಪಶ್ಚಿಮ ಬಾಗಿಲು :** ಪಶ್ಚಿಮ ದಿಕ್ಕಿನ ಬಾಗಿಲು ಸಹ ಎರಡು ಕೊತ್ತಳಗಳ ಮಧ್ಯದಲ್ಲಿದೆ. ಆದರೆ ಈ ಬಾಗಿಲ ಮುಂದೆ ಚಾಚಿದ ಗೋಡೆಗಳನ್ನು ದೊಡ್ಡ ಕಲ್ಲಿನಲ್ಲಿ ಕಟ್ಟಿ ಒಂದೇ ಆವರಣವನ್ನು ನಿರ್ಮಿಸಿದೆ. ಆವರಣದ ನಿರ್ಮಾಣ ಅಪೂರ್ಣವಾಗಿದೆ. ಆವರಣದ ದಕ್ಷಿಣಕ್ಕೆ ದೊಡ್ಡ ಹೊರಬಾಗಿಲು ಮತ್ತು ಉತ್ತರಕ್ಕೆ ಚಿಕ್ಕ ಹೊರಬಾಗಿಲು ಇವೆ. ಹೊರಬಾಗಿಲುಗಳಲ್ಲಿ ಬಾಗಿಲ ಚೌಕಟ್ಟುಗಳಿಲ್ಲ. ಉತ್ತರ ದಿಕ್ಕಿನ ಹೊರಬಾಗಿಲ ಹತ್ತಿರ ಗೋಡೆಯ ಮೇಲೆ ಚೂರಿಯನ್ನು ಹಿಡಿದು ದಾಪುಗಾಲು ಹಾಕುತ್ತ ಹೋಗುತ್ತಿರುವ ಮನುಷ್ಯನ ರೇಖಾಚಿತ್ರವಿದೆ. ಆವರಣದ ಪಶ್ಚಿಮ ಗೋಡೆಯ ಮೇಲೆ ಆನೆಯ ರೇಖಾಚಿತ್ರವಿದೆ. ಒಳಬಾಗಿಲು ಪಶ್ಚಿಮಾಭಿಮುಖವಾಗಿದೆ. ಈ ಬಾಗಿಲಿನ ಚೌಕಟ್ಟು ಉಳಿದಿಲ್ಲ. ಬಾಗಿಲ ಒಳಭಾಗದಲ್ಲಿ ಪ್ರವೇಶದ ಪಾರ್ಶ್ವಗಳಲ್ಲಿದ್ದ ಕಟ್ಟಡದ ಅವಶೇಷಗಳು ಇನ್ನೂ ಉಳಿದಿವೆ. ಪ್ರವೇಶದ ಒಂದು ಬದಿಗೆ ಎತ್ತರವಾದ ಒಂದು ಅರೆಗಂಬ ಮತ್ತು ಅದರ ಪಕ್ಕದಲ್ಲಿ ಮತ್ತೊಂದು ಅರೆಗಂಬದ ಕೆಳಭಾಗ, ಮತ್ತು ಇನ್ನೊಂದು ಬದಿಯಲ್ಲಿ ಬಾಗಿಲ ತೋಳಿನ ಕೆಳಭಾಗ ಇವೆ. ಎತ್ತರವಾದ ಅರೆಗಂಬದ ಕೆಳಭಾಗ ಚೌಕಾಕಾರ, ಮಧ್ಯಭಾಗ ಅಷ್ಟಭುಜಾಕೃತಿ, ಮೇಲ್ಭಾಗ ಚೌಕಾಕಾರ ಮತ್ತು ತುದಿ ಮಡಕೆಯಾಕಾರದಲ್ಲಿವೆ. ಮೇಲಿನ ಚೌಕಾಕಾರದ ಭಾಗದಲ್ಲಿ ಪೂರ್ಣಕುಂಭವಿದೆ.

**ದಕ್ಷಿಣ ಬಾಗಿಲು :** ದಕ್ಷಿಣ ದಿಕ್ಕಿಗಿರುವ ಈ ಬಾಗಿಲು ಚಿಕ್ಕದು. ಬಾಗಿಲಿನ ಚೌಕಟ್ಟಿನ ತೋಳುಗಳ ಕೆಳಭಾಗಗಳು ಮೂಲ ಸ್ಥಾನದಲ್ಲಿ ಉಳಿದಿವೆ. ಬಾಗಿಲ ಪಕ್ಕದಲ್ಲಿ ಪೂರ್ವಕ್ಕಿರುವ ಕೊತ್ತಳದ ಮೇಲೆ ಗಣೇಶನ ಶಿಲ್ಪವಿದೆ (ಚಿತ್ರ ೪೮). ಈ ಬಾಗಿಲಿನಿಂದ ಕೋಟೆಯನ್ನು ಪ್ರವೇಶಿಸಿ ಮುಂದೆ ಹೋದಾಗ ದಾರಿಯ ದಕ್ಷಿಣಕ್ಕೆ ಬಂಡೆಯ ಮೇಲೆ ಗಣೇಶನ ದೊಡ್ಡ ಶಿಲ್ಪವಿದೆ.

ಕೋಟೆಯ ಒಳಗೆ ಎರಡು ಚಿಕ್ಕ ಕೊಳಗಳಿವೆ. ಪೂರ್ವ ಬಾಗಿಲಿನಿಂದ ಪ್ರವೇಶಿಸಿ ಸ್ವಲ್ಪ ಮುಂದೆ ಹೋದಾಗ ದಕ್ಷಿಣಾಭಿಮುಖವಾಗಿ ನಿಂತಿರುವ ಆನೆಗಳ ಎರಡು ದುಂಡು ಶಿಲ್ಪಗಳಿವೆ. ಆರು ಅಡಿ ಎತ್ತರ ಮತ್ತು ನಾಲ್ಕು ಅಡಿ ಅಗಲವಾದ ಆನೆಗಳನ್ನು ಸುಂದರವಾಗಿ ಕೆತ್ತಿದೆ. ಆನೆಗಳ ಚಲನೆಯನ್ನು ಮುಂದಿನ ಒಂದು ಕಾಲನ್ನು ಮೇಲೆತ್ತುವ ಭಂಗಿಯಿಂದ ತೋರಿಸಿದೆ. ಸೊಂಡಿಲಿನಲ್ಲಿ ಹೂವನ್ನು ಹಿಡಿದ ಆನೆಗಳ ತಲೆಯ ಮೇಲೆ ಎರಡು ಹಾರಗಳನ್ನು ಚಿತ್ರಿಸಿದೆ. ಕೊರಳಲ್ಲಿ ಹಗ್ಗ, ಸರಪಳಿ, ಹೂವಿನ ಹಾರಗಳಿವೆ. ನಡುವಿಗೆ ಹೂವಿನ ವಿನ್ಯಾಸಗಳ ಅಲಂಕಾರಿಕ ಪಟ್ಟಿಯನ್ನು ಕಟ್ಟಿದೆ (ಚಿತ್ರ ೪೯). ಈ ಪಟ್ಟಿಯ ಹಿಂದೆ ಮತ್ತು ಮುಂದೆ ನೇತಾಡುವ ಸರಪಳಿಗಳಿಗೆ ಗಂಟೆಗಳನ್ನು ಕಟ್ಟಿದೆ. ಕಾಲುಗಳಿಗೆ ಗೆಜ್ಜೆಗಳನ್ನು ಕಟ್ಟಿದೆ. ಆನೆಗಳ ಹತ್ತಿರ ಈಗ ಯಾವುದೇ ಕಟ್ಟಡವಿಲ್ಲ. ಸಾಮಾನ್ಯವಾಗಿ ಇಂತಹ ಆನೆಗಳನ್ನು ಕಾಕತೀಯ, ಹೊಯ್ಸಳ ಮತ್ತು ವಿಜಯನಗರ ದೇವಾಲಯಗಳ



೪೮. ಮಲಿಯಾಬಾದ, ದಕ್ಷಿಣ ಬಾಗಿಲ ಹತ್ತಿರದ ಬಂಡೆಯ ಮೇಲಿನ ಗಣೇಶ



೪೯. ಮಲಿಯಾಬಾದ, ಒಳಕೋಟೆಯ ಒಳಗಿನ ಆನೆಗಳು



೫೦. ಮಲಿಯಾಬಾದ, ಹೊರಕೋಟೆಯ ಆಗ್ನೇಯ ಬಾಗಿಲು



೫೧. ಮಲಿಯಾಬಾದ. ಹೊರಕೋಟೆಯ ಹೊರಗೆ ಆಗ್ನೇಯಕ್ಕಿರುವ ಗೋಡೆಯಲ್ಲಿಯ ಬಾಗಿಲು

ಮುಂದೆ ಮೆಟ್ಟಿಲುಗಳ ಪಾರ್ಶ್ವಗಳಲ್ಲಿ ನೋಡುತ್ತೇವೆ. ಇಲ್ಲಿರುವ ಆನೆಗಳು ಹಿಂದೆ ಇದ್ದ ಕಾಕತೀಯ ದೇವಾಲಯದ ಮುಂದೆ ಇದ್ದಂತೆ ತೋರುತ್ತದೆ. ದೇವಾಲಯ ಈಗ ಉಳಿದಿಲ್ಲ.

### ಹೊರಕೋಟೆ

ಹೊರಕೋಟೆಯು ಒಳಕೋಟೆಯ ಪೂರ್ವ, ಉತ್ತರ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಸುತ್ತುವರಿದಿದೆ. ದಕ್ಷಿಣ ದಿಕ್ಕಿನಲ್ಲಿ ಬೆಟ್ಟವಿರುವುದರಿಂದ ಆಗ್ನೇಯ ಭಾಗದಲ್ಲಿ ಮಾತ್ರ ಕೋಟೆಯನ್ನು ಕಟ್ಟಿದೆ. ಚಿಕ್ಕ ಕಲ್ಲುಗಳಿಂದ ಕಟ್ಟಿದ ಈ ಕೋಟೆಯಲ್ಲಿಯೂ ಚೌಕಾಕಾರದ ಕೊತ್ತಳಗಳಿವೆ. ಈ ಕೋಟೆಯ ಕಲ್ಲುಗಳು ಒಳಕೋಟೆಯ ಕಲ್ಲುಗಳಿಗಿಂತ ಬಹಳ ಚಿಕ್ಕವು. ಹೊರಭಾಗ ಚೌಕಾಕಾರವಾಗಿದ್ದು ವಿಜಯನಗರ ಕಾಲದ ಕೋಟೆಯ ಕಲ್ಲುಗಳಿಗೆ ಹೋಲುತ್ತದೆ. ಆದುದರಿಂದ ಇದನ್ನು ವಿಜಯನಗರ ಕಾಲದಲ್ಲಿ ಹದಿನೈದು-ಹದಿನಾರನೇ ಶತಮಾನದಲ್ಲಿ ಕಟ್ಟಿದೆ. ಈ ಕೋಟೆಯಲ್ಲಿ ಆಗ್ನೇಯ ದಿಕ್ಕಿಗೆ ಒಂದು ಚಿಕ್ಕ ಬಾಗಿಲಿದೆ. ಬಾಗಿಲನ್ನು ನಾಲ್ಕು ಕಂಬ, ತೊಲೆಗಳು ಮತ್ತು ಚಪ್ಪಡಿಗಳಿಂದ ಕಟ್ಟಿದೆ (ಚಿತ್ರ ೫೦).

### ಹೊರಕೋಟೆಯ ಹೊರಗಿನ ಅವಶೇಷಗಳು

ಹೊರಕೋಟೆಯ ಆಗ್ನೇಯಕ್ಕೆ ಸ್ವಲ್ಪ ಅಂತರದಲ್ಲಿ ಬೆಟ್ಟದ ಮೇಲೆ ಮತ್ತೊಂದು ಕೋಟೆ ಗೋಡೆಯಿದೆ. ಈ ಗೋಡೆಯಲ್ಲಿ ಚಿಕ್ಕ ಬಾಗಿಲಿದೆ (ಚಿತ್ರ ೫೧). ಬಾಗಿಲಿನಲ್ಲಿ ಆಯತಾಕಾರದ ಚಿಕ್ಕ ಚೌಕಟ್ಟು ಇದೆ. ಈ ಬಾಗಿಲಿನಿಂದ ಪೂರ್ವಕ್ಕೆ ಹೋದಾಗ ರಾಮಲಿಂಗೇಶ್ವರ ದೇವಾಲಯ, ಗವಿ ಮತ್ತು ಕೊಳ ಇವೆ. ದಕ್ಷಿಣಾಭಿಮುಖವಾಗಿರುವ ರಾಮಲಿಂಗೇಶ್ವರ ದೇವಾಲಯವು ರಾಷ್ಟ್ರಕೂಟರ ಕಾಲದ್ದು. ನಂತರ ಕಾಲದಲ್ಲಿ ಇದು ಜೀರ್ಣೋದ್ಧಾರ ವಾಗಿರುವುದರಿಂದ ಮೂಲ ಸ್ವರೂಪವನ್ನು ಕಳೆದು ಕೊಂಡಿದೆ. ದೇವಾಲಯದ ಮುಂದೆ ನೀರಿನ ಕೊಳವಿದೆ. ದೇವಾಲಯದ ಪಕ್ಕದಲ್ಲಿ ಪೂರ್ವಕ್ಕೆ ದೊಡ್ಡ ಗವಿಯಿದೆ. ಗವಿಯಲ್ಲಿ ಲಿಂಗವಿದೆ. ಗವಿಯ ಬಂಡೆಗಳ ಮೇಲೆ ಎರಡು ಶಾಸನಗಳಿವೆ. ಇವುಗಳಲ್ಲಿ ಒಂದು ಶಾಸನ ಅಸ್ಪಷ್ಟವಾಗಿದೆ, ಮತ್ತೊಂದು ಶಾಸನ ಒಂಬತ್ತನೇ ಶತಮಾನದ್ದು. ಇಲ್ಲಿಗೆ ಬಂದು ತಪಸ್ಸು ಮಾಡಿ, ಕೊಂಡದಲ್ಲಿ ಮಿಂದು, ದೇವರನ್ನು ಕಂಡು, ಗುಹೆಯನ್ನು ನೋಡಿದರೆ ಪಾಪವು ನಾಶವಾಗುವುದೆಂದು ಈ ಶಾಸನದಿಂದ ತಿಳಿಯುತ್ತದೆ.

ದೇವಾಲಯದ ಮುಂಭಾಗದಲ್ಲಿ ವೀರಗಲ್ಲುಗಳು ಮತ್ತು ನಾಗ ಶಿಲ್ಪಗಳಿವೆ. ಒಂದು ವೀರಗಲ್ಲಿನ ಮೇಲೆ ಬರ್ಚಿಯನ್ನು ಹಿಡಿದು ನಿಂತಿರುವ ವೀರನ ಶಿಲ್ಪವಿದೆ. ಎರಡು ವೀರಗಲ್ಲುಗಳ ಮೇಲೆ ನೆಲದ ಮೇಲೆ

ನಿಂತ ವೀರ ಕುದುರೆ ಸವಾರನೊಂದಿಗೆ ಯುದ್ಧ ಮಾಡುತ್ತಿರುವ ಶಿಲ್ಪಗಳಿವೆ. ನಾಲ್ಕನೇ ವೀರಗಲ್ಲಿನ ಮೇಲೆ ಸಿಂಹದೊಂದಿಗೆ ಹೋರಾಡುತ್ತಿರುವ ವೀರನ ಶಿಲ್ಪವಿದೆ. ನಾಗ ಶಿಲ್ಪಗಳಲ್ಲಿ ಕೆಲವನ್ನು ಸಂಪೂರ್ಣವಾಗಿ ಹಾವಿನ ರೂಪದಲ್ಲಿ ಕೆತ್ತಿದೆ. ಉಳಿದ ನಾಗ ಶಿಲ್ಪಗಳ ಕೆಳಭಾಗ ಹಾವಿನ ರೂಪದಲ್ಲಿ ಮತ್ತು ಮೇಲಿನ ಭಾಗ ಸ್ತ್ರೀ ರೂಪದಲ್ಲಿ ಕೆತ್ತಿದೆ. ಸ್ತ್ರೀ ರೂಪದ ನಾಗಿಣಿಯರು ಕೈಯಲ್ಲಿ ಖಡ್ಗ ಮತ್ತು ಗುರಾಣಿಯನ್ನು ಹಿಡಿದಿದ್ದಾರೆ. ಇಲ್ಲಿಯ ಚೌಕಾಕಾರದ ಒಂದು ಕಲ್ಲಿನ ಮೇಲೆ ಚಕ್ರದ ಶಿಲ್ಪವಿದೆ.

ಕೋಟೆಯ ದಕ್ಷಿಣಕ್ಕೆ ಬೆಟ್ಟದ ಮೇಲೆ ಒಂದು ಕೊಳವಿದೆ. ಕೊಳದ ಪಕ್ಕದಲ್ಲಿ ಶಿಥಿಲಾವಸ್ಥೆಯಲ್ಲಿರುವ ಒಂದು ಕಟ್ಟಡವಿದೆ.

## ಟಿಪ್ಪಣಿಗಳು

೧. ಇದೊಂದು ಅಪ್ರಕಟಿತ ಶಾಸನ. ಇಲ್ಲಿಯ ಶಾಸನಗಳ ಪಾಠ ಮತ್ತು ಸಾರಾಂಶವನ್ನು ಒದಗಿಸಿದ ಡಾ. ಚನ್ನಬಸಪ್ಪ ಎಸ್. ಪಾಟೀಲರಿಗೆ ನನ್ನ ಕೃತಜ್ಞತೆಗಳು.

೨. ಅಪ್ರಕಟಿತ ಶಾಸನ.

೩. ಅಪ್ರಕಟಿತ ಶಾಸನ.

೪. Patil Channabasappa S. and Vinoda C.Patil (Eds), 1998, *Inscriptions of Raichur District,* No. 420; *ARIE,*1957-58, No. B 383; *APGAS,* 3, No.78; Sarma V. Suguna, 1998, *History and Antiquities of Raichur Fort,* No. 1.

೫. *ಅದೇ,* No. 407.

೬. *ಅದೇ,* No. 440; *ARIE,* 1958-59, No. D 141; *EIAPS,* 1962, pp. 65-66,pl. xx (a).

೭. Sewell Robert, 1982, *A Forgotten Empire,* p. 329.

೮. ಸುಜಾತಾ ಮಲ್ಲನಗೌಡ, ೧೯೯೭ "ಮಲಯಬಾದ ಕೋಟೆ" *ಇತಿಹಾಸ ದರ್ಶನ,* ಪು೧೨೭ ೧೨೯.

# ೩. ದೇವದುರ್ಗ

ದೇವದುರ್ಗ ರಾಯಚೂರು ಜಿಲ್ಲೆಯ ಒಂದು ತಾಲೂಕು ಕೇಂದ್ರ. ರಾಯಚೂರಿನಿಂದ ೫೬ ಕಿ.ಮೀ. ದೂರವಿದ್ದು ಅಕ್ಷಾಂಶ ೧೬° ೨೬' ಉತ್ತರ ಮತ್ತು ರೇಖಾಂಶ ೭೬° ೫೭' ಪೂರ್ವದಲ್ಲಿದೆ. ಇಲ್ಲಿ ಕೋಟೆ, ಕೆರೆ, ಅರಮನೆ ಮುಂತಾದ ಅವಶೇಷಗಳಿವೆ.



## ಐತಿಹಾಸಿಕ ಹಿನ್ನೆಲೆ

ಸುತ್ತಲು ಬೆಟ್ಟಗಳಿದ್ದು ಅವುಗಳ ಮಧ್ಯದಲ್ಲಿ ಊರಿದೆ. ದೇವರು ನಿರ್ಮಿಸಿದ ಬೆಟ್ಟಗಳ ದುರ್ಗದ ಮಧ್ಯದಲ್ಲಿರುವುದರಿಂದ ಇದಕ್ಕೆ ದೇವದುರ್ಗವೆಂದು ಹೆಸರು ಬಂದಿದೆ ಎಂಬ ಪ್ರತೀತಿಯಿದೆ. ಆಯಕಟ್ಟಿನ ಈ ಸ್ಥಳದಲ್ಲಿ ಹದಿನಾರು, ಹದಿನೇಳನೇ ಶತಮಾನದಲ್ಲಿ ಬೇಡರ ಜಾತಿಯ ಪಾಳೆಯಗಾರರು ಆಳುತ್ತಿದ್ದರು. ಮೊದಲು ವಿಜಯನಗರ ಅರಸರಿಗೆ ಅಧೀನರಾಗಿದ್ದ ಇವರು ನಂತರ ಬಿಜಾಪುರದ ಆದಿಲ್‌ಶಾಹೀ ಅರಸರನ್ನು ಆಶ್ರಯಿಸಿದರು. ಅವರ ಕಾಲದ ಕೋಟೆಯ ಅವಶೇಷಗಳು ಈಗಲೂ ಇವೆ. ಹೈದರಾಬಾದಿನ ಒಂದನೇ ಆಸಫ್‌ಜಾ ದೇವದುರ್ಗದ ಕೋಟೆಯನ್ನಾಳುತ್ತಿದ್ದ ಬೇಡರ ದೊರೆಯ ಸಹಾಯವನ್ನು ಕೇಳಿದ್ದನೆಂದು ತಿಳಿದು ಬರುತ್ತದೆ. ಈ ಕೋಟೆ ಕೆಲ ಕಾಲ ಅರಬ್ ದಳವಾಯಿ ಕೊಹರನ್ ಆಡಳಿತದಲ್ಲಿತ್ತು. ಆತ ನಿಜಾಮನ ಸೈನ್ಯದೊಂದಿಗೆ ಹೋರಾಡದೆ ಫ್ರೇಜರ್ ಎಂಬವನಿಗೆ ಶರಣಾದ. ಅಲ್ಲಿಂದ ಮುಂದೆ ಸ್ವತಂತ್ರ ದೊರೆಯುವವರೆಗೆ ಇದು ಹೈದರಾಬಾದಿನ ನಿಜಾಮ ದೊರೆಗಳ ಅಧೀನದಲ್ಲಿದ್ದಿತು.[೧] ದೇವದುರ್ಗದ ಬೇಡರ ಜಾತಿಯ ಮೂಲ ಪುರುಷ ಭೂಮಿಪತಿ ರಂಗಪ್ಪ ನಾಯಕ ಮತ್ತು ಆತನ ನಂತರ ಸುಮಾರು ನಾಲ್ವತ್ತೈದಕ್ಕೂ ಹೆಚ್ಚು ದೊರೆಗಳು ಈ ಪ್ರದೇಶವನ್ನು ಆಳಿದರೆಂದು ತಿಳಿದುಬರುತ್ತದೆ.

## ಕೋಟೆ

ದೇವದುರ್ಗವು ಬೆಟ್ಟಗಳಿಂದ ಸುತ್ತುವರಿಯಲ್ಪಟ್ಟಿದೆ. ಮೂರು ಬೆಟ್ಟಗಳ ಮೇಲೆ ಅಲ್ಲಲ್ಲಿ ಕೋಟೆಯನ್ನು ಕಟ್ಟಿದೆ. ಹತ್ತಲು ಸುಲಭವಾದ ಇಳಿಜಾರಾದ ಸ್ಥಳಗಳಲ್ಲಿ ಕೋಟೆಯನ್ನು ಕಟ್ಟಿ, ಹತ್ತಲು ಸಾಧ್ಯವಾಗದ ಕಡಿದಾದ ಸ್ಥಳಗಳನ್ನು ಹಾಗೆಯೇ ಬಿಟ್ಟಿದೆ. ಊರ ಪೂರ್ವಕ್ಕಿರುವ ಈಲಣ್ಣನ ಗುಡ್ಡದ ಮೇಲೆ ಎರಡು ಸುತ್ತಿನ ಕೋಟೆಯಿದೆ. ದಪ್ಪ ಕಲ್ಲುಗಳಿಂದ ಗಾರೆಯನ್ನು ಬಳಸದೆ ಕಟ್ಟಿದ ಮೇಲಿನ ಸುತ್ತಿನ ಕೋಟೆಗೆ ಪೂರ್ವ ದಿಕ್ಕಿನಲ್ಲಿ ಬಾಗಿಲಿದೆ. ಬಾಗಿಲಿಗೆ ಪ್ರವೇಶ ಕಟ್ಟಡವಿಲ್ಲ. ಬಾಗಿಲಿನ ದಕ್ಷಿಣಕ್ಕೆ ಇರುವ ದೊಡ್ಡ ಬಂಡೆಯನ್ನು ಹತ್ತಲು ಕೊರೆದು




೫೨. ದೇವದುರ್ಗ ಕೋಟೆ : ೧. ಬಾಗಿಲು, ೨. ಕಮಾನಿನ ಕಟ್ಟಡ, ೩. ತೊಟ್ಟಿ, ೪. ಬಾಗಿಲು, ೫. ಕೊತ್ತಳ, ೬. ಕಟ್ಟಡ

ಮಾಡಿದ ಮೆಟ್ಟಿಲುಗಳಿವೆ. ಈ ಮೆಟ್ಟಿಲುಗಳ ಕೆಳಭಾಗದಲ್ಲಿ ಆಧಾರವಾಗಿದ್ದ ಗೋಡೆ ಬಿದ್ದು ಹೋಗಿರುವುದರಿಂದ ಈಗ ಬಂಡೆಯ ಮೇಲೆ ಹತ್ತಲಾಗುವುದಿಲ್ಲ. ಈ ಬಂಡೆಯ ಮೇಲೆ ಆಯತಾಕಾರದ ಕಲ್ಲಿನ ಕಟ್ಟಡವಿದೆ. ಬಂಡೆಯ ಮೇಲೆ ಅನೇಕ ಉಬ್ಬು ಶಿಲ್ಪಗಳಿವೆ. ದಕ್ಷಿಣಬದಿಗೆ ಹೆಡೆ ಬಿಚ್ಚಿದ ದೊಡ್ಡ ಸರ್ಪದ ಮೇಲೆ ವಿಷ್ಣು ಮಲಗಿದ್ದಾನೆ. ಅವನ ಪಕ್ಕದಲ್ಲಿ ಗದೆಯನ್ನು ಹಿಡಿದ ಇಬ್ಬರು ನಿಂತಿದ್ದಾರೆ. ಪೂರ್ವ ಬದಿಗೆ ಕೈಮುಗಿದು ನಿಂತ ಇಬ್ಬರು ಮನುಷ್ಯರ ಚಿಕ್ಕ ಶಿಲ್ಪಗಳಿವೆ. ಪಶ್ಚಿಮ ಬದಿಗೆ ಗರುಡ, ನಂದಿಯ ಮೇಲೆ ಕುಳಿತ ಶಿವ ಪಾರ್ವತಿ, ಹರಿಹರ, ಹಂಸದ ಮೇಲೆ ಕುಳಿತ ಬ್ರಹ್ಮ, ಬಲಗೈಯಲ್ಲಿ ಗದೆಯನ್ನು ಹಿಡಿದ ಗಡ್ಡಧಾರಿ ಮನುಷ್ಯನ ಶಿಲ್ಪಗಳಿವೆ. ಇಲ್ಲಿರುವ ಮರದ ಎಲೆಯ ಮೇಲೆ ಮಲಗಿರುವ ಕೃಷ್ಣ (ವಟಪತ್ರಶಾಯಿ) ಇದ್ದಾನೆ. ಬಂಡೆಯ ಉತ್ತರ ಬದಿಗೆ ಪಕ್ಷಿಯ ಮೇಲೆ ಕುಳಿತ ಜಟಾಧಾರಿ ಮನುಷ್ಯನಿದ್ದಾನೆ. ದಕ್ಷಿಣ ಬದಿಗೆ ಕೆಳಭಾಗದಲ್ಲಿ ಆನೆಗಳ ಯುದ್ಧ, ಚಿಕ್ಕ ಲಿಂಗಗಳ ಸಾಲುಗಳು, ಬೆಟ್ಟದ ಮೇಲೆ ನಿಂತಿರುವ ಆಂಜನೇಯ, ಕೈಮುಗಿದ ಮತ್ಸ್ಯ ಮತ್ತು ನಾಗಕನ್ಯೆಯರು ಲಿಂಗವನ್ನು ಪೂಜಿಸುತ್ತಿರುವ ಮೃಗಪುರುಷ ಶಿಲ್ಪಗಳಿವೆ. ಬಂಡೆಯ ಪಶ್ಚಿಮಕ್ಕೆ ಒಂದು ಕೊಳವಿದೆ. ತಗ್ಗಾದ ಸ್ಥಳದಲ್ಲಿ ಅರ್ಧ ವೃತ್ತಾಕಾರದ ಗೋಡೆಯನ್ನು ಕಟ್ಟಿ ನಿರ್ಮಿಸಿದ ಈ ಕೊಳವನ್ನು ಸಿಡ್ಲ ಬಾವಿಯೆಂದು ಕರೆಯುತ್ತಾರೆ. ಈ ಭಾಗದಲ್ಲಿ ಕೆಲವು ಕಟ್ಟಡಗಳ ಅವಶೇಷಗಳಿವೆ. ಈರಣ್ಣನ ಗುಡ್ಡದ ಉತ್ತರಕ್ಕಿರುವ ಅಮರಪ್ಪನ ಗುಡ್ಡದ ಮೇಲೆ ಒಂದು ದೇವಾಲಯ ಮತ್ತು ಗುಡ್ಡದ ತುದಿಯ ಮೇಲೆ ಒಂದು ಕಾವಲುಗೋಪುರ ಇವೆ. ಈ ಎಲ್ಲ ಕೋಟೆಗಳು ಹದಿನಾರು ಹದಿನೇಳನೇ ಶತಮಾನದವು.

ಊರಿನ ಆಗ್ನೇಯಕ್ಕೆ ದೊಡ್ಡ ಕೆರೆಯಿದೆ. ಕೆರೆಯ ಪಶ್ಚಿಮಕ್ಕಿರುವ ಏರಿಯನ್ನು ಎರಡು ಗುಡ್ಡಗಳ ಮಧ್ಯದಲ್ಲಿ ಕಟ್ಟಿದೆ. ಕೋಟೆ ಗೋಡೆಯಂತಿರುವ ದಪ್ಪವಾದ ಏರಿಯ ತುದಿಯಲ್ಲಿ ಮತ್ತು ಮಧ್ಯದಲ್ಲಿ ಎರಡು ವೃತ್ತಾಕಾರದ ಕೊತ್ತಳಗಳಂತಹ ರಚನೆಗಳಿವೆ. ಏರಿಯ ಪಕ್ಕದಲ್ಲಿ ನಾಯಕನ ಬಾವಿ ಮತ್ತು ಖಾಸ ಬಾವಿ ಹೆಸರಿನ ಎರಡು ಬಾವಿಗಳಿವೆ. ಒಂದು ಬಾವಿಯ ಪಕ್ಕದಲ್ಲಿ ವಿಶ್ರಾಂತಿಗಾಗಿ ಕಟ್ಟಿಸಿದ ಕಮಾನಿನ ಕಟ್ಟಡವಿದೆ.

### ಅರಮನೆ

ಊರೊಳಗೆ ಆಗ್ನೇಯ ಭಾಗದಲ್ಲಿ ಕೋಟೆಯಿಂದಾವೃತವಾದ ಅರಮನೆಯಿದೆ. ಇದನ್ನು ದರ್ಬಾರ್ ಎಂದು ಕರೆಯುತ್ತಾರೆ (ಚಿತ್ರ ೫೨). ಕೋಟೆಯನ್ನು ಚಿಕ್ಕ ಅನಿಯಮಿತಾಕಾರದ ಕಲ್ಲು ಮತ್ತು ಗಾರೆಯಿಂದ ಕಟ್ಟಿದೆ. ಉತ್ತರ ಗೋಡೆಯ ಮಧ್ಯದಲ್ಲಿ ಬಾಗಿಲಿದೆ. ಈಶಾನ್ಯ ಮೂಲೆಯನ್ನು ಹೊರತು ಉಳಿದ ಮೂಲೆಗಳಲ್ಲಿ



೫೩. ದೇವದುರ್ಗ, ಉತ್ತರ ದಿಕ್ಕಿನ ಗೋಡೆ



೫೪. ದೇವದುರ್ಗ, ಕೋಟೆಯ ಪೂರ್ವ ಭಾಗದ ಕಟ್ಟಡ



೫೫. ದೇವದುರ್ಗ, ದಕ್ಷಿಣ ಭಾಗದ ಕಟ್ಟಡಗಳು



೫೬. ದೇವದುರ್ಗ, ನೀರಿನ ತೊಟ್ಟಿ

ವೃತ್ತಾಕಾರದ ಬುರುಜುಗಳಿವೆ. ಇವಲ್ಲದೆ ಪೂರ್ವ, ಉತ್ತರ, ಪಶ್ಚಿಮ ಗೋಡೆಗಳಲ್ಲಿ ಒಂದೊಂದು ಮತ್ತು ದಕ್ಷಿಣ ಗೋಡೆಯಲ್ಲಿ ಎರಡು ಅರ್ಧ ವೃತ್ತಾಕಾರದ ಬುರುಜುಗಳಿವೆ. ಗೋಡೆಯ ಕೈಪಿಡಿಗೋಡೆಯಲ್ಲಿದ್ದ ತೆನೆಗಳ ಮಧ್ಯದ ಭಾಗವನ್ನು ಗೋಡೆ ಕಟ್ಟಿ ಮುಚ್ಚಿರುವುದರಿಂದ ಅದು ತೆನೆಗಳಿಲ್ಲದ ಕೈಪಿಡಿ ಗೋಡೆಯಂತೆ ಕಾಣುತ್ತದೆ. ಕೈಪಿಡಿ ಗೋಡೆಯಲ್ಲಿ ಬಂದೂಕು ಕಿಂಡಿಗಳಿವೆ. ಉತ್ತರ ದಿಕ್ಕಿನ ಗೋಡೆಯ ಮೇಲ್ಭಾಗದಲ್ಲಿ ಎರಡು ಮುಂಚಾಚು(balcony)ಗಳಿವೆ (ಚಿತ್ರ೫೩). ಪ್ರತಿಯೊಂದು ಮುಂಚಾಚು ನಾಲ್ಕು ಬೋದಿಗೆಗಳ ಮೇಲೆ ನಿಂತಿದೆ. ಮತ್ತು ಮುಂದೆ ಮೂರು ಕಮಾನುಗಳನ್ನು ಹೊಂದಿವೆ. ಉತ್ತರ ದಿಕ್ಕಿನ ಬಾಗಿಲಿಗೆ ಮರದ ಚೌಕಟ್ಟು ಮತ್ತು ಮರದ ಕದಗಳಿವೆ. ಚೌಕಟ್ಟಿನ ಮೇಲೆ ಕುರುಡು ಕಮಾನಿದೆ.

ಉತ್ತರ ದಿಕ್ಕಿನ ಬಾಗಿಲನ್ನು ದಾಟಿದ ಕೂಡಲೆ ಪಶ್ಚಿಮಕ್ಕೆ ಮೂರು ಅಂಕಣಗಳ ಕಟ್ಟೆ ಮತ್ತು ಪೂರ್ವಕ್ಕೆ ಒಂದು ಅಂಕಣದ ಕಟ್ಟೆ ಇವೆ. ಪಶ್ಚಿಮ ಕಟ್ಟೆಯ ಹಿಂಭಾಗದಲ್ಲಿ ಒಂದು ಕೊಠಡಿ ಮತ್ತು ಕಟ್ಟಡದ ಮಾಳಿಗೆ ಮೇಲೆ ಹೋಗಲು ಮೆಟ್ಟಿಲುಗಳಿವೆ. ಪೂರ್ವ ಕಟ್ಟೆಯ ಪೂರ್ವಕ್ಕೆ ಉತ್ತರ ಕೋಟೆಗೋಡೆಗೆ ಸೇರಿದಂತೆ ಒಂದಂಕಣದ ಉದ್ದವಾದ ಕೈಸಾಲೆಯಿದೆ. ಕೈಸಾಲೆಯ ಮುಂಭಾಗದಲ್ಲಿ ಕಮಾನುಗಳಿವೆ. ಬಾಗಿಲಿನಿಂದ ಒಳಗೆ ಬಂದಾಗ ಆಯತಾಕಾರದ ದೊಡ್ಡ ಆವರಣವಿದೆ. ಪೂರ್ವಕ್ಕೆ ದೊಡ್ಡ ಸಭಾಂಗಣವಿದೆ. ಇದರಲ್ಲಿ 7 x 5 ಕಮಾನಿನ ಅಂಕಣಗಳಿವೆ. ಕಟ್ಟಡದ ಮುಂಭಾಗದಲ್ಲಿ ಸಹ ಕಮಾನುಗಳಿವೆ (ಚಿತ್ರ ೫೪). ಆವರಣದ ದಕ್ಷಿಣಕ್ಕೆ ದರ್ಬಾರ್ ಹಾಲಿನಂತಹ ಪ್ರಮುಖವಾದ ಆದರೆ ಚಿಕ್ಕದಾದ ಕಟ್ಟಡವಿದೆ (ಚಿತ್ರ ೫೫). ಇದನ್ನು ಅಧಿಷ್ಠಾನದ ಮೇಲೆ ಕಟ್ಟಿದೆ. ಅಧಿಷ್ಠಾನದಲ್ಲಿ ಪದ್ಮ, ಕಂಠ ಮತ್ತು ಪದ್ಮ ಪಟ್ಟಿಕೆಗಳಿವೆ. ಕಟ್ಟಡದ ಮಧ್ಯದಲ್ಲಿ ಹಜಾರವಿದ್ದು ಅದರಲ್ಲಿ ಕಂಬಗಳ ಪೀಠಗಳು ಮಾತ್ರ ಉಳಿದಿವೆ. ಕಲ್ಲಿನಿಂದ ಮಾಡಿದ ಪೀಠಗಳು ಅಲಂಕಾರಮಯವಾಗಿವೆ. ಹಜಾರದ ಬದಿಗಳಲ್ಲಿ ಎರಡು ಕೊಠಡಿಗಳಿವೆ. ಈ ಕಟ್ಟಡದ ಮೇಲೆ ಮತ್ತೊಂದು ಮಹಡಿಯಿತ್ತು. ಈಗ ಅದು ಬಿದ್ದು ಹೋಗಿದೆ. ಕಟ್ಟಡದ ಮುಂಭಾಗದಲ್ಲಿ ಪಶ್ಚಿಮಕ್ಕೆ ನೀರಿನ ತೊಟ್ಟಿಯಿದೆ (ಚಿತ್ರ ೫೬). ಚಿಕ್ಕ ಕಲ್ಲು ಮತ್ತು ಗಾರೆಯಿಂದ ಕಟ್ಟಿದ ತೊಟ್ಟಿಯ ಮೇಲ್ಭಾಗದಲ್ಲಿ ನಯಗೊಳಿಸಿದ ದಟ್ಟವರ್ಣದ ಅಲಂಕಾರಿಕ ದಿಂಡು ಇದೆ. ತೊಟ್ಟಿಯ ಪಶ್ಚಿಮಕ್ಕೆ ಕಮಾನಿನ ಬಾಗಿಲಿದೆ. ಈ ಆವರಣದಿಂದ ಕೋಟೆಯ ದಕ್ಷಿಣ ಭಾಗಕ್ಕೆ ಈ ಬಾಗಿಲ ಮೂಲಕ ದಾರಿಯಿದೆ. ಬಾಗಿಲ ಪಕ್ಕದಲ್ಲಿ ವೃತ್ತಾಕಾರದ ಒಂದು ಕೊತ್ತಳವಿದೆ. ಕೋಟೆಯ ಒಳಗಿನ ದಕ್ಷಿಣದ ಅರ್ಧ ಭಾಗದಲ್ಲಿ ಕಟ್ಟಡಗಳ ಅವಶೇಷಗಳಿವೆ. ಕಟ್ಟಡಗಳು ಬಿದ್ದು ಹೋಗಿರುವುದರಿಂದ ವಿವರಗಳು ತಿಳಿಯುವುದಿಲ್ಲ. ಈ ಕೋಟೆ ಮತ್ತು ಒಳಗಿನ ಕಟ್ಟಡಗಳು ಹದಿನೇಳು-ಹದಿನೆಂಟನೇ ಶತಮಾನದವು.

## ಟಿಪ್ಪಣಿಗಳು

೧. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ೧೯೮೬, ಪು. ೫೨೧.

೨. ಕರ್ನಾಟಕ ವಿಷಯ ವಿಶ್ವಕೋಶ, ಮೈಸೂರು ವಿಶ್ವವಿದ್ಯಾಲಯ, ಪು. ೨೨೩.

# ೪. ಗಬ್ಬೂರು

ಗಬ್ಬೂರು ದೇವದುರ್ಗ ತಾಲೂಕಿನಲ್ಲಿ ದೇವದುರ್ಗದಿಂದ ಆಗ್ನೇಯಕ್ಕೆ ೨೭ ಕಿ.ಮೀ. ದೂರದಲ್ಲಿದೆ. ಇದು ಅಕ್ಷಾಂಶ ೧೬° ೨೮' ಉತ್ತರ ಮತ್ತು ರೇಖಾಂಶ ೭೬° ೫೮' ಪೂರ್ವದಲ್ಲಿದೆ. ಇತಿಹಾಸ ಪ್ರಸಿದ್ಧವಾದ ಈ ಗ್ರಾಮದಲ್ಲಿ ಕೋಟೆ, ದೇವಾಲಯಗಳು, ಶಾಸನಗಳು, ಕೆರೆ, ಬಾವಿಗಳು ಮುಂತಾದವುಗಳಿವೆ.

### ಐತಿಹಾಸಿಕ ಹಿನ್ನೆಲೆ

ಹನ್ನೊಂದು-ಹನ್ನೆರಡನೇ ಶತಮಾನಗಳಲ್ಲಿ ಗಬ್ಬೂರು ಒಂದು ಪ್ರಮುಖವಾದ ನಗರವಾಗಿತ್ತೆಂಬುದು ಇಲ್ಲಿಯ ಅನೇಕ ಶಾಸನಗಳಿಂದ[1] ಮತ್ತು ದೇವಾಲಯಗಳಿಂದ[2] ತಿಳಿಯುತ್ತದೆ. ಇದು ಶಾಸನಗಳಲ್ಲಿ ಗೊಬ್ಬೂರು, ಹಿರಿಯಗೊಬ್ಬೂರು, ಗೋಪುರ ಗ್ರಾಮ, ಪಿರಿಯ ಅಗ್ರಹಾರ ಗೊಬ್ಬೂರು ಎಂದು ಉಲ್ಲೇಖಗೊಂಡಿದೆ. ಚಾಲುಕ್ಯ ಅರಸ ಆಹವಮಲ್ಲ ಕೋಟಿಹೋಮ ಯಜ್ಞ ಮಾಡುವ ಸಂದರ್ಭದಲ್ಲಿ ಈ ಗ್ರಾಮವನ್ನು ಮಹಾಜನರಿಗೆ ದಕ್ಷಿಣೆಯಾಗಿ ಕೊಟ್ಟನು. ಇಲ್ಲಿ ಮಹಾಜನ, ನಖರ, ಐಯ್ಯಾವೊಳೆ ಐನೂರ್ವರು, ನಾನಾದೇಶಿ, ಮಾಲೆಗಾರ ಅರುವತ್ತೊಕ್ಕಲು, ಬಿಲ್ಲ ಮುನ್ನೂರ್ವರು, ಮೇಳ್ (ಮೇಳಿ)ಸಾಸಿರ್ವರು ಮುಂತಾದ ಸಂಘ-ಸಂಸ್ಥೆಗಳಿದ್ದವು. ಇದು ಒಂದು ವಿದ್ಯಾಕೇಂದ್ರವಾಗಿದ್ದುದಲ್ಲದೆ ನಾಣ್ಯಗಳನ್ನು ಅಚ್ಚು ಮಾಡುವ ಸ್ಥಳವೂ ಆಗಿದ್ದೀತು.

### ಕೋಟೆ

ಗಬ್ಬೂರಿನಲ್ಲಿ ಆಯತಾಕಾರದ ಶಿಥಿಲಾವಸ್ಥೆಯಲ್ಲಿರುವ ಕೋಟೆಯಿದೆ (ಚಿತ್ರ ೫೭).ಇದು ನೆಲಮಟ್ಟದಲ್ಲಿದೆ. ದಕ್ಷಿಣಭಾಗದ ಗೋಡೆಯು ನೇರವಾಗಿಲ್ಲ. ಪೂರ್ವದಿಂದಪಶ್ಚಿಮಕ್ಕೆ ಸ್ವಲ್ಪ ದೂರ ಹೋಗಿ ಲಂಬಕೋನದಲ್ಲಿ ಉತ್ತರಕ್ಕೆ ತಿರುಗಿ ಸ್ವಲ್ಪ ಮುಂದೆ ಹೋಗಿ ಪುನಃ ಲಂಬಕೋನದಲ್ಲಿ ಪಶ್ಚಿಮಕ್ಕೆ ತಿರುಗಿ ಮುಂದೆ ಹೋಗುತ್ತದೆ. ದಕ್ಷಿಣ ಗೋಡೆಯಲ್ಲಿ ಮಾತ್ರ ಆಯತಾಕಾರದ ಕೊತ್ತಳಗಳಿವೆ. ಉಳಿದ ಗೋಡೆಗಳಲ್ಲಿ ಕೊತ್ತಳಗಳಿಲ್ಲ. ದಕ್ಷಿಣ ಗೋಡೆಯ ನಿರ್ಮಾಣ ವಿಶಿಷ್ಟವಾಗಿದೆ. ಗಟ್ಟಿಯಾದ ಕಪ್ಪು ಗುಂಡು ಕಲ್ಲುಗಳನ್ನು ವಿವಿಧ ರೀತಿಯಲ್ಲಿ ಇಲ್ಲಿ ಬಳಸಲಾಗಿದೆ (ಚಿತ್ರ ೫೮). ಕೆಲವು ಗುಂಡುಕಲ್ಲುಗಳನ್ನು ಹಾಗೆಯೇ ಬಳಸಿದರೆ, ಕೆಲವು ಕಲ್ಲುಗಳ ಒಂದು, ಎರಡು, ಮೂರು ಅಥವಾ ನಾಲ್ಕು ಬದಿಗಳನ್ನು ಅವಶ್ಯಕತೆಗನುಗುಣವಾಗಿ ಸಪಾಟಾಗಿ ಕೆತ್ತಿ ಬಳಸಿದೆ. ಕಲ್ಲುಗಳು ಅನಿಯಮಿತಾಕಾರದಲ್ಲಿರುವುದರಿಂದ ಕಲ್ಲುಗಳ ಮಧ್ಯದಲ್ಲಿ ದೊಡ್ಡ ಸಂದಿ ಗಳುಂಟಾಗಿವೆ. ಸಂದಿಗಳಲ್ಲಿ ಅವಶ್ಯಕತೆಗೆ ತಕ್ಕಂತಹ ದೊಡ್ಡ ಮತ್ತು ಚಿಕ್ಕ ಕಲ್ಲು ಚಕ್ಕೆಗಳನ್ನು ಬಳಸಿದೆ. ಇಲ್ಲಿ




೫೭. ಗಬ್ಬೂರು ಕೋಟೆ : ೧. ಖಾನಪುರ ಅಗಸಿ, ೨. ದೇವದುರ್ಗ ಅಗಸಿ, ೩. ತಿಮ್ಮಾಪುರ ಅಗಸಿ, ೪. ಹನುಮಂತನ ದೇವಾಲಯ, ೫. ನೀಲಕಂಠೇಶ್ವರ ದೇವಾಲಯ, ೬. ಕೇಶವ ದೇವಾಲಯ, ೭. ಕಛೇರಿ ಅಗಸಿ, ೮. ಕಾಳಿಕಾದೇವಿ ದೇವಾಲಯ, ೯. ಮಸೀದಿ, ೧೦. ವೀರಭದ್ರೇಶ್ವರ ಅಗಸಿ, ೧೧. ವೀರಭದ್ರೇಶ್ವರ ದೇವಾಲಯ, ೧೨. ಮೇಲು ಶಂಕರ ದೇವಾಲಯ, ೧೩. ಬಾವಿ, ೧೪. ಮಸೀದಿ, ೧೫. ಹನುಮಂತನ ದೇವಾಲಯ, ೧೬. ರಾಯಚೂರು ಅಗಸಿ, ೧೭. ಸಿರಿವಾರ ಅಗಸಿ



೫೮. ಗಬ್ಬೂರು, ದಕ್ಷಿಣ ದಿಕ್ಕಿನ ಕೋಟೆ



೫೯. ಗಬ್ಬೂರು, ಪೂರ್ವ ದಿಕ್ಕಿನ ಕೋಟೆ

ಗಾರೆಯನ್ನು ಉಪಯೋಗಿಸಿಲ್ಲ. ಇಂತಹ ರಚನೆಯ ಕೋಟೆಯನ್ನು ಹೊಯ್ಸಳರ ರಾಜಧಾನಿಯಾಗಿದ್ದ ಹಳೇಬೀಡಿನಲ್ಲಿ ನೋಡಬಹುದು.[೬] ಆದುದರಿಂದ ಇದರ ಕಾಲವನ್ನು ಹನ್ನೆರಡು-ಹದಿಮೂರನೇ ಶತಮಾನಗಳೆಂದು ನಿರ್ಧರಿಸಬಹುದು. ಎರಡನೆಯ ಕೊತ್ತಳದ ಒಂದು ಕಲ್ಲಿನ ಮೇಲೆ ಉಬ್ಬು ಶಿಲ್ಪವಿದೆ. ಶಿಲ್ಪದಲ್ಲಿ ಒಬ್ಬ ಮನುಷ್ಯನು ಆನೆಯೊಂದಿಗೆ ಹೋರಾಡುತ್ತ, ಆನೆಯನ್ನು ಸದೆಬಡಿದು, ಅದರ ಎರಡು ಕಾಲುಗಳನ್ನು ಹಿಡಿದು ಮೇಲೆತ್ತಿದ್ದಾನೆ. ಉಳಿದ ಮೂರು ದಿಕ್ಕಿನ ಕೋಟೆಗೋಡೆಯನ್ನು ಚೌಕಾಕಾರದ ಕಲ್ಲುಗಳಿಂದ ಕಟ್ಟಿದೆ. ಕಲ್ಲುಗಳನ್ನು ಸರಿಯಾಗಿ ಕೆತ್ತದೆ ಇರುವುದರಿಂದ ಮಧ್ಯದಲ್ಲಿ ದೊಡ್ಡ ಸಂದಿಗಳಾಗಿವೆ. ಇಲ್ಲಿ ಬೆಣಚು ಕಲ್ಲನ್ನು (granite) ಉಪಯೋಗಿಸಿದೆ (ಚಿತ್ರ ೫೯). ಇದನ್ನು ಹದಿನಾರು-ಹದಿನೇಳನೇ ಶತಮಾನದಲ್ಲಿ ಕಟ್ಟಿದೆ.

ಕೋಟೆಯನ್ನು ಪ್ರವೇಶಿಸಲು ಐದು ಬಾಗಿಲುಗಳಿವೆ. ಪೂರ್ವ ದಿಕ್ಕಿನಲ್ಲಿರುವ ಮೂರು ಬಾಗಿಲುಗಳನ್ನು ತಿಮ್ಮಾಪುರ ಅಗಸಿ, ರಾಯಚೂರು ಅಗಸಿ, ಸಿರಿವಾರ ಅಗಸಿ, ಪಶ್ಚಿಮ ದಿಕ್ಕಿನಲ್ಲಿರುವ ಬಾಗಿಲನ್ನು ದೇವದುರ್ಗ ಅಗಸಿ ಮತ್ತು ಉತ್ತರ ದಿಕ್ಕಿನಲ್ಲಿರುವುದನ್ನು ಖಾನಾಪುರ ಅಗಸಿ ಎಂದು ಕರೆಯುವರು. ರಾಯಚೂರು ಅಗಸಿಗೆ ಬಾಗಿಲ ಚೌಕಟ್ಟಿಲ್ಲ. ಗೋಡೆಯ ಸಾಧಾರಣ ಕಲ್ಲುಗಳು ಮುಂದೆ ಚಾಚಿ ಬೋದಿಗೆಗಳಾಗಿವೆ. ಮೇಲೆ ಸರಳವಾದ ಉತ್ತರಂಗ (lintel) ಇದೆ. ಉಳಿದ ಬಾಗಿಲುಗಳು ಶಿಥಿಲವಾಗಿವೆ. ಗ್ರಾಮದ ಒಳಗೆ ಎರಡು ಬಾಗಿಲುಗಳಿವೆ. ಇವುಗಳ ಪಕ್ಕದಲ್ಲಿ ಈಗ ಮನೆಗಳಿರುವುದರಿಂದ ಕೋಟೆಗೋಡೆ ಉಳಿದಿಲ್ಲ. ಒಂದು ಬಾಗಿಲು ದಕ್ಷಿಣ ಭಾಗದಲ್ಲಿ, ಮತ್ತೊಂದು ಮಧ್ಯಭಾಗದಲ್ಲಿ ಇವೆ. ದಕ್ಷಿಣಭಾಗದ ವೀರಭದ್ರ ಅಗಸಿಯನ್ನು ದೇವಾಲಯದಿಂದ ತಂದ ಕಲ್ಲುಗಳಿಂದ ಕಟ್ಟಿದೆ. ಕಂಬಗಳನ್ನು ತೋಳುಗಳನ್ನಾಗಿಟ್ಟು, ಅವುಗಳ ಮೇಲೆ ಒಂದು ತೊಲೆಯನ್ನಿಟ್ಟು ಕಟ್ಟಿದೆ. ತೊಲೆಯ ಮೇಲೆ ಚೌಕಾಕಾರದ ಹೂಗಳಿರುವ ಪಟ್ಟಿಕೆಯಿದೆ. ಇದನ್ನು ಸಾಮಾನ್ಯವಾಗಿ ಅಧಿಷ್ಠಾನದಲ್ಲಿ ಕಾಣಬಹುದು. ಅದರ ಮೇಲೆ ದೊಡ್ಡ ಕೀರ್ತಿಮುಖವಿದೆ. ತೋಳುಗಳ ಪಕ್ಕದಲ್ಲಿ ನಾಗರ ದೇವಾಲಯದ ಮಾದರಿಯನ್ನು ಹೊತ್ತ ಕಂಬವಿರುವ ಗೋಡೆಯ ಕಲ್ಲನ್ನು ಅಲಂಕಾರಕ್ಕಾಗಿ ಜೋಡಿಸಿದೆ. ಹನ್ನೊಂದನೇ ಶತಮಾನದ ದೇವಾಲಯದ ಕಲ್ಲುಗಳನ್ನು ಇಲ್ಲಿ ಪುನಃ ಬಳಸಲಾಗಿದೆ. ಊರ ಮಧ್ಯದಲ್ಲಿರುವ ಕಛೇರಿ ಅಗಸಿ ಕಮಾನಿನಾಕಾರದಲ್ಲಿದೆ. ಚೆನ್ನಾಗಿ ನಯಗೊಳಿಸಿದ ಕಲ್ಲುಗಳಿಂದ ಕಟ್ಟಿದ ಈ ಬಾಗಿಲು ಹದಿನೇಳು-ಹದಿನೆಂಟನೇ ಶತಮಾನದ್ದು.

### ಟಿಪ್ಪಣಿಗಳು

೧. Patil Channabasappa S. and Vinoda C. Patil (Eds), 1998, *Inscriptions of Raichur District,* Nos. 4-20.

೨. Patil Channabasappa S., 1992, *Temples of Raichur and Bellary Districts,* pp. 74-83.

೩. ಪಾಟೀಲ ಚನ್ನಬಸಪ್ಪ ಎಸ್., ೧೯೯೯, *ಕರ್ನಾಟಕ ಕೋಟೆಗಳು,* ಪು. ೪೩.

## ೫. ರಾಮದುರ್ಗ

ರಾಮದುರ್ಗ ದೇವದುರ್ಗ ತಾಲೂಕಿನಲ್ಲಿ ದೇವದುರ್ಗದಿಂದ ಆಗ್ನೇಯಕ್ಕೆ ೨೫ ಕಿ.ಮೀ. ದೂರದಲ್ಲಿದೆ. ಇದು ಅಕ್ಷಾಂಶ ೧೬°೧೮' ಉತ್ತರ ಮತ್ತು ರೇಖಾಂಶ ೭೭° ೪' ಪೂರ್ವಕ್ಕಿದೆ. ಇದೊಂದು ಚಿಕ್ಕ ಗ್ರಾಮ. ಇಲ್ಲಿ ಕೋಟೆ, ದೇವಾಲಯ, ಮಸೀದಿ, ಬಾವಿ, ಮುಂತಾದುವುಗಳಿವೆ.

ಈ ಗ್ರಾಮದಲ್ಲಿ ನೆಲಮಟ್ಟದಲ್ಲಿ ಮತ್ತು ಬೆಟ್ಟದ ಮೇಲೆ ಸ್ಥಳೀಯ ಪಾಳೆಗಾರರು. ಹದಿನೇಳು-ಹದಿನೆಂಟನೇ ಶತಮಾನಗಳಲ್ಲಿ ಕಟ್ಟಿಸಿದ ಕೋಟೆಯಿದೆ. ಅನಿಯಮಿತಾಕಾರದ ಮಧ್ಯಮ ಮತ್ತು ಚಿಕ್ಕ ಗಾತ್ರದ ಕಲ್ಲುಗಳಿಂದ ಕಟ್ಟಿದ ಕೋಟೆಯಲ್ಲಿ ಎರಡು ಬಾಗಿಲುಗಳು ಮತ್ತು ವೃತ್ತಾಕಾರದ ಕೊತ್ತಳಗಳಿವೆ. ಬೆಟ್ಟದ ಮೇಲೆ ಎರಡು ಒಂಟಿ ಕೊತ್ತಳಗಳಿವೆ (ಚಿತ್ರ ೬.೨). ಈಗಿನ ಜನವಾಸ ಕೋಟೆಯ ಒಳಗಿದೆ.

ಬೆಟ್ಟಗಳಿಂದ ಸುತ್ತುವರಿದ ಊರಿನ ಸುತ್ತಲು ಬೆಟ್ಟಗಳ ಮಧ್ಯದಲ್ಲಿ ಮತ್ತು ಬೆಟ್ಟಗಳ ಮೇಲೆ ಕೋಟೆಯನ್ನು ಕಟ್ಟಿದೆ. ದಕ್ಷಿಣ ದಿಕ್ಕಿಗೆ ಎರಡು ಬೆಟ್ಟಗಳ ಮಧ್ಯದಲ್ಲಿ, ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿ ಬೆಟ್ಟದ ಮೇಲೆ ಕಟ್ಟಿದ ಕೋಟೆಯನ್ನು ಈಗಲೂ ನೋಡಬಹುದು. ಪೂರ್ವಕ್ಕೆ ಎರಡು ಬೆಟ್ಟಗಳ ಮಧ್ಯದಲ್ಲಿ ಕಟ್ಟಿದ ಕೋಟೆ ಈಗ ಉಳಿದಿಲ್ಲ. ನೈರುತ್ಯ ದಿಕ್ಕಿನ ಬೆಟ್ಟದ ಮೇಲೆ ಎರಡು ಸುತ್ತಿನ ಕೋಟೆಯಿದೆ. ಒಳ ಸುತ್ತಿನಲ್ಲಿ ಒಂದು ಬಾಗಿಲಿದೆ. ಊರೊಳಗೆ ಪ್ರವೇಶಿಸಲು ದಕ್ಷಿಣ ದಿಕ್ಕಿನ ಕೋಟೆಯಲ್ಲಿ ಗೊಂದಪಲ್ಲಿ ಬಾಗಿಲಿದೆ. ಈ ಬಾಗಿಲು ಮತ್ತು ಬೆಟ್ಟದ ಮೇಲಿನ ಬಾಗಿಲು, ಎರಡಕ್ಕೂ ಕಟ್ಟಡಗಳಿಲ್ಲದೆ ಪ್ರವೇಶ ಮಾರ್ಗ ಮಾತ್ರ ಉಳಿದಿದೆ. ಉತ್ತರ ದಿಕ್ಕಿನ ಬೆಟ್ಟ ಮತ್ತು ಆಗ್ನೇಯ ದಿಕ್ಕಿನ ಬೆಟ್ಟಗಳ ಮೇಲೆ ಒಂದೊಂದು ವೃತ್ತಾಕಾರದ ಒಂಟಿ ಕೊತ್ತಳಗಳಿವೆ (ಚಿತ್ರ ೬.೩). ಇವುಗಳ ಗೋಡೆಯ ಮೇಲ್ಭಾಗದಲ್ಲಿ ಬಂದೂಕು ಕಿಂಡಿಗಳಿವೆ.

ಉತ್ತರ ದಿಕ್ಕಿನ ಬೆಟ್ಟದ ಮೇಲೆ ದಕ್ಷಿಣ ದಿಕ್ಕಿಗೆ ವಕ್ರಾಕಾರದ ಚಿಕ್ಕ ಕೋಟೆಗೋಡೆಯನ್ನು ಕಟ್ಟಿ ಇಲ್ಲಿಯ ಎರಡು ಕೋಟೆಗಳ ಮಧ್ಯದ ಸಮತಟ್ಟಾದ ಪ್ರದೇಶದಲ್ಲಿ ರಾಮಲಿಂಗೇಶ್ವರ ದೇವಾಲಯವನ್ನು ಮತ್ತು ಒಂದು ಚಿಕ್ಕ ಬಾವಿಯನ್ನು ಕಟ್ಟಿದ್ದಾರೆ. ಪೂರ್ವಾಭಿಮುಖವಾಗಿರುವ ದೇವಾಲಯವನ್ನು ಹಿಂದು-ಮುಸ್ಲಿಮ್ ಶೈಲಿಯಲ್ಲಿ ಕಲ್ಲು ಮತ್ತು ಗಾರೆಯಿಂದ ಕಟ್ಟಿ, ಗಾರೆ ಮಾಡಲಾಗಿದೆ. ದೇವಾಲಯದ ಮುಂಭಾಗ ಮತ್ತು ಒಳಗಿನ ಅಂಕಣಗಳು ಕಮಾನುಗಳಿಂದ ನಿರ್ಮಿತವಾಗಿವೆ. ಕೈಪಿಡಿಗೋಡೆಯಲ್ಲಿ ಎಲೆಯಾಕಾರದ ಮೂರು ವಲಯಗಳ ತೆನೆಗಳು ಮತ್ತು ಮೂಲೆಯಲ್ಲಿ ನಂದಿಗಳಿವೆ (ಚಿತ್ರ ೬.೪). ಬಾವಿಯನ್ನು ಸಿಡಿಲು ಬಾವಿ ಎನ್ನುತ್ತಾರೆ. ಆಗ್ನೇಯ ಬೆಟ್ಟದ




೬೨. ರಾಮದುರ್ಗ ಕೋಟೆ : ೧. ಬಾಗಿಲು, ೨. ಹನುಮಂತನ ದೇವಾಲಯ, ೩. ಮಸೀದಿ, ೪. ಮಸೀದಿ, ೫. ಬಾಗಿಲು, ೬. ಒಂಟಿ ಕೊತ್ತಳ, ೭. ದುರ್ಗಮ್ಮನ ದೇವಾಲಯ, ೮. ರಾಮಲಿಂಗೇಶ್ವರ ದೇವಾಲಯ, ೯. ಬಾವಿ



೬೩. ರಾಮದುರ್ಗ, ಉತ್ತರ ದಿಕ್ಕಿನ ಕೊತ್ತಳ



೬೪. ರಾಮದುರ್ಗ, ರಾಮಲಿಂಗೇಶ್ವರ ದೇವಾಲಯ

ಮೇಲೆ ದುರ್ಗಾ ದೇವಾಲಯವಿದೆ. ಊರೊಳಗೆ ಉತ್ತರಾಭಿಮುಖವಾದ ವೀರಭದ್ರ ದೇವಾಲಯವಿದೆ. ಇದನ್ನು ಸಹ ಹಿಂದು -ಮುಸ್ಲಿಮ್ ಶೈಲಿಯಲ್ಲಿ ರಾಮಲಿಂಗೇಶ್ವರ ದೇವಾಲಯದ ಶೈಲಿಯಲ್ಲಿ ಕಟ್ಟಿದೆ. ಮುಂಭಾಗದಲ್ಲಿ ಮೂರು ಕಮಾನುಗಳಿವೆ. ದೇವಾಲಯದ ಒಳಭಾಗದಲ್ಲಿ ಗರ್ಭಗೃಹದ ಸುತ್ತಲು ಪ್ರದಕ್ಷಿಣೆ ಮಾಡಲು ಅವಕಾಶವಿದೆ. ಊರೊಳಗೆ ಎರಡು ಮಸೀದಿಗಳಿವೆ.

ಕೋಟೆಯ ಹೊರಗೆ ಗೊಂದಪಲ್ಲಿ ಬಾಗಿಲ ಹತ್ತಿರ ಒಂದು ವೀರಗಲ್ಲಿದೆ. ಕುದುರೆಯ ಮೇಲೆ ಕುಳಿತ ವೀರನು ಮೇಲೆತ್ತಿದ ಕೈಗಳಲ್ಲಿ ಕತ್ತಿ ಮತ್ತು ಗುರಾಣಿಗಳನ್ನು ಹಿಡಿದಿದ್ದಾನೆ.

## ೬. ಕಲ್ಲೂರು

ಕಲ್ಲೂರು ಮಾನ್ವಿ ತಾಲೂಕಿನಲ್ಲಿ ಮಾನ್ವಿಯಿಂದ ಈಶಾನ್ಯಕ್ಕೆ ಇಪ್ಪತ್ತೈದು ಕಿ.ಮೀ. ದೂರದಲ್ಲಿ ಅಕ್ಷಾಂಶ ೧೬°, ೬'ಮತ್ತು ರೇಖಾಂಶ ೭೭°, ೮' ರಲ್ಲಿದೆ. ಐತಿಹಾಸಿಕ ಪ್ರಸಿದ್ಧವಾದ ಈ ಊರಿನಲ್ಲಿ ಪುರಾತತ್ವ ನೆಲೆ, ದೇವಾಲಯ, ಶಿಲ್ಪ, ಶಾಸನ ಮುಂತಾದವುಗಳಿವೆ.

ಕಲ್ಲೂರಿನ ಇತಿಹಾಸ ಶಿಲಾ-ತಾಮ್ರಯುಗ (Chalcolithic)ದಷ್ಟು ಹಿಂದಕ್ಕೆ ಹೋಗುತ್ತದೆ. ಈ ಕಾಲದ ತಾಮ್ರದ ಮೂರು ಉದ್ದವಾದ ಕತ್ತಿಗಳು ಇಲ್ಲಿ ದೊರತಿವೆ.[೧] ಕಲ್ಯಾಣ ಚಾಲುಕ್ಯ ಅರಸ ಆರನೇ ವಿಕ್ರಮಾದಿತ್ಯನು ಕ್ರಿ.ಶ. ೧೦೯೬ರಲ್ಲಿ ನರ್ಮದಾ ನದಿಯ ದಂಡೆಯ ಮೇಲೆ ಸೈನಿಕ ಶಿಬಿರದಲ್ಲಿದ್ದಾಗ ಪಂಚಲಾಂಗಲಕ್ರತುವನ್ನು ಮಾಡುವ ಸಂದರ್ಭದಲ್ಲಿ ಕಲ್ಲೂರನ್ನು ದಂಡನಾಯಕ ವಿಕ್ರಮಾದಿತ್ಯ ಭಟ್ಟೋಪಾಧ್ಯಾಯ ಸರ್ವಕ್ರತು ಸೋಮಯಾಜಿಗೆ ದಾನವಾಗಿ ಕೊಟ್ಟನು.[೨] ಹನ್ನೆರಡನೇ ಶತಮಾನದಲ್ಲಿ ಇದು ಅಗ್ರಹಾರವಾಗಿ ಬೆಳೆಯಿತು.[೩]

ಹದಿಮೂರು ಅಥವಾ ಹದಿನಾಲ್ಕನೆಯ ಶತಮಾನದಲ್ಲಿ ಇಲ್ಲಿ ಒಂದು ಕೋಟೆಯನ್ನು ಕಟ್ಟಲಾಯಿತು. ಮುಸ್ಲಿಮ್ ಅರಸರ ಕಾಲದಲ್ಲಿ ಈ ಕೋಟೆಗೆ ಐದು ಬಾಗಿಲುಗಳನ್ನು ಕಟ್ಟಲಾಯಿತು. ಇವುಗಳಲ್ಲಿ ಮೂರು ಬಾಗಿಲುಗಳನ್ನು ಅವುಗಳಿಂದ ಹೊರಡುವ ದಾರಿಗಳನ್ನು ಅವಲಂಬಿಸಿ ಮಾನವಿ ದರ್ವಾಜ, ಕಲ್ಮಾಲ ದರ್ವಾಜ ಮತ್ತು ರಾಯಚೂರು ದರ್ವಾಜ ಎಂದು ಹೆಸರಿಡಲಾಗಿದೆ. ಊರಿನಲ್ಲಿ ಚಾವಡಿಯನ್ನು ಕಟ್ಟುವುದಕ್ಕಾಗಿ ರಾಯಚೂರು ದರ್ವಾಜವನ್ನು ಬೀಳಿಸಲಾಯಿತು.[೪] ಈ ಬಾಗಿಲಿನಲ್ಲಿಯ ಮರದ ತೊಲೆಯ ಮೇಲಿನ ಶಾಸನದಿಂದ ದಕ್ಷಿಣದ ಈ ಬಾಗಿಲನ್ನು ಮುಸರೆಡಿಯ ಆಗಾಖುಶ್ರುವಿನ ಕಾಲದಲ್ಲಿ ಕ್ರಿ.ಶ. ೧೬೮೩ರಲ್ಲಿ ಕಟ್ಟಿಸಿದನೆಂದು ತಿಳಿಯುತ್ತದೆ.[೫] ಆಗಾಖುಶ್ರು ಆದಿಲ್ ಶಾಹಿ ಅರಸರಾದ ಸಿಕಂದರ್ ಮತ್ತು ಎರಡನೇ ಅಲಿ ಆದಿಲ್‌ಶಾಹರ ಅಧಿಕಾರಿಯಾಗಿದ್ದನು.[೬] ಕೋಟೆಯ ಅವಶೇಷಗಳು ಈಗ ಉಳಿದಿಲ್ಲ. ಇಲ್ಲಿಯ ದೇವಾಲಯಗಳಲ್ಲಿ ಮಾರಟೇಶ್ವರ ಹಲವು ಸಲ ಜೀರ್ಣೋದ್ಧಾರಗೊಂಡು ಈಗಲೂ ಸುಸ್ಥಿತಿಯಲ್ಲಿದೆ.

### ಟಿಪ್ಪಣಿಗಳು

೧. ಸುಂದರ ಅ. (ಸಂ), 1997, *ಕರ್ನಾಟಕ ಚರಿತ್ರೆ, ಸಂಪುಟ ೧,* ಪು. ೧೫೮.

೨. Patil Channabasappa S. and Vinoda C. Patil (Eds), 1998, *Inscriptions of Raichur District,* No. 307; *ARIE,* 1961-62, No. B 566.

೩. *ಅದೇ,* No. 2. 305-306; *ARIE,* 1961-62, Nos. B 564-565.

೪. *Raichur District Gazetteer,* p.701.

೫. Patil Channabasappa S. and Vinoda C. Patil, *ಪೂರ್ವೋಕ್ತ,* No. 302.

೬. *ಅದೇ,* Nos. 470, 490.

೭. Patil Channabasappa S., 1991, *Temples of Raichur and Bellary District,* p. 94-95.

# ೭. ಮಾನ್ವಿ

ರಾಯಚೂರು ಜಿಲ್ಲೆಯ ಒಂದು ತಾಲೂಕು ಕೇಂದ್ರವಾದ ಮಾನ್ವಿ ಅಕ್ಷಾಂಶ ೧೬° ಉತ್ತರ ಮತ್ತು ರೇಖಾಂಶ ೭೭° ೨' ಪೂರ್ವದಲ್ಲಿದೆ. ದೀರ್ಘವಾದ ಐತಿಹಾಸಿಕ ಪರಂಪರೆಯುಳ್ಳ ಈ ನಗರದಲ್ಲಿ ಕೋಟೆ, ಕೆರೆ, ಬಾವಿ, ದೇವಾಲಯ, ಮಸೀದಿ ಮುಂತಾದವುಗಳಿವೆ.

### ಐತಿಹಾಸಿಕ ಹಿನ್ನೆಲೆ

ಮಾನ್ವಿಯು ಇತಿಹಾಸ ಪೂರ್ವ ಕಾಲದಲ್ಲಿ ಮಾನವನ ನೆಲೆಯಾಗಿತ್ತು. ಇಲ್ಲಿಯ ಬೆಟ್ಟದ ಪಶ್ಚಿಮಕ್ಕೆ ಬೆಟ್ಟದ ಬುಡದಲ್ಲಿ ನವಶಿಲಾಯುಗದ ನಿವೇಶನವಿದೆ. ಇತಿಹಾಸ ಕಾಲಕ್ಕೆ ಬಂದಾಗ ಶಾಸನಾಧಾರಗಳು ಸಿಗುವುದು ಹನ್ನೊಂದನೇ ಶತಮಾನದಿಂದ. ಶಾಸನಗಳಲ್ಲಿ ನಗರದ ಹೆಸರು ಮಾನುವೆ, ಮಾನುವ ಮತ್ತು ಮಾನವೆ ಎಂದು ಉಲ್ಲೇಖಗೊಂಡಿದೆ. ಕಲ್ಯಾಣ ಚಾಲುಕ್ಯ ಅರಸ ಒಂದನೇ ಸೋಮೇಶ್ವರನ ಸಾಮಂತ ಹೈಹಯ ಕುಲದ ರೇವರಸನು ಎಡೆದೊರೆ - ೨೦೦೦ ವಿಭಾಗವನ್ನು ಆಳುತ್ತಿದ್ದಾಗ ಆತನ ಅಧಿಕಾರಿ ತಂತ್ರಪಾಲ ಗಂಗರ ಚಾವುಂಡಮಯ್ಯನು ಕ್ರಿ.ಶ. ೧೦೫೨ರಲ್ಲಿ ಮಾನ್ವಿಯ ದಿಗ್ಗಿಗೆ ಕೆರೆಗೆ ಭೂದಾನವನ್ನು ಮಾಡಿದನು.[೧] ಈ ಕೆರೆಯು ಇಂದಿಗೂ ಸುಸ್ಥಿತಿಯಲ್ಲಿದ್ದು, ಈಗ ಇದನ್ನು ದಿಡ್ಡಿಕೆರೆ ಎಂದು ಕರೆಯುತ್ತಾರೆ. ಎರಡನೇ ಸೋಮೇಶ್ವರನ ಕಾಲದಲ್ಲಿ ಮಹಾಸಾಮಂತ ಮಲೆಯಮರಸನು ಮಾನುವೆಯನ್ನು ಆಳುತ್ತಿದ್ದನು. ಈತನು ಗಿರಿಗೋಟೆಮಲ್ಲ ಎಂಬ ಬಿರುದನ್ನು ಹೊಂದಿದ್ದನು. ಮಾಕಿ ಸೆಟ್ಟಿಯುಪನ್ನೂರಿನಲ್ಲಿ ಕಟ್ಟಿಸಿದ ಗಿರಿ ಗೋಟೆ ಮಲ್ಲ ಜಿನಾಲಯಕ್ಕೆ ಈತ ಕ್ರಿ.ಶ. ೧೦೬೯ರಲ್ಲಿ ಭೂದಾನ ಮಾಡಿದನು.[೨] ಜಿನಾಲಯವನ್ನು ಮಲೆಯಮರಸನ ಹೆಸರಿನಲ್ಲಿ ಕಟ್ಟಿಸಿದಂತೆ ಕಾಣುತ್ತದೆ. ಹೊಯ್ಸಳ ಅರಸರು ಗಿರಿದುರ್ಗಮಲ್ಲ ಬಿರುದನ್ನು ಹೊಂದಿದಂತೆ ಈತನು ಗಿರಿಗೋಟೆಮಲ್ಲ ಬಿರುದನ್ನು ಹೊಂದಿದ್ದಾನೆ. ನಾಲ್ಕನೇ ಸೋಮೇಶ್ವರನ ಕಾಲದಲ್ಲಿ ಕ್ರಿ.ಶ. ೧೧೯೧ರಲ್ಲಿ ಮಹಾಮಂಡಲೇಶ್ವರ ಮೈಲುಗಿದೇವ ಮಾನ್ವಿಯನ್ನು ಆಳುತ್ತಿದ್ದನು. ಈತನನ್ನು ಮಾನುವೆಯ ಮಹಾಮಂಡಲೇಶ್ವರ ಮೈಲುಗಿ ದೇವನೆಂದೇ ಶಾಸನದಲ್ಲಿ ಉಲ್ಲೇಖಿಸಿದೆ.[೩]

ಹೊಯ್ಸಳ ಅರಸ ಎರಡನೇ ಬಲ್ಲಾಳನು ಗದಗ ತಾಲೂಕಿನ ಸೊರಟೂರಿನಲ್ಲಿ ನಡೆದ ಯುದ್ಧದಲ್ಲಿ ಯಾದವ ಭಿಲ್ಲಮನನ್ನು ಸೋಲಿಸಿದ ನಂತರ ಪ್ರಬಲವಾದ ಕುಕ್ಕನೂರು ಮತ್ತು ಮಾನ್ವಿ ಕೋಟೆಗಳನ್ನು ವಶಪಡಿಸಿಕೊಂಡನು.[೪] ಬಲ್ಲಾಳನ ಕ್ರಿ.ಶ. ೧೧೯೦ರ ಶಾಸನವು ಆತನು ಗೆದ್ದ ಕೋಟೆಗಳ ಪಟ್ಟಿಯಲ್ಲಿ

ಸೊರಟೂರು, ಯಲಬುರ್ಗ, ಹಾಲ್ವಿ, ಮಾನ್ವಿಗಳನ್ನು ಉಲ್ಲೇಖಿಸುತ್ತದೆ.[೪] ಕೆಲವೇ ವರ್ಷಗಳಲ್ಲಿ ಚಾಲುಕ್ಯ, ಹೊಯ್ಸಳ ಮತ್ತು ಕಾಕತೀಯರು ಒಬ್ಬರ ವಶದಲ್ಲಿದ್ದ ಕೋಟೆಯನ್ನು ಮತ್ತೊಬ್ಬರು ವಶಪಡಿಸಿಕೊಳ್ಳುತ್ತಿದ್ದರು. ಕ್ರಿ.ಶ. ೧೩೨೪ರಲ್ಲಿ ಇದು ಕಾಕತೀಯರ ವಶದಲ್ಲಿತ್ತು. ಕಾಕತೀಯ ಅರಸ ಪ್ರತಾಪರುದ್ರನ ಸಾಮಂತ ಗೋನಗನ್ನಯ್ಯ ರೆಡ್ಡಿಯ ದಂಡನಾಯಕ ವಿಠಲನಾಥನು ಆದವಾನಿ, ತುಂಬುಳ, ಹಾಲ್ವಿ ಮತ್ತು ಮಾನ್ವಿ ಕೋಟೆಗಳನ್ನು ಗೆದ್ದು, ರಾಯಚೂರಿನಲ್ಲಿ ಕೋಟೆಯನ್ನು ಕಟ್ಟಿಸಿದನು.[೫]

ವಿಜಯನಗರ ಮತ್ತು ಮುಸ್ಲಿಮ್ ಅರಸರ ನಡುವೆ ನಡೆದ ದೋಅಬ್ ಯುದ್ಧಗಳ ಫಲಿತಾಂಶಕ್ಕನುಗುಣವಾಗಿ ಕೋಟೆಯು ವಿಜಯೀ ಅರಸರ ಪಾಲಾಗುತ್ತಿತ್ತು. ಬಹಮನಿ ಅರಸ ಫಿರೋಜಶಾಹನು ಕ್ರಿ.ಶ. ೧೪೦೬-೦೭ರಲ್ಲಿ ಈ ಕೋಟೆಯನ್ನು ಗೆದ್ದು, ಕೋಟೆಯ ದುರಸ್ತಿ ಮಾಡಿ, ಮಲಿಕ್ ಸಫ್‌ದರ್‌ನನ್ನು ಕೋಟೆಯ ಅಧಿಕಾರಿಯಾಗಿ ನೇಮಿಸಿದನು.[೬] ಕ್ರಿ.ಶ. ೧೫೦೫ ರಿಂದ ೧೫೦೯ರವರೆಗೆ ಆಳಿದ ವಿಜಯನಗರದ ವೀರನರಸಿಂಹನು ಬಿಜಾಪುರದ ಯೂಸುಫ್ ಆದಿಲ್ ಖಾನನನ್ನು ಸೋಲಿಸಿ ರಾಯಚೂರು, ಮುದುಗಲ್ಲು ಮತ್ತು ಮಾನ್ವಿ ಕೋಟೆಗಳನ್ನು ವಶಪಡಿಸಿಕೊಂಡನು. ಇವರಿಬ್ಬರ ಮಧ್ಯದಲ್ಲಿ ಮಾನ್ವಿಯಲ್ಲಿ ಈ ಯುದ್ಧ ನಡೆಯಿತು. ಸುಲ್ತಾನನು ತನ್ನ ಪ್ರಾಣ ರಕ್ಷಣೆಗಾಗಿ ಅಭೇಧ್ಯವಾದ ಕೋಟೆಯೊಳಗೆ ಹತ್ತಿಹೋದನು. ಅರಸನು ಅವನನ್ನು ಕೋಟೆಯ ಮಧ್ಯದಲ್ಲಿ ಹಿಡಿದು ಬಂಧಿಸಿದನು. ಭಯಭೀತನಾದ ಸುಲ್ತಾನನು ಶರಣಾದಾಗ ಅವನನ್ನು ಮುಕ್ತಗೊಳಿಸಿದನು.[೭] ವಿಜಯನಗರ ಅರಸ ಕೃಷ್ಣದೇವರಾಯ ಮತ್ತು ಬಿಜಾಪುರದ ಇಸ್ಮಾಯಿಲ್ ಆದಿಲ್ ಶಾಹರ ನಡುವೆ ಕ್ರಿ.ಶ. ೧೫೨೦ರಲ್ಲಿ ರಾಯಚೂರಿನಲ್ಲಿ ಭೀಕರವಾದ ಯುದ್ಧ ನಡೆಯಿತು. ಕೋಟೆಯು ಯುದ್ಧದಲ್ಲಿ ಜಯಶಾಲಿಯಾದ ಕೃಷ್ಣದೇವರಾಯನ ವಶವಾಯಿತು. ಅದೇ ಸಮಯದಲ್ಲಿ ರಾಯನು ಮಾನ್ವಿ ಕೋಟೆಯನ್ನು ಜಯಿಸಿದನು. ಕೃಷ್ಣದೇವರಾಯನು ರಾಯಚೂರು, ಆಲಂಪುರ, ಮಾನ್ವಿ, ಹಾನಗಲ್ಲು ಮತ್ತು ಮಾಗಡಿ ಕೋಟೆಗಳನ್ನು ಗೆದ್ದುದು ಕ್ರಿ.ಶ. ೧೫೨೧ರ ಶಾಸನದಲ್ಲಿ ದಾಖಲಾಗಿದೆ.[೮] ಈ ಕಾಲದಲ್ಲಿ ಮಾನ್ವಿ ಒಂದು ಆಡಳಿತ ವಿಭಾಗವಾಗಿ ಮಾನುವೆ ಸೀಮೆಯಾಗಿತ್ತು. ಸದಾಶಿವನ ಕಾಲದಲ್ಲಿ ಮಾನ್ವಿ ವಿಜಯನಗರ ಅರಸರ ವಶದಲ್ಲಿದ್ದುದು ಮಾನ್ವಿಯಲ್ಲಿಯ ಕ್ರಿ.ಶ. ೧೫೫೩ರ ಶಾಸನದಿಂದ ಸ್ಪಷ್ಟವಾಗುತ್ತದೆ.[೯] ಕ್ರಿ.ಶ. ೧೫೬೫ರಲ್ಲಿ ವಿಜಯನಗರದ ಪತನವಾದ ನಂತರವೂ ಇದು ಅರವೀಡು ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ.ಶ. ೧೫೭೭ರಲ್ಲಿ ಶ್ರೀರಂಗರಾಯನು ಮಾನವಿ ದೇಶದೊಳಗಿನ ಯಡವಾಳ ಗ್ರಾಮವನ್ನು ಸುಧೀಂದ್ರ ತೀರ್ಥರಿಗೆ ದಾನವಾಗಿ ಕೊಟ್ಟನು.[೧೦]

ಹದಿನಾರನೇ ಶತಮಾನದಲ್ಲಿ ಪೆರ್ಗಡ ಮಲ್ಲಿನೇಡುವಿನ ಮಗ ಸಿಂಗಣ ಮಾನ್ವಿಯಲ್ಲಿ ಹನುಮಂತ ದೇವರನ್ನು ಪ್ರತಿಷ್ಠಾಪಿಸಿ ಮುಂದೆ ದೀಪಸ್ತಂಭವನ್ನು ನಿಲ್ಲಿಸಿದನು.[೨] ಸರ್ಜಾಪುರದ ಗೌಡ ದೂಪದ ತಿಮ್ಮಯ್ಯ ಮಾನ್ವಿಯಲ್ಲಿ ಕ್ರಿ.ಶ. ೧೬೦೭ರಲ್ಲಿ ಒಂದು ಬಾವಿಯನ್ನು ಕಟ್ಟಿಸಿದನು. ಬಾವಿಯನ್ನು ಕಟ್ಟಲು ನರಸಾಪುರದ ಪೇರೆಗೌಡ ತಿಮ್ಮಯ್ಯನು ಭೂಮಿಯನ್ನು ಇನಾಮಾಗಿ ಕೊಟ್ಟನು. ಬಾವಿಯ ಮೆಟ್ಟಿಲುಗಳನ್ನು ಠಾಣಾದಾರ್ ಶೇಕ್ ನಿಜಾಮ್, ಮುಜಮದಾರ್ ಮುದೋಪ, ನಿಘಾವನ್ ನಾರಪ್ಪ, ಸರನೋಬತ್ ನಸರಾವಿ ಮತ್ತು ಸಬನಿಸ್ ಅಂತಪ ಇವರ ಅಧಿಕಾರಾವಧಿಯಲ್ಲಿ ನಿರ್ಮಿಸಲಾಯಿತು.[೧೩] ಈ ಬಾವಿ ಊರ ಮಧ್ಯದಲ್ಲಿದ್ದು ಇದನ್ನು ಈಗ ಜಾಡರ ಬಾವಿಯೆಂದು ಕರೆಯುತ್ತಾರೆ.

## ಕೋಟೆ

ಮಾನ್ವಿ ಕೋಟೆ ಬೆಟ್ಟದ ಮೇಲಿರುವ ಗಿರಿದುರ್ಗ. ಬೆಟ್ಟದ ಉತ್ತರ ಭಾಗದಲ್ಲಿ ನೆಲಮಟ್ಟದಲ್ಲೂ ಕೋಟೆಯಿದೆ. ಈಗಿನ ನಗರ ಕೋಟೆಯ ಹೊರಗಿದೆ. ಹಿಂದೆ ನೆಲಮಟ್ಟದಲ್ಲಿರುವ ಕೋಟೆಯೊಳಗಿನ ವಿಶಾಲವಾದ ಪ್ರದೇಶದಲ್ಲಿ ಜನವಾಸವಿತ್ತು. ನಂತರ ಅದನ್ನು ತೆರವುಗೊಳಿಸಿ ಜನರೆಲ್ಲ ಹೊರಗೆ ಬಂದಿದ್ದಾರೆ. ಈಗ ಪುನಃ ಕೆಲವರು ಕೋಟೆಯೊಳಗೆ ವಾಸಮಾಡುತ್ತಿದ್ದಾರೆ.

ಬೆಟ್ಟದ ಮೇಲ್ಭಾಗದಲ್ಲಿ ಒಂದು ಸುತ್ತು ಕೋಟೆಯಿದೆ. ಬೆಟ್ಟದ ಉತ್ತರ ಭಾಗದಲ್ಲಿ ಕೆಳಮಟ್ಟದಲ್ಲಿ ಪೂರ್ವ-ಪಶ್ಚಿಮ ದಿಕ್ಕಿನಲ್ಲಿ ಮತ್ತೊಂದು ಕೋಟೆ ಇದೆ. ಮೇಲಿನ ಕೋಟೆಯ ಪೂರ್ವ ಮತ್ತು ಪಶ್ಚಿಮ ಬದಿಗಳಿಂದ ಉತ್ತರಕ್ಕೆ ಚಾಚಿದ ಕೋಟೆಗೋಡೆಗಳು ನೆಲಮಟ್ಟದಲ್ಲಿ ಪೂರ್ವ-ಪಶ್ಚಿಮಕ್ಕೆ ಇರುವ ಕೋಟೆಗೋಡೆಯನ್ನು ಸೇರುತ್ತವೆ. ಆದುದರಿಂದ ಇದು ಮೂರು ಸುತ್ತಿನ ಕೋಟೆ (ಚಿತ್ರ ೬೫).

ನೆಲಮಟ್ಟದಲ್ಲಿರುವ ಹೊರಕೋಟೆಯನ್ನು ದೊಡ್ಡ ಕಲ್ಲುಗಳಿಂದ ಕಟ್ಟಿದೆ. ಮುಂದೆ ಚೌಕಾಕಾರದಲ್ಲಿರುವ ಕಲ್ಲುಗಳ ಹಿಂಭಾಗ ಬೆಣೆಯಾಕಾರದಲ್ಲಿ ಚೂಪಾಗಿದೆ. ಇಂತಹ ಕಲ್ಲುಗಳ ಬಳಕೆ ವಿಜಯನಗರ ಕಾಲದಲ್ಲಿ ಪ್ರಾರಂಭವಾಯಿತು. ಆದುದರಿಂದ ಈ ಕೋಟೆಯನ್ನು ವಿಜಯನಗರ ಕಾಲದಲ್ಲಿ ಕಟ್ಟಿದೆ. ಈ ಕೋಟೆಯಲ್ಲಿ ಚೌಕಾಕಾರದ ಕೊತ್ತಳ ಗಳಿವೆ. ಕೋಟೆಗೆ ಉತ್ತರಾಭಿಮುಖವಾಗಿರುವ ಒಂದು ಬಾಗಿಲಿದೆ (ಚಿತ್ರ ೬೬). ಬಾಗಿಲು ಶಿಥಿಲವಾಗಿದ್ದು, ಮೂಲ ರೂಪದಲ್ಲಿಲ್ಲ. ಬಾಗಿಲ ಪ್ರವೇಶ ಒಳಭಾಗದಲ್ಲಿ ಅಂಕುಡೊಂಕಾಗಿದೆ. ಬಾಗಿಲ ಕಲ್ಲಿನ ಮೇಲೆ ಕುದುರೆ ಸವಾರನೊಬ್ಬ ಹುಲಿಯೊಂದಿಗೆ ಹೋರಾಡುವ ಉಬ್ಬು ಶಿಲ್ಪವಿದೆ. ಇದರ ಪಕ್ಕದಲ್ಲಿ




೬೫. ಮಾನ್ವಿ ಕೋಟೆ : ೧. ಕೋನಾಪುರ ಅಗಸಿ, ೨. ಹನುಮಂತನ ದೇವಾಲಯ, ೩. ಬಾವಿ, ೪. ತೊಟ್ಟಿ, ೫. ಮಸೀದಿ, ೬. ಸಂತೆ ಅಗಸಿ, ೭. ಉತ್ತರದ ಹೊರಕೋಟೆ ಬಾಗಿಲು, ೮. ಬಾವಿ, ೯. ದರ್ಗಾ, ೧೦. ಕಟ್ಟಡ, ೧೧. ಕೊಳ, ೧೨. ಕೊಳ,೧೩. ಕಾವಲು ಗೋಪುರ, ೧೪. ದಿಡ್ಡಿ ಬಾಗಿಲು, ೧೫. ದಿಡ್ಡಿ ಬಾಗಿಲು, ೧೬. ಕೆರೆ



೬೬. ಮಾನ್ವಿ, ಪೂರ್ವ ದಿಕ್ಕಿನ ಬಾಗಿಲು



೬೭. ಮಾನ್ವಿ, ಬೆಟ್ಟದ ಮೇಲಿನ ಕಾವಲು ಗೋಪುರ

ಒಂದೊಂದು ಬದಿಗೆ ಒಬ್ಬ ಮನುಷ್ಯ ನಿಂತಿದ್ದಾನೆ. ಮತ್ತೊಂದು ಕಲ್ಲಿನ ಮೇಲೆ ಒಬ್ಬ ಮನುಷ್ಯನ ಶಿಲ್ಪವಿದೆ.

ಹೊರಕೋಟೆಯ ಒಳಗೆ ವಿಶಾಲವಾದ ಪ್ರದೇಶವಿದೆ. ಉತ್ತರ ದಿಕ್ಕಿನ ಕೋಟೆ ಗೋಡೆಯ ಹತ್ತಿರ ದಕ್ಷಿಣಕ್ಕೆ ಒಂದು ಮಸೀದಿ ಮತ್ತು ಬಾವಿ ಇವೆ. ಮಸೀದಿಯ ಆವರಣದ ಸುತ್ತ ಗೋಡೆಯಿದೆ. ಆವರಣಕ್ಕೆ ಉತ್ತರ ದಿಕ್ಕಿಗೆ ಬಾಗಿಲಿದೆ. ಬಾಗಿಲ ಕಟ್ಟಡ ದೊಡ್ಡದಾಗಿದೆ. ಪ್ರವೇಶದ ಬದಿಗಳಲ್ಲಿ ಕಟ್ಟೆಗಳಿವೆ. ಪ್ರತಿ ಕಟ್ಟೆಯ ಮೇಲೆ ಎರಡು ಕಂಬಗಳ ಮೂರು ಅಂಕಣಗಳಿವೆ. ಎಡಭಾಗದ ಕಟ್ಟೆಯ ಮೇಲೆ ಒಂದು ಕೊಠಡಿಯಿದೆ. ಆವರಣದೊಳಗೆ ಪೂರ್ವಾಭಿಮುಖವಾಗಿರುವ ಮಸೀದಿಯಿದೆ. ನಾಲ್ಕು ಕಂಬಗಳ ಮಸೀದಿಯ ಕಟ್ಟಡ ಸರಳವಾಗಿದೆ. ಮಸೀದಿಯ ಎದುರಿಗೆ ಚೌಕಾಕಾರದ ನೀರಿನ ತೊಟ್ಟಿಯಿದೆ. ನೆಲಮಟ್ಟಕ್ಕಿಂತ ಕೆಳಗಿರುವ ತೊಟ್ಟಿಯ ಒಳಮೈಗೆ ಗಾರೆ ಮಾಡಿದೆ. ಆವರಣದೊಳಗೆ ಮೂರು ಗೋರಿಗಳಿವೆ. ಮಸೀದಿಯ ಆವರಣದ ಬದಿಯಲ್ಲಿ ಪೂರ್ವಕ್ಕೆ ಒಂದು ದೊಡ್ಡ ಬಾವಿಯಿದೆ (ಚಿತ್ರ ೭೩). ಆಯತಾಕಾರದ ಬಾವಿಗೆ ಉತ್ತರ ಮತ್ತು ಪೂರ್ವ ದಿಕ್ಕಿನ ಗೋಡೆಗಳ ಬದಿಯಲ್ಲಿ ಮೆಟ್ಟಿಲುಗಳಿವೆ. ಬಾವಿಗೆ ಪ್ರವೇಶ ಉತ್ತರ ದಿಕ್ಕಿನಿಂದ ಇದೆ. ಪಶ್ಚಿಮ ದಿಕ್ಕಿನ ಗೋಡೆಯ ಮೇಲೆ ನೀರೆತ್ತಲು ಏತದ ವ್ಯವಸ್ಥೆಯಿದೆ. ಬಾವಿಯೊಳಕ್ಕೆ ಚಾಚಿದ ಏತದ ತೊಲೆಗಳನ್ನು ಎರಡು ಜೊತೆ ಬೋದಿಗೆಗಳು ಹೊತ್ತಿವೆ. ಕೆಳಗಿನವು ಸುರುಳಿಯಾಕಾರದಲ್ಲಿ ಮತ್ತು ಮೇಲಿನವು ಪುಷ್ಪಾಕಾರದಲ್ಲಿವೆ. ಬಾವಿಯನ್ನುದಪ್ಪ ಕಲ್ಲುಗಳಿಂದ ಕಟ್ಟಿದೆ. ಕೋಟೆ ಬಾಗಿಲ ಪಶ್ಚಿಮಕ್ಕೆ ಮತ್ತೊಂದು ಬಾವಿಯಿದೆ. ಈ ಕೋಟೆಯ ವಾಯವ್ಯ ಭಾಗದಲ್ಲಿ ವೃತ್ತಾಕಾರದ ಕೊತ್ತಳಗಳಿವೆ. ಬಹಮನಿ ಮತ್ತು ಆದಿಲ್ ಶಾಹಿ ಅರಸರ ಕಾಲದಲ್ಲಿ ಇವುಗಳ ನಿರ್ಮಾಣವಾಗಿದೆ.

ಹೊರಕೋಟೆಯ ಒಳಗಿನ ಪ್ರದೇಶದ ದಕ್ಷಿಣಕ್ಕೆ ಬೆಟ್ಟವಿದೆ. ಬೆಟ್ಟವನ್ನು ಸ್ವಲ್ಪ ಹತ್ತಿದ ಮೇಲೆ ಪೂರ್ವ -ಪಶ್ಚಿಮ ದಿಕ್ಕಿನಲ್ಲಿರುವ ಮಧ್ಯದ ಕೋಟೆ ಎದುರಾಗುತ್ತದೆ (ಚಿತ್ರ೭೦). ಇದರಲ್ಲಿ ಚೌಕಾಕಾರದ ಕೊತ್ತಳಗಳಿವೆ. ಇದರ ಬಾಗಿಲು ಶಿಥಿಲವಾಗಿದೆ. ಕೋಟೆಯನ್ನು ದಾಟಿ ಒಳಗೆ ಹೋದಾಗ ಒಂದು ದರ್ಗಾ ಇದೆ.

ಹೊರಕೋಟೆಯು ಪೂರ್ವ ದಿಕ್ಕಿಗೆ ಬೆಟ್ಟದ ಮೇಲೆ ಉತ್ತರ-ದಕ್ಷಿಣವಾಗಿದೆ (ಚಿತ್ರ ೬೯). ಈ ಕೋಟೆಯನ್ನು ಮಧ್ಯದ ಗಾತ್ರದ ಕಲ್ಲುಗಳಿಂದ ಗಾರೆಯನ್ನು ಬಳಸದೆ ಕಟ್ಟಿದೆ. ಈ ಕೋಟೆಯಲ್ಲಿ ಮೂರು ದಿಡ್ಡಿಗಳಿವೆ (ಚಿತ್ರ ೭೧). ಇದರ ಕೊತ್ತಳಗಳು ಚೌಕಾಕಾರ ಮತ್ತು ವೃತ್ತಾಕಾರದಲ್ಲಿವೆ. ಈಶಾನ್ಯ ಮೂಲೆಯ ಚೌಕಾಕಾರದ ಕೊತ್ತಳಕ್ಕೆ ಸೇರಿದಂತೆ ಕಟ್ಟಿದ ಆಂಜನೇಯನ ದೇವಾಲಯವಿದೆ. ದೇವಾಲಯದ ಮುಂದೆ ಚಿಕ್ಕ ದೀಪ



೬೮. ಮಾನ್ವಿ, ಬೆಟ್ಟದ ಮೇಲಿನ ಕಾವಲು ಗೋಪುರದ ಒಳಗಿನ ಮೆಟ್ಟಿಲುಗಳು



೬೯. ಮಾನ್ವಿ, ಪೂರ್ವ ದಿಕ್ಕಿನ ಕೋಟೆ



೭೦. ಮಾನ್ವಿ, ಉತ್ತರ ದಿಕ್ಕಿನ ಮಧ್ಯವ ಕೋಟೆ



೨೮. ಮಾನ್ವಿ, ಪೂರ್ವ ದಿಕ್ಕಿನ ಕೋಟೆಯಲ್ಲಿಯ ದಿಡ್ಡಿ



೨೯. ಮಾನ್ವಿ, ಬೆಟ್ಟದ ಮೇಲಿನ ನೀರಿನ ಕೊಳ




೭೩. ಮಾನ್ವಿ, ಉತ್ತರ ದಿಕ್ಕಿನ ಹೊರಕೋಟೆಯ ಒಳಗಿನ ಬಾವಿ

ಸ್ತಂಭವಿದೆ. ಈ ದೇವರನ್ನು ಕೊತ್ತಳದ ಹನುಮಪ್ಪನೆಂದು ಕರೆಯುತ್ತಾರೆ. ದೇವಾಲಯದ ದಕ್ಷಿಣಕ್ಕಿರುವ ವಕ್ರಾಣಿ ಕೆರೆಯ ಅಂಗಳದಲ್ಲಿರುವ ಹದಿನಾರನೇ ಶತಮಾನದ ಶಾಸನವು ಸಿಂಗಣನು ಆಂಜನೇಯನನ್ನು ಪ್ರತಿಷ್ಠಾಪಿಸಿ, ದೀಪಸ್ತಂಭವನ್ನು ನಿಲ್ಲಿಸಿದನೆಂದು ತಿಳಿಸುತ್ತದೆ.

ಮಧ್ಯದ ಕೋಟೆಯಿಂದ ದಕ್ಷಿಣಕ್ಕೆ ಬೆಟ್ಟ ಹತ್ತುತ್ತ ಮುಂದೆ ಹೋದಾಗ ಮೂರನೇ ಮತ್ತು ಒಳಕೋಟೆ ಎದುರಾಗುತ್ತದೆ. ಬೆಟ್ಟದ ಮೇಲ್ಭಾಗದಲ್ಲಿರುವ ಈ ಕೋಟೆ ಬೆಟ್ಟವನ್ನು ಉತ್ತರ, ಪಶ್ಚಿಮ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಸುತ್ತುವರಿದಿದೆ. ಪೂರ್ವ ದಿಕ್ಕಿನಲ್ಲಿ ಬೆಟ್ಟ ಕಡಿದಾಗಿರುವುದರಿಂದ ಕೋಟೆ ಕಟ್ಟುವ ಅವಶ್ಯಕತೆಯಿಲ್ಲ. ದಪ್ಪ ಕಲ್ಲಿನಿಂದ ಗಾರೆಯನ್ನು ಬಳಸದೆ ಕಟ್ಟಿದ ಕೋಟೆಯಲ್ಲಿ ಚೌಕಾಕಾರದ ಮತ್ತು ವೃತ್ತಾಕಾರದ ಕೊತ್ತಳಗಳಿವೆ. ಕೋಟೆಯ ಬಾಗಿಲು ಶಿಥಿಲವಾಗಿದೆ. ಕೋಟೆಯೊಳಗೆ ಎರಡು ಕೊಳಗಳಿವೆ. ನೀರು ಹರಿದು ಬರುವ ತಗ್ಗಾದ ಭಾಗದಲ್ಲಿ ನೀರು ಮುಂದೆ ಹೋಗದಂತೆ ಗೋಡೆ ಕಟ್ಟಿ ಇವುಗಳನ್ನು ನಿರ್ಮಿಸಿದೆ. ಕೊಳಗಳ ಒಳಭಾಗಕ್ಕೆ ಗಾರೆ ಮಾಡಿದೆ (ಚಿತ್ರ ೬೨). ಕೊಳಗಳ ಹತ್ತಿರ ವೃತ್ತಾಕಾರದ ಒಂದು ಕಣಜವಿದೆ. ಆಗ್ನೇಯ ಮೂಲೆಯಲ್ಲಿ ಬೆಟ್ಟದ ಅತಿ ಎತ್ತರವಾದ ಭಾಗದಲ್ಲಿ ಒಂದು ದೊಡ್ಡ ಕಾವಲು ಗೋಪುರವಿದೆ (ಚಿತ್ರ ೬೭). ಇದಕ್ಕೆ ಪೂರ್ವ ದಿಕ್ಕಿನಲ್ಲಿ ಬಾಗಿಲಿದೆ. ಚೌಕಟ್ಟಿಲ್ಲದ ಬಾಗಿಲಿಗೆ ಸರಳವಾದ ಬೋದಿಗೆಗಳಿವೆ. ದಪ್ಪ ಕಲ್ಲುಗಳಿಂದ ಸಂದಿಗಳಿಲ್ಲದಂತೆ ಈ ಕಟ್ಟಡವನ್ನು ಕಟ್ಟಿದೆ. ಕಟ್ಟಡದ ಮಾಳಿಗೆ ಮೇಲೆ ಹೋಗಲು ಒಳಗಿನಿಂದ ವಕ್ರಾಕಾರದಲ್ಲಿ ಮೆಟ್ಟಿಲುಗಳಿವೆ (ಚಿತ್ರ ೬೮).

### ಟಿಪ್ಪಣಿಗಳು

೧. Patil Channabasappa S. and Vinoda C. Patil (Eds), 1998, *Inscriptions Raichur District,* No. 346; *ARIE,* 1953-54,No. B 256; *HAS,* 18, No. 5.

೨. *ಅದೇ,* No. 289; *ARIE,*1962-63, No. B 815; *EI*, XXXVII, pp. 113-116.

೩. *ಅದೇ,* No. 300; *ARIE,* 1961-62, No. B 560.

೪. Desai P.B., Shrinivas H. Ritti and B.R. Gopal, 1981, *A History of Karnataka,* p. 274.

೫. *EC,* V, Channarayapatna 179.

೬. Patil Channabasappa S. and Vinoda C. Patil (Eds), *ಪೂರ್ವೋಕ್ತ,* No. 420; *ARIE,* 1957-58, No. B 383; *APGAS,* 3, No. 78.

೭. *ಅದೇ,* No. 359; *ARIE,* 1961-62, No. D 215; *EIAPS,* 1962, pp. 56-58, pl. xvi (a).

೮. Ramachandraiya, 1953, *Studies on Krsnadevaraya of Vijayanagara,* pp. 13, 54-56.

೯. Patil Channabasappa S. and Vinoda C. Patil, *ಪೂರ್ವೋಕ್ತ,* No. 288; *ARIE,* 1961-62, No. B 552.

೧೦. *ಅದೇ,* No. 357; ARIE, 1961-62, No. B 601.

೧೧. *EC,* III (R), Nanjanagud.

೧೨. Patil Channabasappa S. and Vinoda C. Patil, *ಪೂರ್ವೋಕ್ತ,* No. 358; *ARIE,* 1961-62, No. B 602.

೧೩. *ಅದೇ,* Nos. 347-353; *ARIE,* 1961-62, Nos. B 591-597.

# ೯. ಕೋಟೆಕಲ್ಲು

ಕೋಟೆಕಲ್ಲು ಮಾನ್ವಿ ತಾಲೂಕಿನಲ್ಲಿ ಮಾನ್ವಿಯಿಂದ ವಾಯವ್ಯಕ್ಕೆ ೪೦ ಕಿ.ಮೀ. ದೂರದಲ್ಲಿದೆ. ಇದು ಲಿಂಗಸುಗೂರು-ರಾಯಚೂರು ರಸ್ತೆಯಲ್ಲಿ ಲಿಂಗಸುಗೂರಿನಿಂದ ಪೂರ್ವಕ್ಕೆ ೧೮ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೬° ೬' ಉತ್ತರ ಮತ್ತು ರೇಖಾಂಶ ೭೬° ೪೨' ಪೂರ್ವದಲ್ಲಿದೆ. ಈ ಚಿಕ್ಕ ಗ್ರಾಮದಲ್ಲಿ ಕೋಟೆ -ಕೊತ್ತಳಗಳು, ದೇವಾಲಯಗಳು, ಬಾವಿ, ವೀರಗಲ್ಲುಗಳು ಮುಂತಾದವುಗಳಿವೆ. ಕೋಟೆ ಕಲ್ಲಿನ ಬೆಟ್ಟದ ಇಳಿಜಾರಿನಲ್ಲಿ ಪ್ರಾಗೈತಿಹಾಸಿಕ ಕಾಲದ ಆಯುಧಗಳು, ಮಡಕೆ ಚೂರುಗಳು, ಕಬ್ಬಿಣದ ಕಿಟ್ಟ ಮುಂತಾದವು ದೊರೆತಿವೆ.

ಬೆಟ್ಟದ ಬುಡದಲ್ಲಿರುವ ಊರನ್ನು ಕೋಟೆ ಸುತ್ತುವರಿದಿದೆ. ಪಕ್ಕದ ಬೆಟ್ಟದ ಮೇಲೆಯೂ ಕೋಟೆಯಿದೆ. ಊರಿನ ಉತ್ತರಕ್ಕೆ ಮತ್ತು ಪಶ್ಚಿಮದ ಅರ್ಧ ಭಾಗದಲ್ಲಿ ಬೆಟ್ಟವಿರುವುದರಿಂದ ಅಲ್ಲಿ ಹೊರಕೋಟೆಯನ್ನು ಬೆಟ್ಟದ ಮೇಲೆ ಮತ್ತು ಉಳಿದ ಭಾಗದಲ್ಲಿ ನೆಲದ ಮೇಲೆ ಕಟ್ಟಿದೆ (ಚಿತ್ರ ೭೪). ಬೆಟ್ಟದ ಮೇಲೆ ಒಂದು ಒಳ ಕೋಟೆಯಿದೆ. ಪೂರ್ವ ದಿಕ್ಕಿನಲ್ಲಿ ಬಾಗಿಲಿನ ಉತ್ತರ ಭಾಗದ ಕೋಟೆ ಭಾಗಶಃ ಉಳಿದಿದೆ. ಇದರ ಪೂರ್ವಕ್ಕೆ ಮತ್ತೊಂದು ಸುತ್ತು ಇದ್ದ ಕೋಟೆಯ ಬಾಗಿಲು ಮತ್ತು ಅದರ ಉತ್ತರ ಭಾಗದಲ್ಲಿಯ ಸ್ವಲ್ಪ ಕೋಟೆ ಮಾತ್ರ ಉಳಿದಿದೆ. ಕೋಟೆಗೆ ಪೂರ್ವ ದಿಕ್ಕಿನಲ್ಲಿ ಎರಡು, ಪಶ್ಚಿಮ ದಿಕ್ಕಿನಲ್ಲಿ ಒಂದು ಮತ್ತು ಉತ್ತರ ದಿಕ್ಕಿನಲ್ಲಿ ಒಂದು ಬಾಗಿಲುಗಳಿವೆ. ಕೋಟೆಗೋಡೆಯಲ್ಲಿ ವೃತ್ತಾಕಾರದ ಕೊತ್ತಳಗಳು ಮತ್ತು ಬೆಟ್ಟದ ಮೇಲೆ ವೃತ್ತಾಕಾರದ ಒಂಟಿ ಕೊತ್ತಳಗಳು ಇವೆ (ಚಿತ್ರ ೭೬).

ಪೂರ್ವ ದಿಕ್ಕಿಗಿರುವ ಎರಡು ಬಾಗಿಲುಗಳಲ್ಲಿ ಹೊರಬಾಗಿಲಿನ ಕಟ್ಟಡ ಶಿಥಿಲವಾಗಿದ್ದು ಪ್ರವೇಶ ಮಾತ್ರ ಉಳಿದಿದೆ. ಒಳ ಬಾಗಿಲಿಗೆ ಚೌಕಟ್ಟು, ಛಾವಣಿ ಇಲ್ಲ. ಬಾಗಿಲೊಳಗೆ ಪ್ರವೇಶದ ಬದಿಗಳಲ್ಲಿ ಎತ್ತರವಾದ ಕಟ್ಟೆಗಳಿವೆ (ಚಿತ್ರ ೭೫). ಪಶ್ಚಿಮ ಮತ್ತು ಉತ್ತರ ದಿಕ್ಕಿನ ಬಾಗಿಲುಗಳಿಗೂ ಚೌಕಟ್ಟು, ಛಾವಣಿಗಳಿಲ್ಲ. ಕೋಟೆಗೋಡೆಯನ್ನು ನೈಸರ್ಗಿಕವಾಗಿ ದೊರೆಯುವ ಮಧ್ಯಮ ಗಾತ್ರದ ಮತ್ತು ಚಿಕ್ಕ ಕಲ್ಲುಗಳಿಂದ ಕಟ್ಟಿದೆ. ಈ ಕಲ್ಲುಗಳ ಒಂದು ಅಥವಾ ಎರಡು ಬದಿಗಳನ್ನು ಮಾತ್ರ ಕತ್ತರಿಸಿ ಉಪಯೋಗಿಸಿರುವುದರಿಂದ ಕಲ್ಲುಗಳ ಮಧ್ಯದಲ್ಲಿ ದೊಡ್ಡ ಸಂದಿಗಳಾಗಿವೆ. ಸಂದಿಗಳಲ್ಲಿ ವಿವಿಧ ಗಾತ್ರದ ಕಲ್ಲಿನ ಚಕ್ಕೆಗಳನ್ನು ಬಳಸಿದೆ (ಚಿತ್ರ ೭೫) ಗೋಡೆಗಳ ಮೇಲ್ಭಾಗದಲ್ಲಿ ಬಂದೂಕು ಕಿಂಡಿಗಳಿವೆ.




೭೪. ಕೋಟೆಕಲ್ಲು ಕೋಟೆ : ೧. ಬಾಗಿಲು, ೨. ದ್ಯಾಮವ್ವನ ಗುಡಿ, ೩. ಹನುಮಂತನ ಗುಡಿ, ೪. ಒಂಟಿ ಕೊತ್ತಳ, ೫. ಬೆಟ್ಟದ ಮೇಲಿನ ಬಾಗಿಲು, ೬. ಬಾವಿ, ೭. ಯಲ್ಲಮ್ಮನ ಗುಡಿ, ೮. ಬಸವಣ್ಣ ಗುಡಿ, ೯. ಅಮರಯ್ಯನ ಗುಡಿ, ೧೦. ಬಾಗಿಲು, ೧೧. ಬಾಗಿಲು

ನೆಲಮಟ್ಟದ ಕೋಟೆಯ ಒಳಗೆ ಜನ ವಾಸವಾಗಿದ್ದಾರೆ. ಪೂರ್ವ ಬಾಗಿಲಿನ ಹತ್ತಿರ ಬಸವಣ್ಣ ಮತ್ತು ಅಮರಯ್ಯ ದೇವಾಲಯಗಳಿವೆ. ಅಮರಯ್ಯ ಅಥವಾ ಅಮರೇಶ್ವರ ದೇವಾಲಯದ ಎದುರಿಗೆ ನಂದಿ ಇದೆ. ಕಟ್ಟೆಯ ಮೇಲಿರುವ ಈ ದೇವಾಲಯದಲ್ಲಿ ಮರದ ಕಂಬಗಳಿವೆ. ಬಸವಣ್ಣನ ದೇವಾಲಯಕ್ಕೆ ಸೇರಿದಂತೆ ಪಕ್ಕದಲ್ಲಿ ಆಂಜನೇಯನ ದೇವಾಲಯವಿದೆ. ದೇವಾಲಯದ ಮುಂದೆ ದೀಪ ಸ್ತಂಭವಿದೆ. ದಕ್ಷಿಣ ಕೋಟೆ ಗೋಡೆಯ ಹತ್ತಿರ ಯಲ್ಲಮ್ಮನ ಗುಡಿ ಮತ್ತು ಪಶ್ಚಿಮ ಬಾಗಿಲಿನ ಹತ್ತಿರ ದ್ಯಾಮವ್ವನ ಗುಡಿ ಇವೆ. ಉತ್ತರ ಕೋಟೆಗೋಡೆಯ ಹತ್ತಿರ ಒಂದು ಬಾವಿಯಿದೆ. ಬಾವಿಯ ಪಶ್ಚಿಮಕ್ಕೆ ಒಂದು ಮಸೀದಿಯಿದೆ.

ಬೆಟ್ಟದ ಮೇಲಿನ ಕೋಟೆಯೊಳಗೆ ಅನೇಕ ಕಟ್ಟಡಗಳ ಅವಶೇಷಗಳಿವೆ. ಮೊದಲು ಜನರು ಇಲ್ಲಿ ವಾಸಮಾಡುತ್ತಿದ್ದರು. ನಂತರದಲ್ಲಿ ಬೆಟ್ಟದ ಕೆಳಭಾಗಕ್ಕೆ ಹೋಗಿದ್ದಾರೆ. ಬೆಟ್ಟದ ಮೇಲಿನ ಚೌಕಾಕಾರದ ಒಂದು ಕಟ್ಟಡದಲ್ಲಿ ನೈಸರ್ಗಿಕ ಗುಂಡುಕಲ್ಲನ್ನು ಈರಣ್ಣ ದೇವರೆಂದು ಪೂಜಿಸುತ್ತಾರೆ. ಪಶ್ಚಿಮ ಭಾಗದ ಕೋಟೆಗೋಡೆಯ ಹತ್ತಿರ ಹನುಮಂತನ ಗುಡಿಯಿದೆ. ಬೆಟ್ಟದ ಮೇಲೆ ಕೋಟೆಯ ಒಳಭಾಗದಲ್ಲಿ ಕೋಟೆ ಗೋಡೆಯ ಹತ್ತಿರ ವೃತ್ತಾಕಾರದ ಒಂದು ಒಂಟಿ ಕೊತ್ತಳವಿದೆ. ಕೋಟೆಯ ಹೊರಗೆ ಈಶಾನ್ಯ ಭಾಗದಲ್ಲಿ ಎತ್ತರದ ಸ್ಥಳಗಳಲ್ಲಿ ವೃತ್ತಾಕಾರದ ಮೂರು ಒಂಟಿ ಕೊತ್ತಳಗಳಿವೆ. ಬೆಟ್ಟದ ಮೇಲೆ ಪಶ್ಚಿಮ ಭಾಗದಲ್ಲಿ ಸಹ ಕಟ್ಟಡಗಳ ಅವಶೇಷಗಳಿವೆ. ಇಲ್ಲಿಯೂ ಹಿಂದೆ ಜನರು ವಾಸಿಸುತ್ತಿದ್ದರು.

ಮಧ್ಯಮ ಮತ್ತು ಚಿಕ್ಕ ಗಾತ್ರದ ಕಲ್ಲುಗಳನ್ನು ಬಳಸಿ ಬಂದೂಕು ಕಿಂಡಿಗಳನ್ನು ಬಿಟ್ಟು ಕಟ್ಟಿರುವ ಈ ಕೋಟೆಯು ಹದಿನೇಳು-ಹದಿನೆಂಟನೇ ಶತಮಾನದ್ದು.

ಕೋಟೆಯ ಹೊರಗೆ ಪಶ್ಚಿಮ ಬಾಗಿಲಿನ ಪಶ್ಚಿಮಕ್ಕೆ ಹೊಲದಲ್ಲಿ ಮೂರು ವೀರಗಲ್ಲುಗಳಿವೆ. ಕೋಟೆಯನ್ನು ರಕ್ಷಿಸುವಾಗ ಪ್ರಾಣ ತೆತ್ತವರ ನೆನಪಿಗಾಗಿ ಇವುಗಳನ್ನು ನಿಲ್ಲಿಸಿದೆ. ಒಂದು ವೀರಗಲ್ಲಿನಲ್ಲಿ ಇಬ್ಬರು ವೀರರಿದ್ದಾರೆ. ಒಬ್ಬನು ಮೇಲೆತ್ತಿದ್ದ ಕೈಗಳಲ್ಲಿ ಕತ್ತಿ ಗುರಾಣಿಗಳನ್ನು ಹಿಡಿದಿದ್ದಾನೆ. ಮತ್ತೊಬ್ಬನು ಎಡಗೈಯಲ್ಲಿ ಉದ್ದವಾದ ಬಂದೂಕನ್ನು ಹಿಡಿದಿದ್ದಾನೆ. ಎರಡನೇ ವೀರಗಲ್ಲಿನಲ್ಲಿರುವ ವೀರನು ಸಹ ಎಡಗೈಯಲ್ಲಿ ಬಂದೂಕನ್ನು ಹಿಡಿದಿದ್ದಾನೆ. ಮೂರನೇ ವೀರಗಲ್ಲಿನಲ್ಲಿ ವೀರನು ಕುದುರೆಯ ಮೇಲೆ ಕುಳಿತು, ಎಡಗೈಯಲ್ಲಿ ಕುದುರೆಯ ಲಗಾಮು ಮತ್ತು ಬಲಗೈಯಲ್ಲಿ ಕತ್ತಿಯನ್ನು ಹಿಡಿದಿದ್ದಾನೆ.

# ೧೦. ಕುರುಕುಂದ

ಕುರುಕುಂದ ಮಾನ್ವಿ ತಾಲೂಕಿನಲ್ಲಿ ಮಾನ್ವಿಯ ವಾಯವ್ಯಕ್ಕೆ ೪೫ ಕಿ.ಮೀ.ದೂರದಲ್ಲಿ ಅಕ್ಷಾಂಶ ೧೬° ೧೦' ಮತ್ತು ಉತ್ತರ ರೇಖಾಂಶ ೭೪° ೫೨' ಪೂರ್ವದಲ್ಲಿರುವ ಚಿಕ್ಕ ಗ್ರಾಮ ಇಲ್ಲಿ ಕೋಟೆ, ದೇವಾಲಯ, ಬಾವಿ ಮುಂತಾದವುಗಳಿವೆ.

ಗ್ರಾಮದ ಪಕ್ಕದ ಬೆಟ್ಟದ ಮೇಲೆ ಎರಡು ಸುತ್ತಿನ ಚಿಕ್ಕ ಕೋಟೆಯಿದೆ (ಚಿತ್ರ ೭೭). ಕೋಟೆಯನ್ನು ಮಧ್ಯಮ ಮತ್ತು ಚಿಕ್ಕ ಗಾತ್ರದ ಅನಿಯಮಿತಾಕಾರದ ಕಲ್ಲುಗಳಿಂದ ಗಾರೆಯನ್ನು ಬಳಸದೆ ಕಟ್ಟಿದೆ (ಚಿತ್ರ ೭೮). ಹೊರ ಕೋಟೆಯಲ್ಲಿ ಮೂರು ವೃತ್ತಾಕಾರದ ಕೊತ್ತಳಗಳಿವೆ. ಈ ಕೋಟೆಗೆ ಉತ್ತರ ದಿಕ್ಕಿನಲ್ಲಿದ್ದ ಬಾಗಿಲು ಶಿಥಿಲವಾಗಿ, ಪಕ್ಕದ ಕೋಟೆಗೋಡೆಯೂ ಬಿದ್ದಿದೆ. ಉತ್ತರ ದಿಕ್ಕಿನ ಗೋಡೆಗೆ ಸೇರಿದಂತೆ ಒಂದು ಕಟ್ಟಡದ ಅವಶೇಷಗಳಿವೆ. ಒಳಕೋಟೆಗೆ ಸೇರಿನಂತೆ ಪಶ್ಚಿಮಕ್ಕೆ ಅರಮನೆಯಂತಹ ದೊಡ್ಡ ಕಟ್ಟಡವಿದೆ. ದರ್ಬಾರ್ ಎಂದು ಕರೆಯಲಾಗುವ ಈ ಕಟ್ಟಡವನ್ನು ಚಿಕ್ಕ ಕಲ್ಲುಗಳಿಂದ ಗಾರೆಯನ್ನು ಬಳಸದೆ ಕಟ್ಟಿದೆ (ಚಿತ್ರ ೭೯). ಕಟ್ಟಡವನ್ನು ಎತ್ತರದ ವೇದಿಕೆಯ ಮೇಲೆ ಕಟ್ಟಿದೆ. ವೇದಿಕೆಗೆ ಪಶ್ಚಿಮ ದಿಕ್ಕಿನಲ್ಲಿ ಪ್ರವೇಶವಿದೆ. ಬಾಗಿಲನ್ನು ಪ್ರವೇಶಿಸಿ ಬಲಕ್ಕೆ ತಿರುಗಿ ಗೋಡೆ ಮಧ್ಯದಲ್ಲಿ ಹತ್ತುತ್ತ ಮೇಲಕ್ಕೆ ಬಂದು ಎಡಕ್ಕೆ ತಿರುಗಿದಾಗ ಕಟ್ಟಡದ ಒಳಭಾಗವನ್ನು ಸೇರುತ್ತೇವೆ. ಚೌಕಾಕಾರದ ಕಟ್ಟಡದ ಪೂರ್ವ ಗೋಡೆಯಲ್ಲಿ ತೆರೆದ ದೊಡ್ಡ ಕಮಾನಿದೆ. ಇದರ ಎರಡು ಬದಿಗೆ ಒಂದೊಂದು ಗೂಡಿದೆ. ಪ್ರತಿ ಗೂಡನ್ನು ಎರಡು ಭಾಗದಲ್ಲಿ ವಿಂಗಡಿಸಿದೆ. ಮೇಲ್ಭಾಗ ಕಮಾನಿನಾಕಾರದಲ್ಲಿ ಮತ್ತು ಕೆಳಭಾಗ ಆಯತಾಕಾರದಲ್ಲಿ ಇವೆ. ದಕ್ಷಿಣ ಗೋಡೆಯಲ್ಲಿ ಎರಡು ತೆರೆದ ಕಮಾನುಗಳಿವೆ. ಉತ್ತರ ಗೋಡೆಯಲ್ಲಿ ಕಮಾನುಗಳಿಲ್ಲ. ಕಟ್ಟಡದ ಛಾವಣಿ ಬಿದ್ದು ಹೋಗಿದೆ.

ಕೋಟೆಯ ಪೂರ್ವಕ್ಕೆ ಮಲ್ಲಿಕಾರ್ಜುನ ದೇವಾಲಯ ಮತ್ತು ಒಂದು ಬಾವಿ ಇವೆ. ಕಲ್ಲಿನಿಂದ ಕಟ್ಟಿ ಗಾರೆ ಮಾಡಿದ ದೇವಾಲಯದ ಕೈಪಿಡಿ ಗೋಡೆಯಲ್ಲಿ ತೆನೆಗಳಿವೆ. ಒಳಗೆ ವೀರಭದ್ರ ಮತ್ತು ಲಿಂಗಗಳಿವೆ. ಮೊದಲು ವೀರಭದ್ರ ಶಿಲ್ಪವನ್ನು ಪ್ರತಿಷ್ಠಾಪಿಸಿ ಅದರ ಮುಂದೆ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ದೇವಾಲಯದ ಪಕ್ಕದಲ್ಲಿ ಉತ್ತರಕ್ಕೆ ಚೌಕಾಕಾರದ ಬಾವಿಯಿದೆ. ಚೆನ್ನಾಗಿ ಕತ್ತರಿಸಿದ ಚೌಕ ಮತ್ತು ಆಯತಾಕಾರದ ಚಿಕ್ಕ ಕಲ್ಲುಗಳಿಂದ ಕಟ್ಟಿದ ಬಾವಿಗೆ ಉತ್ತರ ದಿಕ್ಕಿನಲ್ಲಿ ಮೆಟ್ಟಿಲುಗಳಿವೆ. ಮೊದಲು ಉತ್ತರದಿಂದ ದಕ್ಷಿಣಕ್ಕೆ, ನಂತರ ಪೂರ್ವದಿಂದ ಪಶ್ಚಿಮಕ್ಕೆ, ಕೊನೆಗೆ ಪಶ್ಚಿಮದಿಂದ ಪೂರ್ವಕ್ಕೆ ಇಳಿಯಬೇಕು. ಈ ಬಾವಿಯನ್ನು ರಾಜಾ




೭೭. ಕುರುಕುಂದ ಕೋಟೆ: ೧. ಬಾಗಿಲು, ೨. ಹನುಮಂತನ ಗುಡಿ, ೩. ಕಟ್ಟಡದ ರಾಜವಾಡೆ, ೪. ಮಲ್ಲಿಕಾರ್ಜುನ ಗುಡಿ, ೫. ಬಾವಿ, ೬. ಒಂಟಿ ಕೊತ್ತಳ, ೭. ಒಂಟಿ ಕೊತ್ತಳ



೨೮. ಕುರುಕುಂದ, ಕೋಟೆ ಗೋಡೆ



೨೯. ಕುರುಕುಂದ, ಕೋಟೆಯೊಳಗಿನ ಕಟ್ಟಡ

ನೀಲಕಂಠರಾಯ ಬಹಾದ್ದೂರ ಕ್ರಿ.ಶ. ೧೮೬೨ರಲ್ಲಿ ಕಟ್ಟಿಸಿದನೆಂದು ಫಲಕದಲ್ಲಿ ಬರೆಯಲಾಗಿದೆ.

ಕೋಟೆಯ ಪೂರ್ವಕ್ಕೆ ಮತ್ತು ಈಶಾನ್ಯಕ್ಕೆ ಬೆಟ್ಟದ ಮೇಲೆ ಎರಡು ವೃತ್ತಾಕಾರದ ಒಂಟಿ ಕೊತ್ತಳಗಳಿವೆ. ಕೋಟೆಯ ಉತ್ತರಕ್ಕೆ ಶಿಥಿಲವಾದ ಊರ ಬಾಗಿಲಿದೆ. ಇದರ ದಕ್ಷಿಣಕ್ಕೆ ಆಂಜನೇಯನ ದೇವಾಲಯವಿದೆ.

ಚಿಕ್ಕ ಕಲ್ಲುಗಳಿಂದ ಕಟ್ಟಿದ ಈ ಕೋಟೆಯ ಕಾಲ ಹದಿನೇಳು-ಹದಿನೆಂಟನೇ ಶತಮಾನ.

# ೧೧. ಗೋಲಪಲ್ಲಿ

ಗೋಲಪಲ್ಲಿ ಲಿಂಗಸುಗೂರು ತಾಲೂಕಿನಲ್ಲಿ ಲಿಂಗಸುಗೂರಿನಿಂದ ಈಶಾನ್ಯಕ್ಕೆ ೨೩ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೬° ೨೧' ಉತ್ತರ ಮತ್ತು ರೇಖಾಂಶ ೭೬° ೪೦' ಪೂರ್ವದಲ್ಲಿರುವ ಚಿಕ್ಕ ಗ್ರಾಮ. ಇದರ ಹತ್ತಿರ ಶಿಥಿಲಾವಸ್ಥೆಯಲ್ಲಿರುವ ಕೋಟೆಯಿದೆ.

ಕೋಟೆಯ ಅರ್ಧ ಭಾಗ ನೆಲದ ಮಟ್ಟದಲ್ಲಿದ್ದು, ಅರ್ಧ ಭಾಗ ಬೆಟ್ಟದ ಮೇಲೆ ಇದೆ (ಚಿತ್ರ ೮೦). ಕೋಟೆಯನ್ನು ಮಧ್ಯಮ ಮತ್ತು ಚಿಕ್ಕ ಗಾತ್ರದ ಕಲ್ಲುಗಳಿಂದ ಕಟ್ಟಿದೆ. ಕಲ್ಲುಗಳ ಮಧ್ಯದಲ್ಲಿ ಉಂಟಾದ ದೊಡ್ಡ ಸಂದಿಗಳಲ್ಲಿ ಕಲ್ಲಿನ ಚಕ್ಕೆಗಳಿವೆ (ಚಿತ್ರ ೮೩). ಕೋಟೆಗೋಡೆಯಲ್ಲಿ ಪೂರ್ವ ದಿಕ್ಕಿಗೆ ಸುಸ್ಥಿತಿಯಲ್ಲಿರುವ ಗೋಡೆಯ ಕಲ್ಲುಗಳನ್ನು ಮುಂದೆ ಚಾಚಿ ಬಾಗಿಲ ಚೌಕಟ್ಟಿನ ತೋಳುಗಳನ್ನು ಮಾಡಿದೆ. ಮೇಲೆ ಅದೇ ರೀತಿ ಮುಂದೆ ಚಾಚಿದ ಬೋದಿಗೆಗಳು, ಅವುಗಳ ಮೇಲೆ ಉತ್ತರಂಗ ಇವೆ. ಚೌಕಟ್ಟಿನ ಮೇಲೆ ಕುರುಡು ಕಮಾನು ಇದೆ. ಕೈಪಿಡಿ ಗೋಡೆಯಲ್ಲಿ ತೆನೆಗಳು ಮತ್ತು ಬಂದೂಕು ಕಿಂಡಿಗಳಿವೆ. ಮೂಲೆಯಲ್ಲಿರುವ ಎರಡು ತೆನೆಗಳು ಮಾತ್ರ ಉಳಿದಿವೆ. ಬಾಗಿಲ ಗೋಡೆಯ ಸಂದಿಗಳಿಗೆ ಗಾರೆ ಮಾಡಿದೆ (ಚಿತ್ರ ೮೨). ಬಾಗಿಲ ಪ್ರವೇಶದ ಪಕ್ಕಗಳಲ್ಲಿ ಕಟ್ಟೆಗಳಿವೆ. ಕಟ್ಟೆಗಳನ್ನು ಹತ್ತಲು ಪ್ರವೇಶದಿಂದ ಮೆಟ್ಟಿಲುಗಳಿವೆ. ಪ್ರತಿ ಕಟ್ಟೆಯ ಹಿಂಬದಿಯ ಗೋಡೆಯಲ್ಲಿ ಮೂರು ಗೂಡುಗಳಿವೆ (ಚಿತ್ರ ೮೧). ಪ್ರವೇಶದ ಮುಂಭಾಗದಲ್ಲಿ ಚೌಕಟ್ಟಿದ್ದರೆ ಹಿಂಭಾಗದಲ್ಲಿ ಕಮಾನಿದೆ. ಕೋಟೆಯ ಗೋಡೆಯಲ್ಲಿ ಕೊತ್ತಳಗಳಿಲ್ಲ. ಕೋಟೆಯ ಒಳಭಾಗದಲ್ಲಿ ಗೋಡೆಯ ಪಕ್ಕದಲ್ಲಿ ಮೂರು ಮತ್ತು ಗೋಡೆಯಿಂದ ದೂರದಲ್ಲಿ ಮೂರು, ಒಟ್ಟು ಆರು ವೃತ್ತಾಕಾರದ ಒಂಟಿ ಕೊತ್ತಳಗಳಿವೆ. ಕೋಟೆಯ ಒಳಭಾಗದಲ್ಲಿ ಮೂರು ದೊಡ್ಡ ಕಟ್ಟಡಗಳ ಮತ್ತು ಕೆಲವು ಚಿಕ್ಕ ಕಟ್ಟಡಗಳ ಅವಶೇಷಗಳಿವೆ. ಕಟ್ಟಡಗಳು ಬಹಳಷ್ಟು ಹಾಳಾಗಿರುವುದರಿಂದ ಅವುಗಳ ವಿವರಗಳು ತಿಳಿಯುವುದಿಲ್ಲ. ಮಧ್ಯಮ ಮತ್ತು ಚಿಕ್ಕ ಗಾತ್ರದ ಕಲ್ಲುಗಳಿಂದ ಕಟ್ಟಿದ ಈ ಕೋಟೆ ಹದಿನೇಳು-ಹದಿನೆಂಟನೇ ಶತಮಾನದ್ದು.




೮೦. ಗೋಲಪಲ್ಲಿಕೋಟೆ: ೧. ಬಾಗಿಲು, ೨. ಕಟ್ಟಡ, ೩. ಒಂಟಿ ಕೊತ್ತಳ, ೪. ಕಟ್ಟಡ, ೫. ಕೊತ್ತಳ, ೬. ಕೊತ್ತಳ, ೭. ಕೊತ್ತಳ




೮೧. ಗೋಲಪಲ್ಲಿ, ಬಾಗಿಲು



೮೩. ಗೋಲಪಲ್ಲಿ, ಪೂರ್ವದಿಕ್ಕಿನ ಬಾಗಿಲು



೮೪. ಗೋಲಪಲ್ಲಿ, ಪೂರ್ವದಿಕ್ಕಿನ ಕೋಟೆ

## ೧೨. ಗುಡಗುಂಟಿ

ಗುಡಗುಂಟಿ ಲಿಂಗಸುಗೂರು ತಾಲೂಕಿನಲ್ಲಿ ಲಿಂಗಸುಗೂರಿನಿಂದ ಈಶಾನ್ಯಕ್ಕೆ ೨೩ ಕಿ.ಮೀ. ದೂರದಲ್ಲಿ, ಅಕ್ಷಾಂಶ ೧೬° ೧೮' ಉತ್ತರ ಮತ್ತು ರೇಖಾಂಶ ೭೬° ೩೮' ಪೂರ್ವದಲ್ಲಿದೆ. ಮೂವತ್ತು ಹಳ್ಳಿಗಳ ಚಿಕ್ಕ ಸಂಸ್ಥಾನವಾಗಿ ೧೯೪೮ರ ವರೆಗೆ ಮೆರೆದ ಈ ಗ್ರಾಮದಲ್ಲಿ ಕೋಟೆ, ದೇವಾಲಯಗಳು, ಮಸೀದಿ, ಶಾಸನಗಳು ಮುಂತಾದವುಗಳಿವೆ.

### ಐತಿಹಾಸಿಕ ಹಿನ್ನೆಲೆ

ಹದಿನೈದು-ಹದಿನಾರನೇ ಶತಮಾನಗಳಲ್ಲಿ ಗುಡಗುಂಟಿಯ ನಾಯಕರು ವಿಜಯನಗರ ಅರಸರು ಮತ್ತು ಆದಿಲ್ ಶಾಹೀ ಅರಸರಿಗೆ ಸಾಮಂತರಾಗಿದ್ದರು. ಗುಡಗುಂಟಿಯ ನಾಯಕ ಮನೆತನದವರು ಕನಕಗಿರಿ ಮತ್ತು ಸುರಪುರದ ನಾಯಕ ಮನೆತನದವರ ಸಂಬಂಧಿಕರಾಗಿದ್ದರು. ನಂತರದಲ್ಲಿ ಈ ಸಂಸ್ಥಾನ ಹೈದರಾಬಾದಿನ ನಿಜಾಮನ ಆಳ್ವಿಕೆಗೆ ಒಳಪಟ್ಟು ೧೯೪೮ರ ವರೆಗೆ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿತ್ತು.[೧] ಇಲ್ಲಿಯ ಆಶೂರ್ ಖಾನದಲ್ಲಿಯ ಕ್ರಿ.ಶ. ೧೮೪೮-೪೯ರ ಒಂದು ಉರ್ದು ಶಾಸನವು ಮಹತ್ವಪೂರ್ಣವಾದ ವಿಷಯವನ್ನು ನೀಡುತ್ತದೆ. ಇದರ ಪ್ರಕಾರ ಬಿಜಾಪುರದ ಯೂಸುಫ್ ಆದಿಲ್ ಶಾಹನು ಟರ್ಕಿಯ ಒಬ್ಬ ಅರಸನ ಮಗನಾಗಿದ್ದನು. ಅವನ ನಿಧನದ ನಂತರ ಮಂತ್ರಿಯಾಗಿದ್ದ ಕಮಾಲ್ ದಕ್ಕನೀ ಮಕ್ಕಾಕ್ಕೆ ಹೋಗಿ ಕರ್ಬಲ ಯುದ್ಧದ ತಗಡಿನ ತುಂಡೊಂದನ್ನು ಕ್ರಿ.ಶ. ೧೫೦೫ರಲ್ಲಿ ಬಿಜಾಪುರಕ್ಕೆ ತಂದನು. ಅದರಿಂದ ಒಂದು ಆಲಮ್ (ಪಂಜಾ) ಮಾಡಿಸಿ ಆಶೂರ್‌ಖಾನದದಲ್ಲಿ ಇಟ್ಟನು. ನಂತರ ಕ್ರಿ.ಶ. ೧೬೫೬-೫೭ರಲ್ಲಿ ಅದನ್ನು ಗುಡಗುಂಟಿಯ ಕೋಟೆಯೊಳಗಿನ ಆಶೂರ್‌ಖಾನಕ್ಕಾಗಿ ಬಿಜಾಪುರದಿಂದ ತರಲಾಯಿತು.[೨] ಕ್ರಿ.ಶ. ೧೬೫೬-೫೭ರಲ್ಲಿ ಗುಡಗುಂಟಿಯಲ್ಲಿ ಕೋಟೆಯಿದ್ದುದು ಶಾಸನದಿಂದ ಸ್ಪಷ್ಟವಾಗುತ್ತದೆ. ಇಲ್ಲಿಯ ಜಾಮೀ ಮಸೀದಿಯಲ್ಲಿರುವ ಶಾಸನದಿಂದ ಮಸೀದಿಯನ್ನು ಕ್ರಿ.ಶ. ೧೯೧೫-೧೬ರಲ್ಲಿ ಸಯ್ಯದ್ ವಲೀಉದ್ದೀನ್ ಕಟ್ಟಿಸಿದನೆಂದು ತಿಳಿಯುತ್ತದೆ.[೩]

### ಕೋಟೆ

ಗುಡಗುಂಟಿಯಲ್ಲಿ ಎರಡು ಸುತ್ತಿನ ಸುಮಾರಾಗಿ ಚೌಕಾಕಾರವಾಗಿರುವ ಕೋಟೆಯಿದೆ. ನೆಲಮಟ್ಟದಲ್ಲಿರುವ ಕೋಟೆ ಬೆಟ್ಟದ ಮೇಲೂ ಚಾಚಿಕೊಂಡಿದೆ (ಚಿತ್ರ ೮೪). ಕೋಟೆಯನ್ನು ಮಧ್ಯಮ ಮತ್ತು ಚಿಕ್ಕ ಗಾತ್ರದ ಅನಿಯಮಿತಾಕಾರದ ಕಲ್ಲುಗಳಿಂದ ಕಟ್ಟಿದೆ. ಕಲ್ಲುಗಳ ಮಧ್ಯದ ಅಗಲವಾದ ಸಂದಿಗಳಲ್ಲಿ ಅವಶ್ಯಕತೆಗೆ




೮೪. ಗುಡಗುಂಟಿ ಕೋಟೆ: ೧. ಬಾಗಿಲು,(ಕಕ್ಕೇರಿ) ೨. ದಿಡ್ಡಿಬಾಗಿಲು, ೩. ಬಸವಣ್ಣನ ಗುಡಿ, ೪. ದುರ್ಗಮ್ಮನ ಗುಡಿ, ೫. ಜಾಮೀ ಮಸೀದಿ, ೬. ಆಶೂರಖಾನ ೭. ಮೂಡಲಗಸಿ, ೮. ಸೋಮನಾಥನ ಅಗಸಿ, ೯. ಕಟ್ಟಡ, ೧೦. ಸೋಮನಾಥನ ಗುಡಿ, ೧೧. ಕಾವಲು ಗೋಪುರ, ೧೨. ಕಟ್ಟಡ, ೧೩. ಕಟ್ಟಡ, ೧೪. ಕಟ್ಟಡ, ೧೫. ಗುಡ್ಡದ ಮೇಲಿನ ಅಗಸಿ, ೧೬ ದಿಡ್ಡಿ

ಅನುಗುಣವಾದ ಗಾತ್ರದ ಕಲ್ಲಿನ ಚಕ್ಕೆಗಳನ್ನು ಬಳಸಿದ (ಚಿತ್ರ ೮೯). ಕೋಟೆಯ ಕೈಪಿಡಿ ಗೋಡೆಯಲ್ಲಿ ಬಂದೂಕು ಕಿಂಡಿಗಳಿವೆ. ಬಾಗಿಲುಗಳಲ್ಲಿ ಗೋಡೆಗೆ ಗಾರೆ ಮಾಡಿದೆ. ಹೊರಕೋಟೆಯಲ್ಲಿ ಅನೇಕ ವೃತ್ತಾಕಾರದ ಕೊತ್ತಳಗಳು (ಚಿತ್ರ ೯೦). ಪೂರ್ವ, ಉತ್ತರ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಒಂದೊಂದು ಬಾಗಿಲು; ಪಶ್ಚಿಮ ದಿಕ್ಕಿನಲ್ಲಿ ಒಂದು ದಿಡ್ಡಿ ಮತ್ತು ಒಳಕೋಟೆಯಲ್ಲಿ ಪೂರ್ವ ದಿಕ್ಕಿಗೆ ಒಂದು ಬಾಗಿಲು ಇವೆ. ಒಳಕೋಟೆ ಹೊರಕೋಟೆಯ ವಿಸ್ತೀರ್ಣದ ನಾಲ್ಕನೇ ಒಂದು ಭಾಗದಷ್ಟು ಪ್ರದೇಶವನ್ನು ಕೋಟೆಯ ನೈರುತ್ಯ ಮೂಲೆಯ ಭಾಗದಲ್ಲಿ ಆವರಿಸಿದೆ. ಇದಕ್ಕೆ ಉತ್ತರ ಮತ್ತು ಪೂರ್ವ ದಿಕ್ಕಿನಲ್ಲಿ ಪ್ರತ್ಯೇಕ ಕೋಟೆಗೋಡೆಗಳಿವೆ. ಪಶ್ಚಿಮ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಒಳಕೋಟೆಗೆ ಪ್ರತ್ಯೇಕ ಕೋಟೆಗೋಡೆಯಿಲ್ಲ. ಇಲ್ಲಿ ಹೊರಕೋಟೆ ಗೋಡೆ ಮಾತ್ರವಿದೆ.

ಪೂರ್ವ ದಿಕ್ಕಿನಲ್ಲಿ ಪೂರ್ವಭಿಮುಖವಾಗಿರುವ ಬಾಗಿಲನ್ನು ಮೂಡಲಗಸೆ ಎಂದು ಕರೆಯುತ್ತಾರೆ. ಇದೊಂದು ದೊಡ್ಡ ಸಂಕೀರ್ಣವಾಗಿದ್ದು, ಇದರಲ್ಲಿ ಮೂರು ಬಾಗಿಲುಗಳಿವೆ. ಉತ್ತರ-ದಕ್ಷಿಣವಾಗಿರುವಕೋಟೆ ಗೋಡೆಯಲ್ಲಿಯ ಒಳ ಬಾಗಿಲಿನ ಉತ್ತರ ಬದಿಯಿಂದ ಒಂದು ಗೋಡೆಯನ್ನು ಪೂರ್ವ-ಪಶ್ಚಿಮವಾಗಿ ಕಟ್ಟಿ, ಗೋಡೆಯಲ್ಲಿ ಮಧ್ಯದಲ್ಲಿ ಒಂದು ಮತ್ತು ತುದಿಯಲ್ಲಿ ಮತ್ತೊಂದು, ಹೀಗೆ ಎರಡು ದೊಡ್ಡ ವೃತ್ತಾಕಾರದ ಕೊತ್ತಳಗಳನ್ನು ಕಟ್ಟಿದೆ. ಪೂರ್ವ ತುದಿಯಲ್ಲಿರುವ ಕೊತ್ತಳದ ಪಕ್ಕದಲ್ಲಿ ಪ್ರವೇಶವನ್ನು ಬಿಟ್ಟು ಮತ್ತೊಂದು ವೃತ್ತಾಕಾರದ ಕೊತ್ತಳವನ್ನು ಮತ್ತು ಅದರಿಂದ ದಕ್ಷಿಣ ದಿಕ್ಕಿಗೆ ಸ್ವಲ್ಪ ದೂರದವರೆಗೆ ಗೋಡೆಯನ್ನು ಕಟ್ಟಿದೆ. ಮಧ್ಯದ ಕೊತ್ತಳದ ಪಕ್ಕದಲ್ಲಿ ಪುನಃ ಪ್ರವೇಶವನ್ನು ಬಿಟ್ಟು, ಪ್ರವೇಶದ ದಕ್ಷಿಣಕ್ಕೆ L ಆಕಾರದ ಗೋಡೆಯನ್ನು ಕಟ್ಟಿದೆ. ಈ ಗೋಡೆಯ ಮೇಲೆ ಹತ್ತಲು ಮೆಟ್ಟಿಲುಗಳಿವೆ. ಈ ಎರಡೂ ಗೋಡೆಗಳು ಸಮಾನಾಂತರದಲ್ಲಿವೆ. ಪೂರ್ವ ಮತ್ತು ಉತ್ತರ ದಿಕ್ಕುಗಳಿಂದ ಬರುವವರು ಮಾತ್ರ ಈ ಎರಡು ಬಾಗಿಲುಗಳ ಮೂಲಕ ಪ್ರವೇಶಿಸಿದ ನಂತರ ಒಳ ಬಾಗಿಲನ್ನು ತಲುಪುತ್ತಾರೆ. ಆದರೆ ದಕ್ಷಿಣದಿಂದ ಬಂದವರು ನೇರವಾಗಿ ಒಳ ಬಾಗಿಲನ್ನು ತಲುಪಲು ಅವಕಾಶವಿದೆ (ಚಿತ್ರ ೮೮). ಹೊರ ಬಾಗಿಲು ಎರಡು ವೃತ್ತಾಕಾರದ ಕೊತ್ತಳಗಳ ಮಧ್ಯದಲ್ಲಿದೆ (ಚಿತ್ರ ೮೭). ಮಧ್ಯದ ಬಾಗಿಲು ಕೊತ್ತಳ ಮತ್ತು L ಆಕಾರದ ಗೋಡೆಯ ಮಧ್ಯದಲ್ಲಿದೆ. ಈ ಎರಡು ಬಾಗಿಲುಗಳಿಗೆ ಪ್ರವೇಶ ಮಾತ್ರವಿದ್ದು, ಚೌಕಟ್ಟು ಅಥವಾ ಛಾವಣಿ ಇಲ್ಲ. ಒಳ ಬಾಗಿಲು ಮುಖ್ಯ ಕೋಟೆಗೋಡೆಯಲ್ಲಿದೆ. ಗೋಡೆಯ ಕಲ್ಲುಗಳನ್ನು ಮುಂದೆ ಚಾಚಿ ತೋಳುಗಳನ್ನು ನಿರ್ಮಿಸಿದೆ. ಮೇಲಿನ ಬೋದಿಗೆಗಳು ಸುರುಳಿಯಾಕಾರವಾಗಿವೆ. ಉತ್ತರಂಗದ ಮೇಲೆ ವೃತ್ತಾಕಾರದ ಹೂ, ಸೂರ್ಯ, ಚಂದ್ರ ಮತ್ತು ಕೈಯಲ್ಲಿ ಖಡ್ಗ




೬೫. ಗುಡಗುಂಟೆ, ಮೂಡಲಗಸಿ




೬೬. ಗುಡಗುಂಟೆ, ಪಶ್ಚಿಮ ಅಗಸಿ



೮೭. ಗುಡಗುಂಟೆ ಮೂಡಲಗಸಿಯ ಮುಂದಿನ ಕೊತ್ತಳಗಳು



೮೮. ಗುಡಗುಂಟೆ, ಮೂಡಲಗಸಿ



೮೯. ಗುಡಗುಂಟೆ, ನೈರುತ್ಯ ಭಾಗದ ಕೋಟೆ



೯೦. ಗುಡಗುಂಟೆ, ಪಶ್ಚಿಮ ಭಾಗದ ಕೊತ್ತಳ



೯೧. ಗುಡಗುಂಟೆ, ಗುಡ್ಡದ ಅಗಸಿ



೯೨. ಗುಡಗುಂಟೆ, ಕಾವಲು ಗೋಪುರ

ಒಡಿದ ಮನುಷ್ಯನ ಶಿಲ್ಪಗಳಿವೆ. ಉತ್ತರಂಗದ ಮೇಲೆ ಕುರುಡು ಕಮಾನಿದೆ. (ಚಿತ್ರ ೮೮). ಪ್ರವೇಶದ ಪ್ರತಿ ಬದಿಯಲ್ಲಿ ಒಂದಂಕಣದ ಕಟ್ಟೆಯಿದೆ. ಕಟ್ಟೆಗಳ ಮೇಲಿನ ಪೂರ್ವ, ಪಶ್ಚಿಮ ಗೋಡೆಗಳಲ್ಲಿ ಒಂದೊಂದು ಮತ್ತು ಉತ್ತರ, ದಕ್ಷಿಣ ಗೋಡೆಗಳಲ್ಲಿ ಪ್ರತಿಯೊಂದರಲ್ಲಿ ಮೂರು ಗೂಡುಗಳಿವೆ. ಬಾಗಿಲಿನ ಹಿಂಭಾಗ ಕಮಾನಿನಾಕಾರದಲ್ಲಿದೆ. ಬಾಗಿಲಿನ ಹೊರಗೆ ದಕ್ಷಿಣಕ್ಕೆ ಗೋಡೆಯಲ್ಲಿ ಒಂದು ಉಪ ಬಾಗಿಲಿದೆ.

ಉತ್ತರ ದಿಕ್ಕಿನಲ್ಲಿ ಉತ್ತರಾಭಿಮುಖವಾಗಿರುವ ಕಕ್ಕೇರಿ ಅಗಸೆ ಇದೆ. ಈ ಬಾಗಿಲ ಪಕ್ಕದಲ್ಲಿ ಪಶ್ಚಿಮಕ್ಕೆ ಒಂದು ವೃತ್ತಾಕಾರದ ಕೊತ್ತಳವಿದೆ. ಬಾಗಿಲ ಪಕ್ಕದಲ್ಲಿ ಪೂರ್ವಕ್ಕೆ ಗೋಡೆಯಿಂದ ಉತ್ತರಕ್ಕೆ ಚಾಚಿದ ಗೋಡೆಯಿದೆ. ಈ ಗೋಡೆಯಲ್ಲಿ ಒಂದು ಉಪ ಬಾಗಿಲು ಮತ್ತು ತುದಿಯಲ್ಲಿ ವೃತ್ತಾಕಾರದ ಒಂದು ಕೊತ್ತಳ ಇವೆ (ಚಿತ್ರ ೮೬). ಮುಖ್ಯ ಬಾಗಿಲು ಬಹಳ ಎತ್ತರವಾಗಿದೆ. ಗೋಡೆಯ ಕಲ್ಲುಗಳನ್ನು ಮುಂದೆ ಚಾಚಿ ತೋಳುಗಳನ್ನು ನಿರ್ಮಿಸಿದೆ. ಬೋದಿಗೆಗಳ ಮೇಲೆ ದೊಡ್ಡ ತೊಲೆಯಿದೆ. ಪ್ರವೇಶದ ಪ್ರತಿ ಬದಿಯಲ್ಲಿಯ ಎತ್ತರವಾದ ಕಟ್ಟೆಯ ಮೇಲೆ ಮೂರು ಅಂಕಣಗಳಿವೆ. ಕಟ್ಟೆಗಳ ಮೇಲಿನ ಕಂಬಗಳನ್ನು ಚಿಕ್ಕ ಕಲ್ಲುಗಳಿಂದ ಕಟ್ಟಿ, ಗಾರೆಮಾಡಿ ನಿರ್ಮಿಸಿದೆ. ಬಾಗಿಲ ಹೊರಭಾಗದಲ್ಲಿ ಪೂರ್ವ ಭಾಗದ ಗೋಡೆಯಲ್ಲಿ ಉಪ ಬಾಗಿಲಿದೆ. ಇದು L ಆಕಾರದಲ್ಲಿ ಮುಂದೆ ಹೋಗಿ ಮುಖ್ಯ ಬಾಗಿಲ ಪ್ರವೇಶವನ್ನು ಸೇರುತ್ತದೆ. ಬಾಗಿಲನ್ನು ದಾಟಿ ಕೋಟೆಯ ಒಳಗೆ ಹೋದಾಗ ಪ್ರವೇಶದ ಪೂರ್ವ ಬದಿಗೆ ಕಟ್ಟೆಯ ಮೇಲೆ ಆಂಜನೇಯನ ಗುಡಿ ಇದೆ.

ದಕ್ಷಿಣ ದಿಕ್ಕಿನಲ್ಲಿ ಬೆಟ್ಟದ ಮೇಲೆ ದಕ್ಷಿಣಾಭಿಮುಖವಾಗಿರುವ ಬಾಗಿಲನ್ನು ಸೋಮನಾಥನ ಅಗಸೆ ಎಂದು ಕರೆಯುತ್ತಾರೆ. ಬಾಗಿಲ ಪೂರ್ವ ಬದಿಯಿಂದ ಒಂದು ಗೋಡೆಯನ್ನು L ಆಕಾರದಲ್ಲಿ ಕಟ್ಟಿ ಬಾಗಿಲ ಮುಂದೆ ಒಂದು ಆವರಣವನ್ನು ನಿರ್ಮಿಸಿದೆ. ಮುಂದೆ ಚಾಚಿದ ಗೋಡೆಯ ತುದಿಯಲ್ಲಿ ವೃತ್ತಾಕಾರದ ಕೊತ್ತಳವಿದೆ. ಈ ಬಾಗಿಲು ಸಹ ಪೂರ್ವದ ಬಾಗಿಲಿನಂತಿದೆ. ಬಾಗಿಲಿನ ಉತ್ತರಂಗದ ಮೇಲೆ ಹೂವು, ಸೂರ್ಯ, ಚಂದ್ರರ ಶಿಲ್ಪಗಳಿವೆ. ಪ್ರವೇಶದ ಪಶ್ಚಿಮ ಬದಿಯಲ್ಲಿ ಒಂದಂಕಣದ ಕಟ್ಟೆ ಮತ್ತು ಪೂರ್ವ ಬದಿಯಲ್ಲಿ ಕಟ್ಟೆಯ ಬದಲಾಗಿ ಗೋಡೆಯಿದ್ದು, ಗೋಡೆಯಲ್ಲಿ ಚಿಕ್ಕ ಬಾಗಿಲಿದೆ. ಬಾಗಿಲ ಹೊರಭಾಗದಲ್ಲಿ ಪಶ್ಚಿಮಕ್ಕೆ ಒಂದು ಆಂಜನೇಯನ ದೇವಾಲಯವಿದೆ. ಪಶ್ಚಿಮ ದಿಕ್ಕಿನಲ್ಲಿ ಬೆಟ್ಟದ ಮೇಲೆ ಪಶ್ಚಿಮಾಭಿಮುಖವಾಗಿರುವ ದಿಡ್ಡಿ ಇದೆ. ಇದಕ್ಕೆ ಚೌಕಟ್ಟು ಇಲ್ಲ.

ಕಕ್ಕೇರಿ ಅಗಸೆಯನ್ನು ದಾಟಿ ಮುಂದೆ ಹೋದಾಗ ಬಸವಣ್ಣನ ದೇವಾಲಯವಿದೆ. ದಕ್ಷಿಣಾಭಿಮುಖ ವಾಗಿರುವ ಈ ದೇವಾಲಯದ ಮಂಟಪದ ಮುಂಭಾಗದಲ್ಲಿ ಮೂರು ಕಮಾನುಗಳಿವೆ. ಮೇಲೆ ಕೈಪಿಡಿ

ಗೋಡೆಯಲ್ಲಿ ನಂದಿಗಳಿವೆ. ಮಂಟಪದ ಹಿಂದಿನ ಗೋಡೆಯಲ್ಲಿ ಗರ್ಭಗೃಹದ ಎರಡು ಬದಿಗೆ ಪ್ರದಕ್ಷಿಣೆಗೆ ಅನುಕೂಲವಾಗುವಂತೆ ಪ್ರವೇಶವಿದೆ. ಗರ್ಭಗೃಹದ ಸುತ್ತ ಇರುವುದು ತೆರೆದ ಪ್ರದಕ್ಷಿಣಾಪಥ. ಗರ್ಭಗೃಹದ ಮೇಲ್ಕಟ್ಟಡ ಮೆಟ್ಟಿಲುಗಳಾಕಾರದಲ್ಲಿದ್ದು ಮೇಲೆ ಮೀನಾರಿನಾಕಾರದಲ್ಲಿ ಕಂಠ ಮತ್ತು ಶಿಖರಗಳಿವೆ. ಕಲ್ಲು ಮತ್ತು ಗಾರೆಯಿಂದ ನಿರ್ಮಿತವಾದ ದೇವಾಲಯ ಹಿಂದು ಮತ್ತು ಮುಸ್ಲಿಮ್ ಶೈಲಿಯಲ್ಲಿದೆ. ಇದರ ಹತ್ತಿರ ಪೂರ್ವಭಿಮುಖವಾಗಿರುವ ದುರ್ಗಾ ದೇವಾಲಯವಿದೆ. ಇಲ್ಲಿಂದ ಮುಂದೆ ದಕ್ಷಿಣಕ್ಕೆ ಹೋದಾಗ ಕ್ರಿ. ಶ. ೧೮೯೮-೯೯ರಲ್ಲಿ ಕಟ್ಟಿಸಿದ ಜಾಮೀ ಮಸೀದಿಯಿದೆ. ಮಸೀದಿಯ ಪಕ್ಕದಲ್ಲಿ ಆಶೂರ್‌ಖಾನವಿದೆ. ಇದೊಂದು ಪ್ರಾರ್ಥನಾ ಮಂದಿರ. ಕೋಟೆಯ ಮಧ್ಯದಲ್ಲಿ ಸಂಸ್ಥಾನಿಕರ ಅರಮನೆಯಿದೆ. ಇದನ್ನು ದರ್ಬಾರ್ ಎಂದು ಕರೆಯುತ್ತಾರೆ. ಸುಸ್ಥಿತಿಯಲ್ಲಿರುವ ಈ ಕಟ್ಟಡದಲ್ಲಿ ನಾಯಕ ವಂಶಸ್ಥರು ವಾಸ ಮಾಡುತ್ತಿದ್ದಾರೆ.

ಒಳಕೋಟೆಯಲ್ಲಿ ಪೂರ್ವಾಭಿಮುಖವಾಗಿರುವ ಬಾಗಿಲನ್ನು ಗುಡ್ಡದಗಸೆ ಎಂದು ಕರೆಯುವರು (ಚಿತ್ರ ೯೧). ಗೋಡೆಯಕಲ್ಲುಗಳನ್ನು ಚಾಚಿ ಇದರ ತೋಳುಗಳನ್ನು ನಿರ್ಮಿಸಿದೆ. ಬೋದಿಗೆಗಳ ಮೇಲೆ ಉತ್ತರಂಗ, ಅದರ ಮೇಲೆ ಕುರುಡು ಕಮಾನು ಇವೆ. ಉತ್ತರಂಗದ ಮೇಲೆ ಸೂರ್ಯ, ಚಂದ್ರರ ಶಿಲ್ಪಗಳಿವೆ. ಪ್ರವೇಶದ ಪ್ರತಿ ಬದಿಯಲ್ಲಿ ಒಂದಂಕಣದ ಕಟ್ಟೆ ಇದೆ. ಪ್ರವೇಶದ ಹಿಂಭಾಗ ಕಮಾನಿನಾಕಾರದಲ್ಲಿದೆ. ಒಳ ಕೋಟೆಯೊಳಗಿನ ಮಧ್ಯದ ಎತ್ತರದ ಭಾಗದಲ್ಲಿ ವರ್ತುಲಾಕಾರದ ದೊಡ್ಡ ಕಾವಲು ಗೋಪುರವಿದೆ (ಚಿತ್ರ ೯೨). ಇದರ ಮೇಲೆ ಹತ್ತಲು ಮೆಟ್ಟಿಲುಗಳಿವೆ. ಗೋಡೆಯ ಮೇಲ್ಭಾಗದಲ್ಲಿ ಬಂದೂಕು ಕಿಂಡಿಗಳಿವೆ. ಕಾವಲು ಗೋಪುರದ ಮೇಲೆ ಇತ್ತೀಚಿನ ಕಾಲದ ಕಾಳಿಕಾದೇವಿ ಗುಡಿಯಿದೆ. ಒಳಕೋಟೆಯೊಳಗೆ ಕೆಲವು ಕಟ್ಟಡಗಳ ಅವಶೇಷಗಳಿವೆ. ಇವುಗಳಲ್ಲಿ ಒಂದನ್ನು ಗರಡಿಮನೆ ಎಂದು ಕರೆಯುತ್ತಾರೆ. ಇದು ನೆಲಮಟ್ಟಕ್ಕಿಂತ ಸ್ವಲ್ಪ ಕೆಳಗಿದೆ.

ಮಧ್ಯಮ ಮತ್ತು ಚಿಕ್ಕ ಗಾತ್ರದ ಕಲ್ಲುಗಳಿಂದ ಕಟ್ಟಿದ ಈಗಿರುವ ಕೋಟೆಯ ಕಾಲ ಹದಿನೇಳು-ಹದಿನೆಂಟನೇ ಶತಮಾನಗಳು.

ಟಿಪ್ಪಣಿಗಳು

೧. *Raichur District Gazetteer,* 1970, p. 700.

೨. Patil Channabasappa S. and Vinoda C. Patil, 1998, *Inscriptions of Raichur District,* No. 44; *ARIE,* 1989-90, No. C 31.

೩. *ಅದೇ,* No. 43; *ARIE*, 1989-90, No. C 30.

# ೧೩. ಕೋತಾ

ಕೋತಾ ಲಿಂಗಸುಗೂರು ತಾಲೂಕಿನಲ್ಲಿ ಲಿಂಗಸುಗೂರಿನಿಂದ ಈಶಾನ್ಯಕ್ಕೆ ೨೭ ಕಿ.ಮೀ. ದೂರದಲ್ಲಿ, ಅಕ್ಷಾಂಶ ೧೬° ೧೫' ಉತ್ತರ ಮತ್ತು ರೇಖಾಂಶ ೭೬° ೩೭' ಪೂರ್ವದಲ್ಲಿದೆ. ಈ ಚಿಕ್ಕ ಗ್ರಾಮದಲ್ಲಿ ಕೋಟೆ, ದೇವಾಲಯ, ಶಿಲ್ಪ, ಬಾವಿ, ಶಾಸನ ಮುಂತಾದವುಗಳಿವೆ.

## ಐತಿಹಾಸಿಕ ಹಿನ್ನೆಲೆ

ಕೋತಾ ಗ್ರಾಮದ ಉತ್ತರಕ್ಕೆ ಒಂದು ಕಿ.ಮೀ. ದೂರದಲ್ಲಿರುವ ರಾಮಲಿಂಗ ದೇವಾಲಯದ ಬಳಿ ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಹನ್ನೊಂದು-ಹನ್ನೆರಡನೇ ಶತಮಾನಗಳ ಒಂದು ತ್ರುಟಿತ ಶಾಸನವಿದೆ.[೧] ಗ್ರಾಮದಲ್ಲಿ ವಿಜಯನಗರ ಅರಸ ಸದಾಶಿವರಾಯನ ಮೂರು ಶಾಸನಗಳಿವೆ. ಕ್ರಿ.ಶ.೧೫೫೮ರ ಶಾಸನದಲ್ಲಿ ಇದನ್ನು ಕೋಟೆ ಸೀಮೆ ಎಂದು ಉಲ್ಲೇಖಿಸಿದೆ. ಕೋಟೆ ಸೀಮೆಯಲ್ಲಿ ೩೫ ಗ್ರಾಮಗಳಿದ್ದವು.[೨] ಇದನ್ನು ಮೇಧಾವೀರಾಯನ ಕೋಟೆ ಎಂದು ಸಹ ಶಾಸನದಲ್ಲಿ ಉಲ್ಲೇಖಿಸಿದೆ.[೩] ಈಗಲೂ ಇದನ್ನು ಮದ್ದರಾಯನ ಕೋಟೆ ಎಂದು ಕರೆಯುತ್ತಾರೆ.[೪]

## ಕೋಟೆ

ಇಲ್ಲಿಯ ಕೋಟೆ ಆಯತಾಕಾರದಲ್ಲಿದೆ. ಆದರೆ ಉತ್ತರ ಮತ್ತು ಪೂರ್ವ ಗೋಡೆಗಳು ಈಶಾನ್ಯ ದಿಕ್ಕಿನಲ್ಲಿ ಒಳಗೆ ಸರಿದು, ಪೂರ್ವ ಗೋಡೆ ಪಶ್ಚಿಮಕ್ಕೆ ಮತ್ತು ಉತ್ತರ ಗೋಡೆ ದಕ್ಷಿಣಕ್ಕೆ ತಿರುಗಿ ಮುಂದೆ ಹೋಗಿ, ಒಂದನ್ನೊಂದು ಸೇರುವುದರಿಂದ ಆಯತಾಕಾರದ ನಾಲ್ಕು ಮೂಲೆಗಳ ಬದಲಾಗಿ ಐದು ಮೂಲೆಗಳಾಗಿವೆ (ಚಿತ್ರ ೯೩). ಕೋಟೆಗೋಡೆಯನ್ನು ದಪ್ಪ ಚೌಕಾಕಾರದ ಕಲ್ಲುಗಳಿಂದ ಕಟ್ಟಿದೆ. ಇದನ್ನು ನಂತರ ಕಾಲದಲ್ಲಿ ಮಧ್ಯಮ ಮತ್ತು ಚಿಕ್ಕ ಗಾತ್ರದ ಕಲ್ಲುಗಳಿಂದ ದುರಸ್ತಿಮಾಡಿದೆ. ಮೊದಲು ಕಟ್ಟಿದ ಭಾಗದಲ್ಲಿ ಚೌಕಾಕಾರದ ಕೊತ್ತಳಗಳು ಮತ್ತು ನಂತರ ದುರಸ್ತಿಯಾದ ಭಾಗದಲ್ಲಿ ವೃತ್ತಾಕಾರದ ಕೊತ್ತಳಗಳಿವೆ. ಕೆಲವು ಕಡೆ ಕೋಟೆ ಬಿದ್ದುಹೋಗಿ ಮಣ್ಣಿನ ದಿಬ್ಬ ಮಾತ್ರ ಉಳಿದಿದೆ. ಹದಿನಾರನೇ ಶತಮಾನದ ಕೋಟೆಯನ್ನು ಹದಿನೇಳು-ಹದಿನೆಂಟನೇ ಶತಮಾನಗಳಲ್ಲಿ ದುರಸ್ತಿ ಮಾಡಿದೆ.

ಕೋಟೆಯ ಈಶಾನ್ಯ ಮೂಲೆಯಲ್ಲಿ, ಹಿಂದೆ ಸರಿದ ಭಾಗದಲ್ಲಿ, ಉತ್ತರಾಭಿಮುಖವಾದ ಬಾಗಿಲಿದೆ. ಪಶ್ಚಿಮ ಕೋಟೆಗೋಡೆ ಲಂಬಕೋನದಲ್ಲಿ ಪೂರ್ವಕ್ಕೆ ತಿರುಗಿ ಬಾಗಿಲ ಮುಂದೆ ಬಂದು ಲಂಬ ಕೋನದಲ್ಲಿ




೯೩. ಕೋಠಾ ಕೋಟೆ: ೧. ಕೋಟೆ, ೨. ಬಾಗಿಲು, ೩. ಮಸೀದಿ, ೪. ನಂದಿಕೇಶ್ವರ ದೇವಾಲಯ, ೫. ಬಾವಿ, ೬. ಬಸವೇಶ್ವರ ಗುಡಿ, ೭.ಈರಣ್ಣ ಗುಡಿ



೯೪. ಕೋಠಾ. ಬಾಗಿಲು



೯೫. ಕೋಠಾ. ಬಾವಿ

ತಿರುಗಿ ಮುಂದೆ ಹೋಗುವುದರಿಂದ ಬಾಗಿಲನ್ನು ಮರೆ ಮಾಡಿ ಸಂರಕ್ಷಿಸುತ್ತದೆ. ಬಾಗಿಲ ಪೂರ್ವಕ್ಕೆ ಆಯತಾಕಾರದ ದೊಡ್ಡ ಕೊತ್ತಳವಿದೆ. ಬಾಗಿಲಿಗೆ ಚೌಕಟ್ಟು ಮತ್ತು ಛಾವಣಿಯಿಲ್ಲ. ಪ್ರವೇಶದ ಪಕ್ಕದಲ್ಲಿ ಕಟ್ಟೆಗಳಿವೆ. ಪ್ರತಿ ಕಟ್ಟೆಯ ಅಧಿಷ್ಠಾನದ ಮೇಲೆ ಒಂದು ಗಜಲಕ್ಷ್ಮಿಯ ಶಿಲ್ಪವಿದೆ. ಬಾಗಿಲ ಒಳ ಹೋದಾಗ ಪ್ರವೇಶದ ಪಕ್ಕದ ಪೂರ್ವ ಗೋಡೆಯಲ್ಲಿ ಮತ್ತೊಂದು ಗಜಲಕ್ಷ್ಮಿ ಶಿಲ್ಪವಿದೆ (ಚಿತ್ರ ೯೪).

ಕೋಟೆಯ ಒಳಗೆ ಈಶಾನ್ಯ ದಿಕ್ಕಿನ ಒಂದು ಮೂಲೆಯ ಹತ್ತಿರ ಚೌಕಾಕಾರದ ಕೊತ್ತಳಕ್ಕೆ ಸೇರಿದಂತೆ ಈರಣ್ಣನ ಗುಡಿಯನ್ನು ಕಟ್ಟಿದೆ. ಈಶಾನ್ಯ ದಿಕ್ಕಿನ ಮತ್ತೊಂದು ಮೂಲೆಯಲ್ಲಿ ಮಸೀದಿಯಿದೆ. ಕೋಟೆಯ ಮಧ್ಯದಲ್ಲಿ ಬಾವಿ, ನಂದಿಕೇಶ್ವರ ಮತ್ತು ಬಸವೇಶ್ವರ ಗುಡಿಗಳು ಇವೆ. ಚೌಕಾಕಾರದ ಬಾವಿಯ ಉತ್ತರ ಭಾಗ ಶಿಥಿಲವಾಗಿದೆ. ದಕ್ಷಿಣ ಭಾಗದಲ್ಲಿ ಬಾವಿಯ ಅಗಲ ಹಂತಹಂತವಾಗಿ ಕಡಿಮೆಯಾಗುತ್ತದೆ. ಈ ಭಾಗದಲ್ಲಿ ಮೆಟ್ಟಿಲುಗಳಿವೆ. ಬಾವಿಯಲ್ಲಿ ಇಳಿಯಲು ಮೊದಲು ಪೂರ್ವ ಗೋಡೆಯ ಬದಿಯಲ್ಲಿ ಉತ್ತರದಿಂದ ದಕ್ಷಿಣಕ್ಕೆ, ನಂತರ ಪೂರ್ವದಿಂದ ಪಶ್ಚಿಮಕ್ಕೆ, ಕೊನೆಗೆ ದಕ್ಷಿಣದಿಂದ ಉತ್ತರಕ್ಕೆ ಮೆಟ್ಟಿಲುಗಳಿವೆ. ಬಾವಿಯನ್ನು ಚೆನ್ನಾಗಿ ನಯ ಮಾಡಿದ ಉದ್ದವಾದ ಕಲ್ಲುಗಳಿಂದ ಕಟ್ಟಿದೆ. ಕಲ್ಲುಗಳಪ್ರತಿಸಾಲು ಅದರ ಕೆಳಗಿನ ಸಾಲಿಗಿಂತ ಸ್ವಲ್ಪ ಹಿಂದೆ ಸರಿಯುವಂತೆ ರಚಿಸಿದೆ (ಚಿತ್ರ ೯೫). ಈ ಬಾವಿಯನ್ನು ಹನ್ನೊಂದು-ಹನ್ನೆರಡನೇ ಶತಮಾನಗಳಲ್ಲಿ ಕಟ್ಟಿಸಿದೆ. ನಂದಿಕೇಶ್ವರ ದೇವಾಲಯದ ಮುಂದೆ ಸಪ್ತಮಾತೃಕೆಯರ ಶಿಲ್ಪವಿದೆ. ಪೀಠದ ಮೇಲೆ ವಾಹನಗಳಿರುವ ಈ ಶಿಲ್ಪವು ಸಹ ಹನ್ನೊಂದು-ಹನ್ನೆರಡನೇ ಶತಮಾನಗಳದ್ದು.

ಕೋಟೆಯ ಹೊರಗೆ ಬಾಗಿಲಿನ ಹತ್ತಿರದ ರಸ್ತೆಯ ಬದಿಗಳಲ್ಲಿ ಒಂದು ದೊಡ್ಡ ಬಾಗಿಲು ಮತ್ತು ಬಸವಣ್ಣನ ದೇವಾಲಯ ಎದುರುಬದುರಾಗಿವೆ. ರಸ್ತೆಯ ಉತ್ತರಕ್ಕೆ ದಕ್ಷಿಣಾಭಿಮುಖವಾಗಿರುವ ದೊಡ್ಡ ಬಾಗಿಲು ಕೋಟೆಗಳ ಬಾಗಿಲಿನಂತೆ ದೊಡ್ಡದಾಗಿದೆ. ಚಿಕ್ಕ ಕಲ್ಲುಗಳು ಮತ್ತು ಗಾರೆಯಿಂದ ಕಟ್ಟಿ, ಗಾರೆ ಮಾಡಲಾದ ಬಾಗಿಲು ಕಮಾನಿನಾಕಾರದಲ್ಲಿದೆ. ಕಮಾನಿನ ಪ್ರತಿ ಬದಿಯಲ್ಲಿ ಕೆಳಭಾಗದಲ್ಲಿ ಕಮಾನಿನಾಕಾರದ ದೊಡ್ಡ ಗೂಡು ಮತ್ತು ಮೇಲ್ಭಾಗದಲ್ಲಿ ಚೌಕಾಕಾರದ ಗೂಡು ಇವೆ. ರಸ್ತೆಯ ದಕ್ಷಿಣ ಬದಿಯಲ್ಲಿ ಉತ್ತರಾಭಿಮುಖವಾಗಿರುವ ಬಸವಣ್ಣ ದೇವಾಲಯವನ್ನು ಸಹ ಸಣ್ಣ ಕಲ್ಲುಗಳು ಮತ್ತು ಗಾರೆಯಿಂದ ಕಟ್ಟಿ, ಗಾರೆಯನ್ನು ಮಾಡಿದೆ. ದೇವಾಲಯದ ಮುಂಭಾಗದಲ್ಲಿ ಮೂರು ಕಮಾನುಗಳಿವೆ. ಕೈಪಿಡಿ ಗೋಡೆಯಲ್ಲಿ ಮೂಲೆಗಳಲ್ಲಿ ನಂದಿಗಳಿವೆ. ಗರ್ಭಗೃಹದ ಮೇಲ್ಕಟ್ಟಡ ಗುಮ್ಮಟಾಕಾರದಲ್ಲಿದೆ. ಈ ಎರಡೂ ಕಟ್ಟಡಗಳ ಕಾಲ ಹದಿನೇಳು-ಹದಿನೆಂಟನೇ ಶತಮಾನ. ಬಾಗಿಲ ಹಿಂಭಾಗದಲ್ಲಿ ಒಂದು ಬಾವಿಯಿದೆ.

## ಟಿಪ್ಪಣಿಗಳು

೧. Patil Channabasappa S. and Vinoda C. Patil (Eds), 1998, *Inscriptions of Raichur District*, No. 83; *ARIE*, 1958-59, No. B 701.

೨. *ಅದೇ,* No. 79; *ARIE*, 1958-59, No. B 697.

೩. *ಅದೇ,* No. 80; *ARIE*, 1958-59, No. B 698.

೪. ೧೯೬೯ರಲ್ಲಿ ಪ್ರಕಟವಾದ *ಸರ್ವೆ ಆಫ್ ಇಂಡಿಯಾ ನಕಾಶೆ* ೫೬ ಡಿಯಲ್ಲಿ ಇದನ್ನು *Madrainakota* ಎಂದು ಗುರುತಿಸಿದೆ.

# ೧೪. ಹೊನ್ನಹಳ್ಳಿ

ಹೊನ್ನಹಳ್ಳಿ ಲಿಂಗಸುಗೂರು ತಾಲೂಕಿನಲ್ಲಿ ಲಿಂಗಸುಗೂರಿನಿಂದ ಈಶಾನ್ಯಕ್ಕೆ ೮ ಕಿ.ಮೀ. ದೂರದಲ್ಲಿ, ಅಕ್ಷಾಂಶ ೧೬° ೧೩' ಉತ್ತರ ಮತ್ತು ರೇಖಾಂಶ ೭೬° ೩೪' ಪೂರ್ವದಲ್ಲಿರುವ ಚಿಕ್ಕ ಗ್ರಾಮ. ಇಲ್ಲಿ ಸುಸ್ಥಿತಿಯಲ್ಲಿರುವ ಕೋಟೆ, ಬಾವಿ, ದೇವಾಲಯಗಳು ಮುಂತಾದವು ಇವೆ.

ಆಯತಾಕಾರದಲ್ಲಿರುವ ಕೋಟೆ ಸುಸ್ಥಿತಿಯಲ್ಲಿದೆ (ಚಿತ್ರ ೯೬). ಕೋಟೆಯ ಬಾಗಿಲು ಉತ್ತರ ದಿಕ್ಕಿನ ಗೋಡೆಯ ಮಧ್ಯದಲ್ಲಿದೆ. ಬಾಗಿಲಿನ ಎದುರಿಗೆ ಸ್ವಲ್ಪ ದೂರದಲ್ಲಿ ಬಂಡೆಯ ಮೇಲೆ ವೃತ್ತಾಕಾರದ ಎತ್ತರವಾದ ಕಾವಲು ಗೋಪುರವಿದೆ (ಚಿತ್ರ ೧೦೧). ಕೋಟೆಯ ವಾಯವ್ಯಕ್ಕೆ ಸ್ವಲ್ಪ ದೂರದಲ್ಲಿ ಒಂದು ಬಾಗಿಲಿದೆ. ಇದು ಹೊರಸುತ್ತಿನಲ್ಲಿದ್ದಂತೆ ಕಾಣುತ್ತದೆ. ಹೊರಸುತ್ತಿನ ಕೋಟೆಗೋಡೆ ಉಳಿದಿಲ್ಲ. ಬಾಗಿಲಿಗೆ ಸರಳವಾದ ಚೌಕಟ್ಟಿದೆ. ಉತ್ತರಂಗದ ಮೇಲೆ ಸೂರ್ಯ, ಚಂದ್ರರ ಚಿತ್ರಗಳಿವೆ. ಚೌಕಟ್ಟಿನ ಮೇಲೆ ಕುರುಡು ಕಮಾನಿದೆ. ಪ್ರವೇಶದ ಪಕ್ಕದಲ್ಲಿ ಎತ್ತರದ ಕಟ್ಟೆಗಳಿವೆ. ಬಾಗಿಲ ಮೇಲಿನ ಛಾವಣಿ ಬಿದ್ದು ಹೋಗಿದೆ. ಬಾಗಿಲ ಪಶ್ಚಿಮಕ್ಕೆ ಒಂದು ಬಾವಿಯಿದೆ. ಮಧ್ಯಮ ಮತ್ತು ಚಿಕ್ಕ ಗಾತ್ರದ ಕಲ್ಲುಗಳಿಂದ ಕಟ್ಟಿದ ಚೌಕಾಕಾರದ ಬಾವಿಗೆ ಪೂರ್ವ ದಿಕ್ಕಿನಲ್ಲಿ ಮೆಟ್ಟಿಲುಗಳಿವೆ. ಮೆಟ್ಟಿಲುಗಳ ಎರಡು ಬದಿಯ ಗೋಡೆಗಳಲ್ಲಿ ಎರಡು ಗೂಡುಗಳಿವೆ. ಕೋಟೆಯ ಹೊರಗೆ ಪಶ್ಚಿಮಕ್ಕೆ ಆಂಜನೇಯ ಮತ್ತು ಬಸವಣ್ಣ ದೇವಾಲಯಗಳಿವೆ. ಆಂಜನೇಯನ ವಿಗ್ರಹದ ಹಿಂಭಾಗದಲ್ಲಿ ಹನ್ನೆರಡನೇ ಶತಮಾನದ ಶಾಸನವಿದೆ. ಇದರಲ್ಲಿ ಮೇರುಗಿರಿ, ಕುಂತಳ ಮತ್ತು ಕರಡಿಕಲ್ಲುಗಳ ವರ್ಣನೆಯಿದೆ.[೧] ಬಸವಣ್ಣ ದೇವಾಲಯದ ಮೇಲೆ ಇಟ್ಟಿಗೆ, ಗಾರೆಯ ವಿಮಾನ ಶೈಲಿಯ ಮೇಲ್ಕಟ್ಟಡವಿದೆ.

ಕೋಟೆಯನ್ನು ಚೌಕ ಮತ್ತು ಆಯತಾಕಾರದ, ದಪ್ಪವಾದ ಕಪ್ಪು ಕಲ್ಲುಗಳಿಂದ ಕಟ್ಟಿದೆ. ಚಿಕ್ಕ ಕಪ್ಪು ಕಲ್ಲುಗಳನ್ನು ಮತ್ತು ಬಿಳಿ ಬೆಣಚು (ಗ್ರಾನೈಟ್) ಕಲ್ಲುಗಳನ್ನು ಅಲ್ಲಲ್ಲಿ ಉಪಯೋಗಿಸಿದೆ. ಸುಮಾರು ಮೂವತ್ತು ಅಡಿ ಎತ್ತರವಾದ ಕೋಟೆಯ ಕೈಪಿಡಿ ಗೋಡೆಯಲ್ಲಿ ತೆನೆಗಳಿವೆ. ಆದರೆ ತೆನೆಗಳ ಮಧ್ಯದ ಭಾಗವನ್ನು ಕಲ್ಲಿನಿಂದ ಕಟ್ಟಿ ಮುಚ್ಚಿದೆ. ಆದುದರಿಂದ ತೆನೆಗಳು ಅಲಂಕಾರಿಕವಾಗಿ ಮಾತ್ರ ಕಾಣುತ್ತವೆ. ಕೈಪಿಡಿ ಗೋಡೆಯಲ್ಲಿ ಮತ್ತು ತೆನೆಗಳಲ್ಲಿ ಬಂದೂಕು ಕಿಂಡಿಗಳಿವೆ (ಚಿತ್ರ ೧೦೦). ಕೋಟೆಯ ಉತ್ತರ ಗೋಡೆಯ ಮಧ್ಯದಲ್ಲಿ ಒಂದು ಬಾಗಿಲು, ನಾಲ್ಕು ಮೂಲೆಗಳಲ್ಲಿ ವೃತ್ತಾಕಾರದ ಕೊತ್ತಳಗಳು ಮತ್ತು ದಕ್ಷಿಣ ಗೋಡೆಯ ಮಧ್ಯದಲ್ಲಿ ಒಂದು ವೃತ್ತಾಕಾರದ ಕೊತ್ತಳ ಇವೆ.

೯೬ ಹೊನ್ನಹಳ್ಳಿ ಕೋಟೆ: ೧. ಬಾಗಿಲು, ೨. ರಾಮಲಿಂಗೇಶ್ವರನ ಗುಡಿ, ೩. ದ್ಯಾಮವ್ವನ ಗುಡಿ, ೪. ಬಸವಣ್ಣನ ಗುಡಿ, ೫. ಲಕ್ಷ್ಮೀ ಗುಡಿ, ೬. ಬಾಗಿಲು, ೭. ಬಾಗಿಲು, ೮. ಒಂಟಿ ಕೊತ್ತಳ, ೯. ಕಂದಕ




೯೭. ಹೊನ್ನಹಳ್ಳಿ, ಬಾಗಿಲು



೯೮. ಹೊನ್ನಹಳ್ಳಿ, ಬಾಗಿಲಮುಂದಿನ ಗೋಡೆ



೯೯. ಹೊನ್ನಹಳ್ಳಿ, ಬಾಗಿಲು



೧೦೦. ಹೊನ್ನಹಳ್ಳಿ, ಉತ್ತರ ದಿಕ್ಕಿನ ಭಾಗ



೧೦೧. ಹೊನ್ನಹಳ್ಳಿ, ಕಾವಲು ಗೋಪುರ

ಕೋಟೆಯ ಬಾಗಿಲು ವೈರಿಯ ಕಣ್ಣಿಗೆ ಕಾಣದಂತೆ ಮಾಡಲು ಮುಂದೆ ಒಂದು ಅಡ್ಡ ಗೋಡೆಯನ್ನು ಕಟ್ಟಿದೆ. ಬಾಗಿಲಿನ ಪಶ್ಚಿಮ ಬದಿಯಿಂದ ಪ್ರಾರಂಭವಾಗುವ ಅಡ್ಡಗೋಡೆ ಲಂಬಕೋನದಲ್ಲಿ ಉತ್ತರಕ್ಕೆ ಸಾಗಿ, ವಕ್ರಾಕಾರವಾಗಿ ಪೂರ್ವಕ್ಕೆ ತಿರುಗಿ ಮುಂದೆ ಹೋಗುತ್ತದೆ (ಚಿತ್ರಗಳು ೯೭-೯೮). ಈ ಗೋಡೆಯ ಹೊರಮೈಯನ್ನು ಎರಡು ಸಾಲು ಬಿಳಿ ಮತ್ತು ಎರಡು ಸಾಲು ಕಪ್ಪು ಕಲ್ಲುಗಳಿಂದ ಒಂದರ ನಂತರ ಮತ್ತೊಂದರಂತೆ ಪರ್ಯಾಯವಾಗಿ ಕಟ್ಟಿರುವುದರಿಂದ ಬಿಳಿ ಮತ್ತು ಕಪ್ಪು ಪಟ್ಟೆಗಳನ್ನು ಬಳಿದ ಹಾಗೆ ಅಂದವಾಗಿ ಕಾಣುತ್ತದೆ. ಗೋಡೆಯ ಒಳಮೈಯಲ್ಲಿ ಬಾಗಿಲಿನ ಎದುರಿಗೆ ಒಂದು ಗೂಡಿದೆ. ಗೋಡೆಯ ಕೈಪಿಡಿ ಗೋಡೆಯಲ್ಲಿ ಬಂದೂಕು ಕಿಂಡಿಗಳಿವೆ. ಕೈಪಿಡಿ ಗೋಡೆಯ ಹಿಂಭಾಗದಲ್ಲಿ ಓಡಾಡುವಷ್ಟು ಸ್ಥಳವಿದೆ. ಇಲ್ಲಿ ನಿಂತು ವೈರಿಯ ಕಡೆಗೆ ಬಂದೂಕು ಹಾರಿಸಲು ಸುಲಭವಾಗುತ್ತಿತ್ತು. ಕೋಟೆಯ ಬಾಗಿಲಿಗೆ ಎರಡು ಚೌಕಟ್ಟುಗಳಿವೆ. ಗೋಡೆಯ ಕಲ್ಲುಗಳನ್ನು ಮುಂದೆ ಚಾಚುವಂತೆ ಮಾಡಿ ತೋಳುಗಳನ್ನು ನಿರ್ಮಿಸಿದೆ. ಬೋದಿಗೆಗಳು ಸುರುಳಿಯಾಕಾರವಾಗಿವೆ (ಚಿತ್ರ ೯೯). ಕೆಳಗಿನ ಉತ್ತರಂಗದ ಮೇಲೆ ಹೂ, ಸೂರ್ಯ, ಚಂದ್ರ ಮತ್ತು ಎರಡು ಮೀನುಗಳ ಶಿಲ್ಪಗಳು ಮತ್ತು ನಾಮದ ಮೂರು ರೇಖೆಗಳು ಇವೆ. ಬಾಗಿಲಿನ ಮರದ ಕದಗಳು ಸುಸ್ಥಿತಿಯಲ್ಲಿವೆ. ಕದದ ಮೇಲಿನ ಭಾಗದಲ್ಲಿ ಕಬ್ಬಿಣದ ನಾಲ್ಕು ಮೂಲೆಯ ಚೂಪು ಮತ್ತು ಉದ್ದವಾದ ಮೊಳೆಗಳಿವೆ. ಚೌಕಟ್ಟಿನ ಮೇಲೆ ಕುರುಡು ಕಮಾನಿದೆ. ಪ್ರವೇಶದ ಪಕ್ಕದಲ್ಲಿ ಎತ್ತರವಾದ ಕಟ್ಟೆಗಳಿವೆ. ಪ್ರತಿ ಕಟ್ಟೆಯ ಮೇಲೆ ಒಂದು ಅಂಕಣವಿದೆ. ಕಟ್ಟೆಗಳ ಮೇಲಿನ ಪೂರ್ವ ಮತ್ತು ಪಶ್ಚಿಮ ದಿಕ್ಕಿನ ಪ್ರತಿ ಗೋಡೆಯಲ್ಲಿ ಎರಡು ಚಿಕ್ಕ ಗೂಡುಗಳು, ಒಂದು ಬಾಗಿಲು; ಉತ್ತರ ಮತ್ತು ದಕ್ಷಿಣ ದಿಕ್ಕಿನ ಪ್ರತಿ ಗೋಡೆಯಲ್ಲಿ ಒಂದೊಂದು ದೊಡ್ಡ ಗೂಡು ಇವೆ. ಬಾಗಿಲ ಮೇಲಿನ ಛಾವಣಿ ಬಿದ್ದು ಹೋಗಿದೆ.

ಕೋಟೆಯ ಒಳಗೆ ಬಾಗಿಲಿನ ನೈರುತ್ಯಕ್ಕೆ ರಾಮಲಿಂಗೇಶ್ವರ ದೇವಾಲಯವಿದೆ. ಚಿಕ್ಕ ದೇವಾಲಯದ ಬಾಗಿಲು ಅಲಂಕಾರಮಯವಾಗಿದೆ. ಮೇಲ್ಕಟ್ಟಡ ಮೆಟ್ಟಿಲುಗಳಾಕಾರದಲ್ಲಿದೆ. ಈಶಾನ್ಯ ಮೂಲೆಯ ಹತ್ತಿರ ಲಕ್ಷ್ಮೀ ದೇವಾಲಯ ಮತ್ತು ದಕ್ಷಿಣ ಗೋಡೆಯ ಮಧ್ಯಭಾಗದ ಹತ್ತಿರ ದ್ಯಾವಮ್ಮ ಮತ್ತು ಬಸವಣ್ಣ ದೇವಾಲಯಗಳಿವೆ.

ದಪ್ಪವಾದ ಕಲ್ಲಿನಿಂದ ಅಗಲವಾದ ಸಂದಿಗಳಿಲ್ಲದಂತೆ ಕಟ್ಟಿದ ಈ ಕೋಟೆ ಹದಿನಾರು-ಹದಿನೇಳನೇ ಶತಮಾನಗಳದ್ದು.

ಟಿಪ್ಪಣಿ

೧. *ARIE*, 1959-60, No. B 511.

# ೧೫. ಜಲದುರ್ಗ

ಜಲದುರ್ಗ ಲಿಂಗಸುಗೂರು ತಾಲೂಕಿನಲ್ಲಿ ಲಿಂಗಸುಗೂರಿನ ವಾಯವ್ಯಕ್ಕೆ ೨೫ ಕಿ.ಮೀ. ದೂರದಲ್ಲಿ, ಅಕ್ಷಾಂಶ ೧೬°೧೬' ಉತ್ತರ ಮತ್ತು ರೇಖಾಂಶ ೭೬°.೨೮'ಪೂರ್ವದಲ್ಲಿದೆ. ಐತಿಹಾಸಿಕವಾಗಿ ಪ್ರಸಿದ್ಧವಾಗಿದ್ದ ಜಲದುರ್ಗ ಈಗ ಒಂದು ಸಾಧಾರಣವಾದ ಚಿಕ್ಕ ಗ್ರಾಮವಾಗಿ ಉಳಿದಿದೆ. ಇಲ್ಲಿ ಕೋಟೆ, ದೇವಾಲಯ, ಶಾಸನ ಮುಂತಾದವುಗಳಿವೆ. ಇಲ್ಲಿ ಕೃಷ್ಣ ನದಿಯು ಟಿಸಿಲಾಗಿ ಎರಡು ಭಾಗಗಳಲ್ಲಿ ಒಡೆದು ಮುಂದೆ ಹೋಗಿ ಮತ್ತೆ ಸೇರಿ ಒಂದಾಗುತ್ತದೆ. ಸುತ್ತಲು ನದಿಯಿಂದ ಆವೃತವಾದ ಸುಂದರವಾದ ನಡುಗಡ್ಡೆಯ ಪ್ರದೇಶದಲ್ಲಿ ಕೋಟೆಯಿರುವುದರಿಂದ ಇದಕ್ಕೆ ಜಲದುರ್ಗವೆಂಬ ಹೆಸರು ಬಂದಿದೆ.

### ಐತಿಹಾಸಿಕ ಹಿನ್ನೆಲೆ

ಜಲದುರ್ಗದಲ್ಲಿ ಈಗ ಲಭ್ಯವಿರುವ ಶಾಸನ ಹನ್ನೊಂದನೇ ಶತಮಾನದ್ದು ಕಲ್ಯಾಣ ಚಾಲುಕ್ಯ ಅರಸ ಆರನೇ ವಿಕ್ರಮಾದಿತ್ಯನ ಕ್ರಿ.ಶ. ೧೦೮೭ ಮತ್ತು ೧೧೨೦ರ ಈ ಶಾಸನದ ಕಲ್ಲಿನ ಹಿಂಭಾಗವನ್ನು ಆಂಜನೇಯ ಶಿಲ್ಪ ಕೆತ್ತಲು ಬಳಸಿದ್ದರಿಂದ ಶಾಸನ ಅಲ್ಲಲ್ಲಿ ತ್ರುಟಿತವಾಗಿದೆ. ಕುಡುಗುಂದೆಯ ಮಹಾಜನರು ಧನಂಜಯೇಶ್ವರ ದೇವರಿಗೆ ಭೂಮಿ ದಾನ ನೀಡಿದರು ಮತ್ತು ಕರಡಿಕಲುನಾಡ ವಡ್ಡರಾವುಳದ ಸುಂಕವೆರ್ಗ್ಗಡೆ ಬಾಚಿಮಯ್ಯನಾಯಕ ಕುಡುಗುಂದೆಯ ಸ್ಥಳದ ಒಂದೊಕ್ಕಲು ತೆರೆಯ ಐದು ಪಣಗಳನ್ನು ಅದೇ ದೇವರಿಗೆ ಬಿಟ್ಟನೆಂದು ಶಾಸನದಿಂದ ತಿಳಿಯುತ್ತದೆ.[೧] ಶಾಸನ ಕಲ್ಲನ್ನು ಆಂಜನೇಯನ ವಿಗ್ರಹ ಕೆತ್ತಲು ಬಳಸಿರುವುದರಿಂದ ಅದನ್ನು ಬೇರೆಡೆಯಿಂದ ತಂದಿರುವರೋ ಅಥವಾ ಮೊದಲಿನಿಂದ ಅಲ್ಲಿಯೇ ಇತ್ತೇ ಎಂಬುದು ತಿಳಿಯುವುದಿಲ್ಲ. ಒಂದು ವೇಳೆ ಶಾಸನ ಮೊದಲಿದ್ದ ಸ್ಥಳದಲ್ಲಿಯೇ ಇದ್ದರೆ, ಜಲದುರ್ಗದಲ್ಲಿ ಹನ್ನೊಂದನೇ ಶತಮಾನದಲ್ಲಿ ಧನಂಜಯೇಶ್ವರ ದೇವರ ದೇವಾಲಯವಿತ್ತೆಂದು ಹೇಳಬಹುದು. ಜಲದುರ್ಗದಲ್ಲಿದ್ದ ದೇವಗಿರಿ ಯಾದವರ ಕಾಲದ ಶಾಸನದ ಆಧಾರದ ಮೇಲೆ ಇಲ್ಲಿಯ ಕೋಟೆಯನ್ನು ಹನ್ನೆರಡನೇ ಶತಮಾನದಲ್ಲಿ ಕಟ್ಟಲಾಯಿತೆಂದು ಹೇಳಲಾಗಿದೆ.[೨] ಆದರೆ ಆ ಶಾಸನ ಈಗ ಇಲ್ಲಿ ಕಂಡುಬರುವುದಿಲ್ಲ.

ಜಲದುರ್ಗವು ಯಾದವರ ಕಾಲದಲ್ಲಿ, ವಿಜಯನಗರ ಮತ್ತು ಆದಿಲ್ ಶಾಹೀ ಅರಸರ ಕಾಲದಲ್ಲಿ ಪ್ರಮುಖವಾದ ಕೋಟೆಯಾಗಿತ್ತು. ಹದಿನೇಳನೇ ಶತಮಾನದಲ್ಲಿ ಮೊಘಲರ ಆಡಳಿತಕ್ಕೆ ಒಳಪಟ್ಟಿತ್ತು. ಮೊಘಲ ಚಕ್ರವರ್ತಿ ಔರಂಗ್‌ಜೇಬ್‌ನ ಕ್ರಿ.ಶ. ೧೬೯೯ರ ಇಲ್ಲಿಯ ಶಾಸನದಲ್ಲಿ ಅವನ ಅಧಿಕಾರಿ ಚಿತ್ರಾಂಗದ ಬುಂದೇಲನ ಮಕ್ಕಳು ಬಂದಾಸಿಂಗ್ ಮತ್ತು ತಕೋಕ ಸಿಂಗರ ಉಲ್ಲೇಖವಿದೆ.[೩]

## ಕೋಟೆ

ಜಲದುರ್ಗ ಕೋಟೆ ನೆಲದ ಮೇಲೆ ಪ್ರಾರಂಭವಾಗಿ ಬೆಟ್ಟದ ಮೇಲೆ ಹರಡಿದೆ. ಇದರಲ್ಲಿ ಐದು ಸುತ್ತುಗಳಿವೆ. ಪೂರ್ವ ದಿಕ್ಕಿನಿಂದ ಕೋಟೆಯನ್ನು ಪ್ರವೇಶಿಸಿ ಐದು ಬಾಗಿಲುಗಳನ್ನು ದಾಟಿದ ಮೇಲೆ ಬೆಟ್ಟದ ಮೇಲಿನ ಒಳಕೋಟೆಯನ್ನು ಸೇರುತ್ತೇವೆ. ಉತ್ತರ ದಿಕ್ಕಿನಲ್ಲಿ ನದಿಯ ಕಡಿದಾದ ದಂಡೆಯಿರುವುದರಿಂದ ಕೋಟೆ ಕಟ್ಟುವ ಅವಶ್ಯಕತೆ ಬಿದ್ದಿಲ್ಲ. ಉಳಿದ ಮೂರು ದಿಕ್ಕಿನಲ್ಲಿ ಕೋಟೆಯಿದೆ (ಚಿತ್ರ ೧೦೨).

ಹೊರಕೋಟೆ ಅಥವಾ ಮೊದಲನೇ ಸುತ್ತಿನ ಕೋಟೆಯನ್ನು ಉದ್ದವಾದ ದಿಮ್ಮಿಯಾಕಾರದ ಮತ್ತು ದೊಡ್ಡ ಗಾತ್ರದ ಚೌಕಾಕಾರದ ಕಲ್ಲುಗಳಿಂದ ಕಟ್ಟಿದೆ. ಕೆಲವು ಅನಿಯಮಿತಾಕಾರದ ಕಲ್ಲುಗಳನ್ನು ಬಳಸಿದ್ದರೂ ಕಲ್ಲುಗಳು ಒಂದಕ್ಕೊಂದು ಹೊಂದಿಕೊಳ್ಳುವಂತೆ ಕಟ್ಟಿರುವುದರಿಂದ ಸಂದಿಗಳು ಉಂಟಾಗಿಲ್ಲ (ಚಿತ್ರ ೧೦೩). ಕಲ್ಲುಗಳ ಮಧ್ಯದಲ್ಲಿ ಗಾರೆಯನ್ನು ಬಳಸಿಲ್ಲ. ಕೋಟೆಯ ಒಳಭಾಗವನ್ನು ಚಿಕ್ಕ ಕಲ್ಲುಗಳಿಂದ ಕಟ್ಟಿದೆ. ಈ ಕೋಟೆಯಲ್ಲಿ ಪೂರ್ವ ದಿಕ್ಕಿನಲ್ಲಿ ಅನೇಕ ಚೌಕಾಕಾರದ ಕೊತ್ತಳಗಳು, ಒಂದು ದೊಡ್ಡ ಬಾಗಿಲು ಮತ್ತು ಎರಡು ದಿಡ್ಡಿಗಳು ಇವೆ. ಈಗಿನ ದಾರಿ ಕೋಟೆಯು ಬಿದ್ದಿರುವ ಸ್ಥಳದಲ್ಲಿ ಕೋಟೆಯೊಳಗೆ ಹೋಗುತ್ತದೆ. ಇದರ ದಕ್ಷಿಣಕ್ಕೆ ದೊಡ್ಡ ಬಾಗಿಲಿದೆ. ಬಾಗಿಲಿರುವ ಸ್ಥಳದಲ್ಲಿ ಕೋಟೆ ಒಂದೇ ರೇಖೆಯಲ್ಲಿಲ್ಲ. ಉತ್ತರದಿಂದ ದಕ್ಷಿಣಕ್ಕೆ ಸಾಗುತ್ತಿರುವ ಕೋಟೆ ಲಂಬಕೋನದಲ್ಲಿ ಪೂರ್ವಕ್ಕೆ ತಿರುಗಿ ಸ್ವಲ್ಪ ಮುಂದೆ ಹೋಗಿ ಪುನಃ ಲಂಬಕೋನದಲ್ಲಿ ದಕ್ಷಿಣಕ್ಕೆ ತಿರುಗಿ ಮುಂದೆ ಹೋಗುತ್ತದೆ. ಪೂರ್ವ-ಪಶ್ಚಿಮವಾಗಿರುವ ಭಾಗದಲ್ಲಿ ಉತ್ತರಾಭಿಮುಖವಾದ ಬಾಗಿಲಿದೆ. ಬಾಗಿಲನ್ನು ಮರೆ ಮಾಡಲು ಮುಂದೆ ಒಂದು ಗೋಡೆಯಿಂದ ನೇರವಾದ ಗೋಡೆಯನ್ನು, ಮತ್ತೊಂದು ಗೋಡೆಯಿಂದ 'L' ಆಕಾರದ ಗೋಡೆಯನ್ನು ಮುಂದೆ ಚಾಚಿ ಅವು ಒಂದರ ಪಕ್ಕದಲ್ಲಿ ಮತ್ತೊಂದು ಬರುವಂತೆ ರಚಿಸಿ, ಎರಡು ಗೋಡೆಗಳ ಮಧ್ಯದಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಸಾಗಿ ಬಾಗಿಲಿನ ಮುಂದಿರುವ ಆವರಣವನ್ನು ಸೇರುವಂತೆ ಮಾಡಿದೆ. ಬಾಗಿಲಿಗೆ ಚೌಕಟ್ಟು ಅಥವಾ ಛಾವಣಿ ಇಲ್ಲ. ಈ ಬಾಗಿಲಿನ ಪಕ್ಕದಲ್ಲಿ ದಕ್ಷಿಣಕ್ಕೆ ಒಂದು ದಿಡ್ಡಿಯಿದೆ. ದಿಡ್ಡಿಯ ಪಕ್ಕದ ಕೊತ್ತಳದ ಮೇಲೆ ಹತ್ತಲು ಮೆಟ್ಟಿಲುಗಳಿವೆ. ಕೋಟೆಗೋಡೆಯ ಮೇಲೆ ಅಗಲವಾದ ದಾರಿಯಿದೆ. ಇಲ್ಲಿಂದ ಸ್ವಲ್ಪ ದೂರ ದಕ್ಷಿಣಕ್ಕೆ ಹೋದಾಗ ಮತ್ತೊಂದು ದಿಡ್ಡಿಯಿದೆ.

ಎರಡನೇ ಕೋಟೆಯ ರಚನೆ ಮೊದಲನೇ ಕೋಟೆಯ ರಚನೆಯಂತೆಯೇ ಇದೆ. ಇದರಲ್ಲಿ ಸಹ ಚೌಕಾಕಾರದ ಕೊತ್ತಳಗಳಿವೆ. ಉತ್ತರದ ತುದಿಯಲ್ಲಿ ಒಂದು ವೃತ್ತಾಕಾರದ ಕೊತ್ತಳವಿದೆ. ಕೋಟೆಯಲ್ಲಿ ಎರಡು ಕೊತ್ತಳಗಳ




೧೦೨. ಜಲದುರ್ಗ ಕೋಟೆ: ೧. ಬಾಗಿಲು ೨. ದಿಡ್ಡಿಬಾಗಿಲು, ೩. ದಿಡ್ಡಿಬಾಗಿಲು, ೪. ಬಾಗಿಲು (ಪೂರ್ವ) ೫. ನೀಲಮ್ಮನ ಗುಡಿ, ೬. ಈಶ್ವರನ ಗುಡಿ, ೭. ಹನುಮಂತನ ಕಟ್ಟೆ, ೮. ಬಸವಣ್ಣನ ಗುಡಿ, ೯. ಗಂಗಾಧರ ಗುಡಿ, ೧೦. ಕಟ್ಟಡ, ೧೧. ಕಟ್ಟಡ, ೧೨. ಬಾಗಿಲು, ೧೩. ಬಾಗಿಲು, ೧೪. ಬಾಗಿಲು, ೧೫. ಕಟ್ಟಡ, ೧೬. ರಾಜವಾಡೆ, ೧೭. ಪೃತ್ತಾಕಾರದ ಕೊತ್ತಳ, ೧೮. ಕಟ್ಟಡ, ೧೯. ಕಟ್ಟಡ, ೨೦. ಬಾವಿ, ೨೧. ಸಂಗಮೇಶ್ವರ ದೇವಾಲಯ, ೨೨. ಕಟ್ಟಡ,



೧೦೩. ಜಲಮರ್ಗ, ಪೂರ್ವದಿಕ್ಕಿನ ಹೊರಕೋಟೆ



೧೦೪. ಜಲದುರ್ಗ, ಪೂರ್ವದಿಕ್ಕಿನ ನಾಲ್ಕನೇ ಮತ್ತು ಐದನೇ ಕೋಟೆಗಳು



೧೦೫. ಜಲದುರ್ಗ, ಎರಡನೇ ಕೋಟೆಯ ಪೂರ್ವ ಬಾಗಿಲು, ಪಶ್ಚಿಮದಿಂದ

೧೦೬. ಜಲದುರ್ಗ, ಮೂರನೇ ಕೋಟೆಯ ಬಾಗಿಲು



೧೦೭. ಜಲದುರ್ಗ, ಒಳಕೋಟೆಯ ವಾಯವ್ಯ ಮೂಲೆಯ ಬುರುಜು



೧೦೮. ಜಲದುರ್ಗ, ಕೋಟೆಯೊಳಗೆ ಬೆಟ್ಟದ ತುದಿಯಲ್ಲಿಯ ಕಟ್ಟಡ

ಮಧ್ಯದಲ್ಲಿ ಬಾಗಿಲಿದೆ. ಕಮಾನಿನಾಕಾರದ ಈ ಬಾಗಿಲು ನಂತರದ ಕಾಲದ್ದು. ಬಾಗಿಲ ಪಕ್ಕದಲ್ಲಿ ಗೋಡೆಯ ರಚನೆ ಉಳಿದ ಗೋಡೆಯ ರಚನೆಯಿಂದ ಭಿನ್ನವಾಗಿದೆ. ಇಲ್ಲಿ ಗಾರೆಯನ್ನು ಹೇರಳವಾಗಿ ಬಳಸಿದೆ. ಬಾಗಿಲ ಚೌಕಟ್ಟು ಆಯತಾಕಾರದಲ್ಲಿದ್ದು, ಸರಳವಾಗಿದೆ. ಉತ್ತರಂಗದ ಮೇಲೆ ಗಾರೆ ಮಾಡಿದ ಕುರುಡು ಕಮಾನಿದೆ. ಬಾಗಿಲ ಒಳ ಭಾಗ ಭಾಗಶಃ ಬಿದ್ದುಹೋಗಿದೆ. ಪ್ರವೇಶದ ಪಕ್ಕದಲ್ಲಿ ಎತ್ತರವಿಲ್ಲದ ಕಟ್ಟೆಗಳಿವೆ. ಪ್ರತಿ ಕಟ್ಟೆಯ ಮೇಲೆ ಕಮಾನಿನ ಒಂದು ಅಂಕಣವಿದೆ. ಅಂಕಣದ ಮೇಲೆ ಗುಮ್ಮಟಾಕಾರದ ಛಾವಣಿಯಿದ್ದುದನ್ನು ನೋಡಬಹುದು (ಚಿತ್ರ ೧೦೫). ಎರಡನೇ ಸುತ್ತಿನ ಕೋಟೆಯೊಳಗೆ ಬಾಗಿಲ ಹತ್ತಿರ ಹನುಮಂತನ ಕಟ್ಟೆಯಿದೆ. ಚೌಕಾಕಾರದ ಕಟ್ಟೆಯ ಮೇಲೆ ಹನುಮಂತನ ಶಿಲ್ಪವಿದೆ. ಬಾಗಿಲಿನ ಉತ್ತರಕ್ಕೆ ನೀಲಮ್ಮನ ಗುಡಿ ಮತ್ತು ಈಶ್ವರನ ಗುಡಿ ಇವೆ. ಬಾಗಿಲಿನ ದಕ್ಷಿಣಕ್ಕೆ ಬಸವಣ್ಣನ ಗುಡಿ ಮತ್ತು ಗಂಗಾಧರ ಗುಡಿ ಇವೆ. ಈ ಎಲ್ಲ ಗುಡಿಗಳು ಸರಳವಾಗಿದ್ದು, ಇತ್ತೀಚಿನವಾಗಿವೆ.

ಮೂರನೇ ಕೋಟೆಯ ಬಾಗಿಲಿನ ಮುಂಭಾಗದಲ್ಲಿ ಒಂದು ಕಟ್ಟೆಯಿದೆ. ಅದರ ಪಕ್ಕದಲ್ಲಿಮತ್ತೊಂದು ಕಟ್ಟೆಯಿದ್ದು, ಅದರ ಮೇಲೆ ಮುಸ್ಲಿಮರ ಎರಡು ಗೋರಿಗಳಿವೆ. ದಪ್ಪ ಚೌಕಾಕಾರದ ಕಲ್ಲುಗಳಿಂದ ಕಟ್ಟಿದ ಈ ಕೋಟೆಯಲ್ಲಿ ಸಹ ಚೌಕಾಕಾರದ ಕೊತ್ತಳಗಳಿವೆ. ಇದರಲ್ಲಿ ಎರಡು ಕೊತ್ತಳಗಳ ಮಧ್ಯದಲ್ಲಿ ಪೂರ್ವಭಿಮುಖವಾಗಿರುವ ಬಾಗಿಲಿದೆ. ಬಾಗಿಲ ಪಕ್ಕದಲ್ಲಿ ಗೋಡೆಗೆ ಗಾರೆ ಮಾಡಲಾಗಿದೆ. ಬಾಗಿಲಿನ ಚೌಕಟ್ಟು ಸರಳವಾಗಿದೆ. ಚೌಕಟ್ಟಿನ ಮೇಲೆ ಕುರುಡು ಕಮಾನಿದೆ (ಚಿತ್ರ ೧೦೬). ಪ್ರವೇಶದ ಪಕ್ಕದ ಪ್ರತಿ ಕಟ್ಟೆಯ ಮೇಲೆ ಕಮಾನುಗಳಿಂದ ನಿರ್ಮಿತವಾದ ಒಂದು ಅಂಕಣವಿದೆ. ನಾಲ್ಕನೇ ಕೋಟೆಯನ್ನು ಕಲ್ಲು ಮತ್ತು ಗಾರೆಯಿಂದ ಕಟ್ಟಿದೆ (ಚಿತ್ರ ೧೦೭). ಇದರಲ್ಲಿ ಚೌಕಾಕಾರದ ಮತ್ತು ವೃತ್ತಾಕಾರದ ಕೊತ್ತಳಗಳಿವೆ. ಈ ಕೋಟೆಯಲ್ಲಿಯ ಪೂರ್ವಾಭಿಮುಖವಾಗಿರುವ ಬಾಗಿಲು ಶಿಥಿಲವಾಗಿದೆ. ಐದನೇ ಕೋಟೆಯನ್ನು ಸಹ ಕಲ್ಲು ಮತ್ತು ಗಾರೆಯಿಂದ ಕಟ್ಟಿದೆ (ಚಿತ್ರ ೧೦೭). ಈ ಕೋಟೆಯಲ್ಲಿ ಬಾಗಿಲಿನ ಕಟ್ಟಡವಿಲ್ಲ. ಕೋಟೆಯ ವಾಯವ್ಯ ಮೂಲೆಯಲ್ಲಿ ವೃತ್ತಾಕಾರದ ದೊಡ್ಡ ಕೊತ್ತಳವಿದೆ. ಚೌಕಾಕಾರದ ಕಲ್ಲುಗಳು ಮತ್ತು ಗಾರೆಯಿಂದ ಕಟ್ಟಿದ ಈ ಕೊತ್ತಳದ ಕೈಪಿಡಿ ಗೋಡೆಯಲ್ಲಿ ಎತ್ತರವಾದ ತೆನೆಗಳಿವೆ. ಕೈಪಿಡಿ ಗೋಡೆ ಮತ್ತು ತೆನೆಗಳಲ್ಲಿ ಬಂದೂಕು ಕಿಂಡಿಗಳಿವೆ. ತೆನೆಗಳಿಗೆ ಗಾರೆಮಾಡಿದೆ (ಚಿತ್ರ ೧೦೭).

ಐದನೇ ಅಥವಾ ಒಳಕೋಟೆಯ ಒಳಗ ರಾಜವಾಡೆ ಅಥವಾ ಅರಮನೆಯಂತಹ ದೊಡ್ಡ ಕಟ್ಟಡ, ವೃತ್ತಾಕಾರದ ದೊಡ್ಡ ಕೊತ್ತಳ ಅಥವಾ ಕಾವಲು ಗೋಪುರ, ಸಂಗಮೇಶ್ವರ ದೇವಾಲಯ, ಬಾವಿ ಮತ್ತು

ಕೆಲವು ಕಟ್ಟಡಗಳ ಅವಶೇಷಗಳಿವೆ. ದೊಡ್ಡ ಕಟ್ಟಡವನ್ನು ಎತ್ತರದಲ್ಲಿ ಕಟ್ಟಿರುವುದರಿಂದ ಮೇಲೆ ಹತ್ತಲು ಛಾವಣಿಯುಳ್ಳ ಮೆಟ್ಟಿಲು ದಾರಿಯಿದೆ. ಕಟ್ಟಡದಲ್ಲಿ ದೊಡ್ಡ ಹಜಾರವಿದೆ. ಇದರ ಮುಂಭಾಗ ಶಿಥಿಲವಾಗಿದ್ದು, ಬದಿಯ ಗೋಡೆಗಳಲ್ಲಿ ಒಂದೊಂದು ಕಮಾನಿದೆ (ಚಿತ್ರ ೧೦೮). ದೊಡ್ಡ ಕೊತ್ತಳದ ಕೈಪಿಡಿಗೋಡೆಯಲ್ಲಿ ಬಂದೂಕು ಕಿಂಡಿಗಳಿವೆ. ಹಿಂದು-ಮುಸ್ಲಿಮ್ ಶೈಲಿಯಲ್ಲಿ ಕಟ್ಟಿರುವ ಸಂಗಮೇಶ್ವರ ದೇವಾಲಯದ ಮುಂದೆ ಔರಂಗ್ ಜೇಬ್‌ನ ಶಾಸನವನ್ನು ನೆಟ್ಟಿದೆ ಬಾವಿಯನ್ನು ಆಳವಾಗಿ ಕಲ್ಲಿನಲ್ಲಿ ಕೊರೆದಿದೆ. ಇದರಲ್ಲಿ ವರ್ಷ ವಿಡೀ ನೀರಿರುತ್ತದೆಂದು ಹೇಳುತ್ತಾರೆ.

ಉದ್ದವಾದ ಕಲ್ಲುಗಳಿಂದ ಹನ್ನೆರಡು-ಹದಿಮೂರನೇ ಶತಮಾನಗಳಲ್ಲಿ ಕಟ್ಟಿದ ಕೋಟೆಯನ್ನು ಹದಿನೈದು-ಹದಿನಾರನೇ ಶತಮಾನಗಳಲ್ಲಿ ಬಲಪಡಿಸಿ, ದುರಸ್ತಿ ಮಾಡಿದೆ. ಕಮಾನು ಮತ್ತು ಗುಮ್ಮಟಾಕಾರದ ಬಾಗಿಲುಗಳನ್ನು ಮುಸ್ಲಿಮ್ ಶೈಲಿಯಲ್ಲಿ ಕಟ್ಟಿದೆ. ಕೋಟೆ ಮುಸ್ಲಿಮ್ ಅರಸರ ವಶದಲ್ಲಿದ್ದಾಗ ಇವುಗಳನ್ನು ಕಟ್ಟಿದೆ.

ಕೋಟೆಯೊಳಗೆ ಜನವಾಸವಿಲ್ಲ. ಈಗಿನ ಊರು ಕೋಟೆಯಿಂದ ಸ್ವಲ್ಪ ದೂರದಲ್ಲಿದೆ. ಊರಿನ ಹತ್ತಿರ ವಿಕ್ರಮಾದಿತ್ಯನ ಶಾಸನ ಕಲ್ಲಿನಲ್ಲಿ ಕೆತ್ತಿದ ಆಂಜನೇಯನ ಶಿಲ್ಪವಿದೆ.

### ಟಿಪ್ಪಣಿಗಳು


೧. ಪಾಟೀಲ ಚನ್ನಬಸಪ್ಪ ಎಸ್., ೧೯೯೭, "ಆರನೆಯ ವಿಕ್ರಮಾದಿತ್ಯನ ಜಲದುರ್ಗದ ಶಾಸನ, "*ಇತಿಹಾಸ ದರ್ಶನ*, ಸಂ. ೧೨, ಪು. ೩೫-೩೭.

೨. *ಕರ್ನಾಟಕ ವಿಷಯ ವಿಶ್ವಕೋಶ*, ಮೈಸೂರು ವಿಶ್ವವಿದ್ಯಾಲಯ, ಪು. ೬೮೫-೬೮೬.

೩. *ARIE*, 1989-90, Nos. B 61, C 32.

## ೧೬. ಹಾಲಬಾವಿ

ಹಾಲಬಾವಿ ಲಿಂಗಸುಗೂರು ತಾಲೂಕಿನಲ್ಲಿ ಲಿಂಗಸುಗೂರಿನಿಂದ ವಾಯುವ್ಯಕ್ಕೆ ೧೫ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೬°೧೩' ಉತ್ತರ ಮತ್ತು ರೇಖಾಂಶ ೭೬° ೨೭' ಪೂರ್ವಕ್ಕಿದೆ. ಈ ಚಿಕ್ಕ ಗ್ರಾಮದಲ್ಲಿ ಕೋಟೆ ಮತ್ತು ದೇವಾಲಯಗಳಿವೆ.

ಚಿಕ್ಕದಾದ ಕೋಟೆ ಆಯತಾಕಾರದಲ್ಲಿದೆ. ಕೋಟೆಯ ಪೂರ್ವ ಗೋಡೆಯಮಧ್ಯದಲ್ಲಿ ಬಾಗಿಲಿದೆ. ನಾಲ್ಕು ಮೂಲೆಗಳಲ್ಲಿ ಮತ್ತು ಉತ್ತರ, ದಕ್ಷಿಣ, ಪಶ್ಚಿಮ ಗೋಡೆಗಳ ಮಧ್ಯದಲ್ಲಿ, ಒಟ್ಟು ಏಳು ವೃತ್ತಾಕಾರದ ಕೊತ್ತಳಗಳಿವೆ (ಚಿತ್ರ ೧೮೯). ಕೋಟೆಯ ಪಶ್ಚಿಮ ಮತ್ತು ದಕ್ಷಿಣ (ಚಿತ್ರ ೧೧೧) ಗೋಡೆಗಳು ಶಿಥಿಲವಾಗಿವೆ. ಕೋಟೆಯನ್ನು ಆಯತಾಕಾರದ ಚಿಕ್ಕ ಕಲ್ಲುಗಳಿಂದ ಗಾರೆಯನ್ನು ಬಳಸದೆ ಕಟ್ಟಿದೆ. ಕೊತ್ತಳಗಳ ಮಧ್ಯಭಾಗದಲ್ಲಿ ಉದ್ದವಾದ ಬಂದೂಕು ಕಿಂಡಿಗಳಿವೆ. ಕೊತ್ತಳಗಳ ಒಳಗೆ ನಿಂತು ಗುಂಡು ಹಾರಿಸಲು ಅನುಕೂಲವಾಗುವಂತೆ ಕಿಂಡಿಗಳನ್ನು ಮಾಡಿರುವುದರಿಂದ ಕೊತ್ತಳಗಳೊಳಗೆ ಸ್ಥಳಾವಕಾಶವಿತ್ತು. ಈಗ ಕೊತ್ತಳಗಳನ್ನು ಮಣ್ಣಿನಿಂದ ತುಂಬಿದೆ. ಕೊತ್ತಳಗಳ ಮೇಲ್ಭಾಗದಲ್ಲಿ ಸಹ ಬಂದೂಕು ಕಿಂಡಿಗಳಿವೆ. ಬಿಳಿ ಬೆಣಚು (ಗ್ರಾನೈಟ್) ಕಲ್ಲಿನಿಂದ ಕಟ್ಟಿದ ಕೆಲವು ಕೊತ್ತಳಗಳ ಮೇಲ್ಭಾಗದಲ್ಲಿ ಐದು ಸಾಲು ಕಪ್ಪು ಕಲ್ಲುಗಳನ್ನುಬಳಸಿರುವುದರಿಂದ ಕಪ್ಪು ಬಣ್ಣದ ಪಟ್ಟೆ ಬಳಿದಂತೆ ಕಾಣುತ್ತದೆ (ಚಿತ್ರ ೧೧೨).

ಪೂರ್ವಾಭಿಮುಖವಾಗಿರುವ ಬಾಗಿಲನ್ನು ಇತ್ತೀಚೆಗೆ ದುರಸ್ತಿ ಮಾಡಿ, ಸಿಮೆಂಟ್ ಮಾಡಿದ್ದಾರೆ. ಆದರೂ ಗೋಡೆಯ ಮೇಲ್ಭಾಗದಲ್ಲಿ ಬಂದೂಕು ಕಿಂಡಿಗಳನ್ನು ಈಗಲೂ ನೋಡಬಹುದು. ಬಾಗಿಲಿನ ಚೌಕಟ್ಟು ಸುಸ್ಥಿತಿಯಲ್ಲಿದೆ. ಸರಳವಾದ ಚೌಕಟ್ಟಿನ ಉತ್ತರಂಗದ ಮೇಲೆ ಹೂ, ಸೂರ್ಯ, ಚಂದ್ರರ ಚಿತ್ರಗಳಿವೆ. ಚೌಕಟ್ಟಿನ ಮೇಲೆ ಕುರುಡು ಕಮಾನಿದೆ. ಪ್ರವೇಶದ ಪಾರ್ಶ್ವಗಳಲ್ಲಿ ಕಟ್ಟೆಗಳಿದ್ದು, ಪ್ರತಿ ಕಟ್ಟೆಯ ಮೇಲೆ ಒಂದು ಮರದ ಕಂಬದ ಎರಡು ಅಂಕಣಗಳಿವೆ (ಚಿತ್ರ ೧೧೦). ಕಟ್ಟೆಗಳನ್ನು ಹತ್ತಲು ಪ್ರವೇಶದಿಂದ ಮೆಟ್ಟಿಲುಗಳಿವೆ. ಬಾಗಿಲನ ಒಳ ಬದಿ ಕಮಾನಿನಾಕಾರದಲ್ಲಿದೆ.

ಕೋಟೆಯೊಳಗೆ ಮಧ್ಯಭಾಗದಲ್ಲಿ ವೃತ್ತಾಕಾರದ ಕಾವಲು ಗೋಪುರವಿದೆ. ಇದರ ಎತ್ತರ ೧೫ ಅಡಿ ಮತ್ತು ವ್ಯಾಸ ೨೫ ಅಡಿ. ಕಾವಲು ಗೋಪುರದ ಆಗ್ನೇಯಕ್ಕೆ ಒಂದು ಸೇದುವ ಬಾವಿಯಿದೆ. ಇದಕ್ಕೆ ಮೆಟ್ಟಿಲುಗಳಿಲ್ಲ. ಕಾವಲು ಗೋಪುರದ ವಾಯುವ್ಯಕ್ಕೆ ದ್ಯಾಮವ್ವನ ದೇವಾಲಯವಿದೆ. ಕೋಟೆಯೊಳಗೆ ಜನವಾಸವಿದೆ.

ಚಿಕ್ಕ ಕಲ್ಲುಗಳಿಂದ ಕಟ್ಟಿದ ಈ ಕೋಟೆಯು ಹದಿನೇಳು-ಹದಿನೆಂಟನೇ ಶತಮಾನದ್ದು.







೧೦೯. ಹಾಲಬಾವಿ ಕೋಟೆ: ೧. ಬಾಗಿಲು, ೨. ಬಾವಿ, ೩. ಒಂಟಿ ಕೊತ್ತಳ, ೪. ದ್ಯಾಮವ್ವನ ಗುಡಿ






೧೧೦. ಹಾಲಬಾವಿ, ಬಾಗಿಲು



೧೧೧. ಹಾಲಬಾವಿ, ಕೋಟೆಯ ದಕ್ಷಿಣ ಭಾಗ



೧೧೨. ಹಾಲಬಾವಿ, ಕೋಟೆಯ ಉತ್ತರ ಭಾಗ

## ೧೭. ಮುದುಗಲ್ಲು

ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನಲ್ಲಿ ಇರುವ ಒಂದು ಚಿಕ್ಕ ಪಟ್ಟಣ ಮುದುಗಲ್ಲು. ಇಲ್ಲಿ ಬಲಿಷ್ಠವಾದಂತಹ ಕೋಟೆ ಇದ್ದು, ಈ ಕೋಟೆಯು ತನ್ನದೆ ಆದ ವಿಶೇಷ ಲಕ್ಷಣಗಳಿಂದ ಇತರ ಕೋಟೆಗಳಿಗಿಂತಲೂ ವಿಭಿನ್ನವೆನಿಸಿದೆ. ಈ ಒಂದು ಪಟ್ಟಣ ಎಡೆ ದೊರೆ ನಾಡು ಅಥವಾ ದೋಆಬ್ ಪ್ರದೇಶದ ಮಧ್ಯದಲ್ಲಿ ಇದೆ.

ಮುದುಗಲ್ಲು ಪಟ್ಟಣವು ಲಿಂಗಸೂಗೂರಿಂದ ದಕ್ಷಿಣಕ್ಕೆ ಗಂಗಾವತಿಗೆ ಹೋಗುವ ದಾರಿಯಲ್ಲಿ ೧೮ ಕಿ.ಮೀ. ದೂರದಲ್ಲಿದೆ. ಇದು ೧೬° ೧' ಉತ್ತರ ಅಕ್ಷಾಂಶ ಮತ್ತು ೭೬° ೨೬' ಪೂರ್ವ ರೇಖಾಂಶದಲ್ಲಿದೆ. ಇಲ್ಲಿರುವಂತಹ ಕೋಟೆಯು ಸ್ಥಲದುರ್ಗವಾಗಿದ್ದು, ದಕ್ಷಿಣಕ್ಕೆ ಬೆಟ್ಟ ಇದ್ದುದರಿಂದ ಅಲ್ಲಿ ಕೂಡ ಕೋಟೆಯನ್ನು ಕಟ್ಟಿದ್ದಾರೆ. ಕೋಟೆಯು ಎರಡು ಸುತ್ತಿನಲ್ಲಿದ್ದು ಆಯತಾಕಾರದಲ್ಲಿದೆ.

### ಐತಿಹಾಸಿಕ ಹಿನ್ನೆಲೆ

ಐತಿಹಾಸಿಕ ಮಹತ್ವವುಳ್ಳ ಈ ಊರು ಕ್ರಿ.ಶ. ೧೫೦ರಲ್ಲಿ ಅಸ್ತಿತ್ವದಲ್ಲಿದ್ದುದು, ಗ್ರೀಕ್ ಪ್ರವಾಸಿ ಟಾಲೆಮಿಯಿಂದ ತಿಳಿಯುತ್ತದೆ. ಈತನು ಮುದುಗಲ್ಲನ್ನು 'ಮೊದಗೌಲ್ಲ' ಎಂದು ಉಲ್ಲೇಖಿಸಿದ್ದಾನೆ.[೧] ಸ್ಥಳದಲ್ಲಿ ದೊರೆತಿರುವ ಅತಿ ಪ್ರಾಚೀನ ಶಾಸನ ಕ್ರಿ.ಶ. ೧೦೪೮ ರದು. ಆಗ ಇದು ಕಲ್ಯಾಣ ಚಾಲುಕ್ಯ ಅರಸ ಒಂದನೇ ಸೋಮೇಶ್ವರನ ಸಾಮ್ರಾಜ್ಯದಲ್ಲಿತ್ತು.[೨] ಹನ್ನೊಂದನೇ ಶತಮಾನದಲ್ಲಿ ಇದೊಂದು ವಿದ್ಯಾಕೇಂದ್ರವಾಗಿದ್ದುದರಿಂದ ಇದನ್ನು ಅಗ್ರಹಾರ ಮುದುಗಲ್ಲ ಎಂದು ಕರೆಯುತ್ತಿದ್ದರು. ವಿದ್ಯಾಭ್ಯಾಸದ ಅಭಿವೃದ್ಧಿಗಾಗಿ ಚಾಲುಕ್ಯ ಸೋಮೇಶ್ವರನ ಅಧಿಕಾರಿಯಾದ ದಂಡನಾಯಕ ಸನ್ನಪಯ್ಯರಸನ ಆದೇಶದ ಮೇರೆಗೆ ಪೆರ್ಗಡೆ ಕಾಳಿಮಯ್ಯ ಕರಣ ಚಾಮುಂಡಯ್ಯ ಮತ್ತು ಅಧ್ಯಕ್ಷ ದನ್ನಪಯ್ಯ ಅಗ್ರಹಾರ ಮುದುಗಲ್ಲಿನ ಮುನ್ನೂರು ಮಹಾಜನರಿಗೆ ಮತ್ತು ಅರುವತ್ತೊಕ್ಕಲಿಗೆ ಭೂದಾನವನ್ನು ಕೊಟ್ಟರು.[೩] ಅಗ್ರಹಾರವಾಗಿದ್ದ ಮುದುಗಲ್ಲು ಜನರನ್ನು ಆಕರ್ಷಿಸಿ, ಪಟ್ಟಣವಾಗಿ ಬೆಳೆದು ಕದಂಬರ ರಾಜಧಾನಿಯಾಯಿತು. ಕ್ರಿ.ಶ. ೧೧೯೧ ರಲ್ಲಿ ಯಾದವ ಅರಸ ಭಿಲ್ಲಮನು ಕುಂತಳ ದೇಶವನ್ನು ಆಳುತ್ತಿದ್ದಾಗ ಅವನ ಮಹಾಮಂಡಲೇಶ್ವರನಾದ ಕದಂಬ ಬಿಜ್ಜರಸನು ತರಡಿಕಲ್ಲು ೪೦೦ ರನ್ನು ತನ್ನ ರಾಜಧಾನಿ ಮುದುಗಲ್ಲಿನಿಂದ ಆಳುತ್ತಿದ್ದನು.[೪] ಕ್ರಿ.ಶ. ೧೨೧೫ರಲ್ಲಿ ಯಾದವ ಸಿಂಗಣನ ಕಾಲದಲ್ಲಿಯೂ ಬಿಜ್ಜರಸ ತನ್ನ ಆಳ್ವಿಕೆಯನ್ನು ಮುಂದುವರೆಸಿದನು.[೫] ಕ್ರಿ.ಶ. ೧೨೪೯ರಲ್ಲಿ ಯಾದವರ ಮಂತ್ರಿಯೊಬ್ಬನು ಮುದುಗಲ್ಲಿನಲ್ಲಿದ್ದನು.[೬] ಕ್ರಿ.ಶ. ೧೩೨೭ ರಲ್ಲಿ ಮಹಮ್ಮದ್ ಬಿನ್ ತುಘಲಕನು ಕುಮ್ಮಟವನ್ನು

ವಶಪಡಿಸಿಕೊಂಡಾಗ ಮುದುಗಲ್ಲು ಅವನ ವಶವಾಯಿತು. ಮುಸ್ಲಿಮ್‌ರ ವಿರುದ್ಧ ದಂಗೆಯೆದ್ದ ಸೋಮದೇವನು ಮುದುಗಲ್ಲು ಮತ್ತು ರಾಯಚೂರು ಕೋಟೆಗಳನ್ನು ವಶಪಡಿಸಿಕೊಂಡನು. ಈತನು ಆಂದ್ರಪ್ರದೇಶದ ಕರ್ನೂಲು ಸುತ್ತಮುತ್ತಲಿನ ಪ್ರದೇಶದಿಂದ ಆಳುತ್ತಿದ್ದನು.[೭]

ಹದಿನಾಲ್ಕನೇ ಶತಮಾನದಲ್ಲಿ ವಿಜಯನಗರದಲ್ಲಿ ಸಂಗಮ ಮತ್ತು ಗುಲಬರ್ಗಾದಲ್ಲಿ ಬಹಮನಿ ಅರಸರು ತಮ್ಮ ಆಳ್ವಿಕೆಯನ್ನು ಪ್ರಾರಂಭ ಮಾಡಿದ ಮೇಲೆ ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ಮಧ್ಯದ ದೋಅಬ್ ಪ್ರದೇಶವು ನಿರಂತರವಾದ ಕದನಗಳಿಗೆ ಕಾರಣವಾಯಿತು. ಮುದುಗಲ್ಲನ್ನು ಒಳಗೊಂಡ ಈ ಪ್ರದೇಶವನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಳ್ಳಲು ಈ ಎರಡೂ ರಾಜ್ಯಗಳು ಹವಣಿಸುತ್ತಿದ್ದವು. ಇದರಿಂದಾಗಿ ಅನೇಕ ಯುದ್ಧಗಳು ನಡೆದು, ಯುದ್ಧಗಳ ಫಲಿತಾಂಶಕ್ಕನುಗುಣವಾಗಿ ಮುದುಗಲ್ಲು ವಿಜಯನಗರ ಅಥವಾ ಬಹಮನಿ ಅರಸರ ಸ್ವಾಮಿತ್ವವನ್ನು ಒಪ್ಪಿಕೊಳ್ಳಬೇಕಾಗುತ್ತಿತ್ತು.

ವಿಜಯನಗರಕ್ಕೆ ಸೇರಿದ್ದ ಮುದುಗಲ್ಲು ಬಹಮನಿ ಅರಸರ ವಶದಲ್ಲಿತ್ತು. ಬಹಮನಿ ಅರಸ ಒಂದನೇ ಮಹಮ್ಮದ್ ಶಾಹನು ಮುನ್ನೂರು ಜನ ಸಂಗೀತಗಾರರಿಗೆ ವಿಜಯನಗರ ಅರಸನ ಬೊಕ್ಕಸದಿಂದ ಹಣ ಪಡೆಯುವಂತೆ ತಿಳಿಸಿ ಪತ್ರವನ್ನು ಕೊಟ್ಟನು. ಇದರಿಂದ ಅಪಮಾನಗೊಂಡ ವಿಜಯನಗರ ಅರಸ ಒಂದನೇ ಬುಕ್ಕನು ಬಹಮನಿ ರಾಜ್ಯದ ಮೇಲೆ ದಾಳಿಮಾಡಿ ಮುದುಗಲ್ಲನ್ನು ವಶಪಡಿಸಿಕೊಂಡನು. ಈ ಯುದ್ಧದಲ್ಲಿ ಬಹಮನಿ ಸೇನೆಯ ಹೆಚ್ಚಿನ ಪಾಲು ಸೈನಿಕರು ಹತರಾದರು. ಆಗ ಮಹಮ್ಮದ್ ಶಾಹನು ಸೇಡು ತೀರಿಸಿಕೊಳ್ಳಲು ಎದುರು ದಾಳಿ ಮಾಡಿದನು. ಅವನು ಮುದುಗಲ್ಲು ಮತ್ತು ಆದವಾನಿ ಬಳಿ ವಿಜಯನಗರ ಸೈನ್ಯವನ್ನು ಧ್ವಂಸಮಾಡಿದನು. ಕ್ರಿ.ಶ. ೧೩೬೬-೬೭ರಲ್ಲಿ ಎರಡು ವರ್ಷಗಳ ಕಾಲ ನಡೆದ ಈ ಯುದ್ಧದಲ್ಲಿ ಗಂಡಸರು, ಹೆಂಗಸರು ಮತ್ತು ಮಕ್ಕಳು ಸೇರಿ ಐದು ಲಕ್ಷ ಹಿಂದುಗಳನ್ನು ಕೊಲ್ಲಲಾಯಿತೆಂದು ಫೆರಿಸ್ತಾ ಹೇಳುತ್ತಾನೆ.[೮]

ಕ್ರಿ.ಶ. ೧೩೭೫-೭೬ ರಲ್ಲಿ ಮೊದಲನೇ ಬುಕ್ಕ ಮತ್ತು ಬಹಮನಿ ಅರಸ ಮುಜಾಹಿದ್ ಶಾಹ, ಮತ್ತು ೧೩೯೮-೯೯ರಲ್ಲಿ ವಿಜಯನಗರ ಅರಸ ಎರಡನೇ ಹರಿಹರ ಮತ್ತು ಬಹಮನಿ ಅರಸ ಫಿರೂಜ್ ಶಾಹರ ನಡುವೆ ಯುದ್ಧಗಳಾದವು. ವಿಜಯನಗರ ಅರಸ ಒಂದನೇ ದೇವರಾಯನು ಮುದುಗಲ್ಲಿನ ಅಕ್ಕಸಾಲಿಗನ ಮಗಳನ್ನು ಮೋಹಿಸಿ, ಅವಳನ್ನು ತನಗೆ ಮದುವೆ ಮಾಡಿಕೊಡಬೇಕೆಂದು ಕೇಳಿದನು. ಅವಳ ರಕ್ಷಣೆಗೆ ಮುಂದಾದ ಫಿರೂಜ್ ಶಾಹನು ಕ್ರಿ.ಶ. ೧೪೦೬ ರಲ್ಲಿ ವಿಜಯನಗರದ ಮೇಲೆ ದಾಳಿ ಮಾಡಿ ದೇವರಾಯನನ್ನು ಸೋಲಿಸಿದನೆಂದು ಫೆರಿಸ್ತಾ ಹೇಳುತ್ತಾನೆ.[೯] ಬಹಮನಿ ಅರಸ ಒಂದನೇ ಅಹಮದ್ ಶಾಹನು ವಿಜಯನಗರದ ಮೇಲೆ ದಂಡೆತ್ತಿ

ಹೋದಾಗ ಯುವರಾಜ ಎರಡನೇ ದೇವರಾಯ ಅವನನ್ನು ಎದುರಿಸಿದನು. ಕ್ರಿ.ಶ. ೧೪೨೨-೨೩ ರಲ್ಲಿ ನಡೆದ ಈ ಯುದ್ಧದಲ್ಲಿ ಪ್ರಾರಂಭದಲ್ಲಿ ಎರಡೂ ಕಡೆಗೆ ಸಾಕಷ್ಟು ಹಾನಿಯಾದರೂ ಅಂತಿಮವಾಗಿ ಜಯ ವಿಜಯನಗರದ ಪಾಲಾಯಿತು. ೧೪೨೩ರಲ್ಲಿ ಯುದ್ಧ ನಡೆದಿರುವಾಗಲೇ ಬಹಮನಿ ರಾಜಧಾನಿಯನ್ನು ಗುಲಬರ್ಗಾದಿಂದ ಉತ್ತರಕ್ಕೆ ಬೀದರಿಗೆ ಸ್ಥಳಾಂತರಿಸಿದ್ದು ಇದನ್ನು ಪುಷ್ಟೀಕರಿಸುತ್ತದೆ.

ಬಹಮನಿ ಸುಲ್ತಾನ ಅಲಾವುದ್ದೀನನು ಕ್ರಿ.ಶ. ೧೪೩೫-೩೬ರಲ್ಲಿ ಮುದುಗಲ್ಲು ಕೋಟೆಯನ್ನು ವಶಪಡಿಸಿಕೊಂಡನೆಂದು ಹೇಳಲಾಗುತ್ತದೆ. ಆದರೆ ಅದೇ ಕೋಟೆಯಲ್ಲಿರುವ ಕ್ರಿ.ಶ. ೧೪೩೬ರ ಶಾಸನದ ಪ್ರಕಾರ ಕೋಟೆಯು ಎರಡನೇ ದೇವರಾಯನ ವಶದಲ್ಲಿತ್ತು. ದೇವರಾಯನು ಮುದುಗಲ್ಲ ನಾಡನ್ನು ವರದಣ್ಣನಾಯಕನಿಗೆ ನಾಯಕತನಕ್ಕೆ ಕೊಟ್ಟನು. ಮುನಗಲ್ಲ ಸಿಂಪಿಗ ಭೂತನಾಥನ ಮಗ ರಾಹುತ ವೀರಣ್ಣನು ಪಣತೊಟ್ಟು ಸುಲ್ತಾನನ ಬೆಟ್ಟದ ಕೋಟೆಯ ಹೊನ್ನ ಕಳಸವನ್ನು ತೆಗೆದುಕೊಂಡು ಬಂದು ಅದನ್ನು ದೇವರಾಯನಿಗೆ ಕಳಿಸಿದಾಗ, ಅರಸನಿಗೆ ಸಂತೋಷವಾಯಿತು. ಆಗ ವರದಣ್ಣನಾಯಕ, ಮುದುಗಲ್ಲ ಅಧಿಕಾರಿಗಳು, ಹಿರಿಯರು ಮತ್ತು ಸಮಸ್ತ ಪ್ರಜೆಗಳು ಸೇರಿಕೊಂಡು ವೀರಣ್ಣನಿಗೆ ಮೇಟೆಗೊಳಗವನ್ನು ಕೊಟ್ಟರೆಂದು ಅದು ತಿಳಿಸುತ್ತದೆ.[೧೦]

ಅಲಾವುದ್ದೀನನು ಕ್ರಿ. ಶ. ೧೪೪೩-೪೪ ರಲ್ಲಿ ವಿಜಯನಗರದ ಮೇಲೆ ದಂಡೆತ್ತಿ ಹೋದನು. ಈ ಯುದ್ಧದ ವಿವರವನ್ನು ಫೆರಿಸ್ತಾ ಈ ರೀತಿ ಕೊಡುತ್ತಾನೆ : "ಎರಡು ತಿಂಗಳ ಅವಧಿಯಲ್ಲಿ ಮುದುಗಲ್ಲ ಹತ್ತಿರ ಎರಡು ದೊಡ್ಡ ಸೈನ್ಯಗಳ ನಡುವೆ ಮೂರು ಹೋರಾಟಗಳು ನಡೆದವು. ಅವುಗಳಲ್ಲಿ ಮೊದಲನೆ ಯದರಲ್ಲಿ ಎರಡೂ ಕಡೆಯ ಹಲವಾರು ಜನ ಹತರಾದರು. ಹಿಂದುಗಳು ಅನುಕೂಲಕರ ಸ್ಥಿತಿಯಲ್ಲಿದ್ದುದರಿಂದ ಮುಸಲ್ಮಾನರು ಹೆಚ್ಚು ತೊಂದರೆಯನ್ನು ಅನುಭವಿಸಿದರು. ಉಳಿದೆರಡರಲ್ಲಿ ಸುಲ್ತಾನನು ಜಯಶಾಲಿಯಾದನು. ಕೊನೆಯದರಲ್ಲಿ ಖಾನಜುಮ್ಮಾನನು ಎಸೆದ ಬರ್ಚಿಯಿಂದ ದೇವರಾಯನ ಹಿರಿಯ ಮಗ ಹತನಾದಾಗ, ಹಿಂದುಗಳು ಆಘಾತಗೊಂಡು ಮುದುಗಲ್ಲು ಕೋಟೆಯೊಳಕ್ಕೆ ಓಡಿಹೋದರು."[೧೧] ಆದರೆ ವಿಜಯನಗರ ಸಾಮ್ರಾಜ್ಯ ಮೊದಲಿನಂತೆ ಬಲಿಷ್ಠವಾಗಿ ಉಳಿದುದನ್ನು ನಾವು ಕಾಣುತ್ತೇವೆ.

ಬಹಮನಿ ಅರಸ ಮೂರನೇ ಮಹಮ್ಮದ್ ಶಾಹನು ಕ್ರಿ.ಶ. ೧೪೮೨ ರಲ್ಲಿ ತೀರಿಕೊಂಡಾಗ ಬಹಮನಿ ರಾಜ್ಯವು ಬಿಜಾಪುರದ ಆದಿಲ್ ಶಾಹಿ, ಬೀದರ್‌ನ ಬರೀದ್ ಶಾಹಿ, ಅಹಮದ್‌ನಗರದ ನಿಜಾಮ್ ಶಾಹಿ, ಗೋಲ್ಕೊಂಡೆಯ ಕುತುಬ್ ಶಾಹಿ ಮತ್ತು ಬೇರಾರ್‌ನ ಇಮದ್ ಶಾಹಿ, ಹೀಗೆ ಐದು ರಾಜ್ಯಗಳಲ್ಲಿ ವಿಂಗಡನೆಯಾಯಿತು. ಅದೇ ಸಮಯದಲ್ಲಿ ವಿಜಯನಗರದಲ್ಲಿ ಸಂಗಮರ ಆಳ್ವಿಕೆ ಕೊನೆಗೊಂಡು ಕ್ರಿ.ಶ.

೧೪೮೫ ರಲ್ಲಿ ಒಂದನೇ ನರಸಿಂಹನಿಂದ ಸಾಳುವ ವಂಶದ ಆಳ್ವಿಕೆ ಪ್ರಾರಂಭವಾಯಿತು. ಸಾಳುವ ನರಸಿಂಹನು ತೀರಿಕೊಂಡಾಗ, ಆತನ ಇಬ್ಬರು ಮಕ್ಕಳು ಚಿಕ್ಕವರಾಗಿದ್ದುದರಿಂದ, ಆತನ ದಂಡನಾಯಕ ಮತ್ತು ಮಂತ್ರಿಯಾದ ತುಳುವ ನರಸನಾಯಕನು ಕ್ರಿ. ಶ. ೧೪೯೧ ರಿಂದ ೧೫೦೩ ರವರೆಗೆ ರಾಜ್ಯದ ಆಡಳಿತವನ್ನು ಕೈಗೆತ್ತಿಕೊಂಡನು. ಅವನ ಕಾಲದಲ್ಲಿ ಅಹಮದ್ ನಗರದ ಖಾಸಿಮ್ ಬರೀದನು ತನ್ನ ವೈರಿ ಬಿಜಾಪುರದ ಯೂಸುಫ್ ಆದಿಲ್ ಖಾನನ ವಿರುದ್ಧ ವಿಜಯನಗರದ ಸಹಾಯ ಕೇಳಿ, ಅದಕ್ಕೆ ಪ್ರತಿಯಾಗಿ ಮುದಗಲ್ಲು ಮತ್ತು ರಾಯಚೂರನ್ನು ಬಿಟ್ಟುಕೊಡುವುದಾಗಿ ಹೇಳಿದನು. ಈ ಅವಕಾಶದ ಲಾಭ ಪಡೆದ ನರಸನಾಯಕನು ತುಂಗಭದ್ರವನ್ನು ದಾಟಿ ಮುದುಗಲ್ಲು ಮತ್ತು ರಾಯಚೂರನ್ನು ವಶಪಡಿಸಿಕೊಂಡನು. ಮುದುಗಲ್ಲು ಕೋಟೆ ನರಸನಾಯಕನ ವಶದಲ್ಲಿದ್ದುದು ಅಲ್ಲಿಯ ನಾಲ್ಕು ಶಾಸನಗಳಿಂದ ದೃಢಪಡುತ್ತದೆ. ನರಸನಾಯಕನು ವಿಜಯನಗರವನ್ನು ಆಳುತ್ತಿದ್ದಾಗ ಸಾಳುವ ತಿಮ್ಮಯ್ಯನು ಒಂದು ಬಾವಿಯನ್ನು ಕಟ್ಟಿಸಿದನೆಂದು ಕ್ರಿ.ಶ ೧೫೦೨ರ ಶಾಸನವು ತಿಳಿಸುತ್ತದೆ.[೧೨] ಇದೇ ಸಾಳುವ ತಿಮ್ಮಯ್ಯನು ಎರಡು ಪೊತ್ತಳಗಳನ್ನು ಕಟ್ಟಿಸಿದ್ದು ಅವುಗಳ ಮೇಲಿನ ಶಾಸನಗಳಿಂದ ತಿಳಿಯುತ್ತದೆ.[೧೩] ಈ ಸಾಳುವ ತಿಮ್ಮಯ್ಯನೇ ಮುಂದೆ ಕೃಷ್ಣದೇವರಾಯನ ಮಂತ್ರಿಯಾದ ಸಾಳುವ ತಿಮ್ಮರಸ. ಕುರುಗೋಡ ಸೋಮಣ್ಣನಾಯಕನ ಪ್ರಧಾನನ ಮಗ ನರಸಪ್ಪನು ಕ್ರಿ.ಶ. ೧೫೦೩ ರಲ್ಲಿ ಒಂದು ಬಾವಿಯನ್ನು ಕಟ್ಟಿಸಿದನು.[೧೪]

ಕ್ರಿ.ಶ. ೧೫೦೫ರಲ್ಲಿ ವಿಜಯನಗರದ ಸಿಂಹಾಸನವನ್ನೇರಿದ ತುಳುವ ವಂಶದ ನರಸಿಂಹನು ಬಿಜಾಪುರದ ಯೂಸುಫ್ ಆದಿಲ್ ಖಾನನೊಂದಿಗೆ ಯುದ್ಧಮಾಡಿ ಅವನ ವಶದಲ್ಲಿದ್ದ ಮುದಗಲ್ಲು ಮತ್ತು ರಾಯಚೂರನ್ನು ವಶಪಡಿಸಿಕೊಂಡನು. ಈ ಯುದ್ಧವು ಕ್ರಿ.ಶ. ೧೫೦೫ ಮತ್ತು ೧೫೦೯ರ ಮಧ್ಯದಲ್ಲಿ ನಡೆಯಿತು. ನರಸಿಂಹನ ನಂತರ ಪಟ್ಟಕ್ಕೆ ಬಂದ ಕೃಷ್ಣದೇವರಾಯನು ಕ್ರಿ.ಶ. ೧೫೨೦ರಲ್ಲಿ ಬಿಜಾಪುರದ ಇಸ್ಮಾಯಿಲ್ ಆದಿಲ್ ಶಾಹನನ್ನು ಸೋಲಿಸಿ ರಾಯಚೂರು ಕೋಟೆಯನ್ನು ವಶಪಡಿಸಿಕೊಂಡನು. ವಿಜಯ ನಗರ ಅರಸನು ರಾಜಧಾನಿಗೆ ಮರಳಿದಾಗ ಅವನು ಆದಿಲ್‌ಶಾಹನಿಂದ ವಶಪಡಿಸಿಕೊಂಡದ್ದನ್ನು ಹಿಂದಕ್ಕೆ ಕೊಡಬೇಕೆಂಬ ಬೇಡಿಕೆ ಆದಿಲ್ ಶಾಹನಿಂದ ಬಂದಿತು. ಆದಿಲ್ ಶಾಹನು ತನ್ನ ಪಾದವನ್ನು ಚುಂಬಿಸಿದರೆ ಮಾತ್ರ ಬಿಟ್ಟುಕೊಡಲು ಕೃಷ್ಣದೇವರಾಯನು ಒಪ್ಪಿದನು. ಇಬ್ಬರು ಮುದುಗಲ್ಲಿನಲ್ಲಿ ಭೇಟಿಯಾಗಲು ನಿರ್ಧರಿಸಿ ದರು. ಕೃಷ್ಣದೇವರಾಯನು ಮುದುಗಲ್ಲನ್ನು ತಲುಪಿದಾಗ ಅಲ್ಲಿ ಆದಿಲ್ ಶಾಹನು ಇಲ್ಲದಿದ್ದುದರಿಂದ ಕುಪಿತಗೊಂಡು, ಸೀಮೆಯನ್ನು ದಾಟಿ ಬಿಜಾಪುರವನ್ನು ವಶಪಡಿಸಿಕೊಂಡನು. ಕೃಷ್ಣದೇವರಾಯನು ಕ್ರಿ.ಶ. ೧೫೨೯ರಲ್ಲಿ ಮಡಿದ ನಂತರ ಇಸ್ಮಾಯಿಲ್ ಆದಿಲ್

ಶಾಹನು ಪುನಃ ದೋಲಬ್ ಪ್ರದೇಶದ ಮೇಲೆ ದಾಳಿ ಮಾಡಿ ಮುದುಗಲ್ಲು ಮತ್ತು ರಾಯಚೂರನ್ನು ವಶಪಡಿಸಿಕೊಂಡನು. ಮುದುಗಲ್ಲು ಕೋಟೆ ಆದಿಲ್ ಶಾಹಿ ಅರಸರ ವಶದಲ್ಲಿದ್ದುದನ್ನು ಕೋಟೆಯೊಳಗಿನ ಒಂದನೇ ಇಬ್ರಾಹಿಮ್ ಆದಿಲ್ ಶಾಹನ ಕ್ರಿ.ಶ. ೧೫೩೭ರ ಶಾಸನ ದೃಢಪಡಿಸುತ್ತದೆ.[೧೫]

ವಿಜಯನಗರ ಅರಸ ಸದಾಶಿವರಾಯನು ಚಿಕ್ಕವನಾಗಿದ್ದುದರಿಂದ ಅಳಿಯ ರಾಮರಾಯನು ಆಡಳಿತ ಸೂತ್ರವನ್ನು ಹಿಡಿದನು. ರಾಮರಾಯ ಅಹಮದ್ ನಗರದ ಬುರ್‌ಹಾನ್‌ನ ನಡುವೆ ಬಿಜಾಪುರದ ಇಬ್ರಾಹಿಮ್ ವಿರುದ್ಧ ಒಂದು ಒಪ್ಪಂದವಾಯಿತು. ಇಬ್ಬರು ಅರಸರು ಕ್ರಿ.ಶ. ೧೫೫೧ರಲ್ಲಿ ರಾಯಚೂರಿನ ಹತ್ತಿರ ಭೇಟಿಯಾಗಿ ರಾಯಚೂರು ಮತ್ತು ಮುದುಗಲ್ಲನ್ನು ವಶಪಡಿಸಿಕೊಂಡರು. ಇವು ಮತ್ತೊಮ್ಮೆ ಹಿಂದು ಸಾಮ್ರಾಜ್ಯಕ್ಕೆ ಸೇರಿದವು. ಕ್ರಿ.ಶ. ೧೫೬೫ರವರೆಗೆ ಮುದುಗಲ್ಲು ವಿಜಯನಗರ ಅರಸರ ವಶದಲ್ಲಿದ್ದುದು ಅನೇಕ ಶಾಸನಗಳಿಂದ ದೃಢಪಡುತ್ತದೆ. ಅಲ್ಲಿಯ ಕ್ರಿ.ಶ. ೧೫೫೩ರ ಶಾಸನವು ಅಳಿಯ ರಾಮರಾಯನು ಮೂವರು ನಾವಿದರಿಗೆ ಭೂದಾನವನ್ನು ಕೊಟ್ಟುದನ್ನು ಉಲ್ಲೇಖಿಸುತ್ತದೆ.[೧೬] ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲೂಕಿನ ಕರಡಿ ಗ್ರಾಮದ ಅದೇ ವರ್ಷದ ಶಾಸನವು ಅದೇ ಅರಸ ಮುದುಗಲ್ಲ ಸೀಮೆಯ ತೆರಿಗೆಯನ್ನು ವಿನಾಯಿತಿಗೊಳಿಸಿದ್ದನ್ನು ದಾಖಲಿಸುತ್ತದೆ.[೧೭] ಆಗ ವೆಂಗಳಪ್ಪನಾಯಕನು ಮುದುಗಲ್ಲು ಕೋಟೆಯ ಅಧಿಕಾರಿಯಾಗಿದ್ದನು.[೧೮] ರಾಮರಾಯನ ಮಗನಾದ ಕೃಷ್ಣರಾಜನ ಅಧೀನ ಅಧಿಕಾರಿಯಾಗಿದ್ದ ಈತನು ಕ್ರಿ.ಶ. ೧೫೬೦ರಲ್ಲಿ ಮುದುಗಲ್ಲು ಕೋಟೆಯ ಮೊಗಸಾಲೆಯನ್ನು ಕಟ್ಟಿಸಿ ಅದರ ಕದಗಳನ್ನು ಮಾಡಿಸಿದನು.[೧೯] ಈ ಕಾಲದಲ್ಲಿ ಕೋಟೆಯ ಅನೇಕ ಕೊತ್ತಳಗಳು ನಿರ್ಮಾಣವಾದದ್ದು ಕೋಟೆಯ ಮೇಲಿನ ಶಾಸನಗಳಿಂದ ತಿಳಿಯುತ್ತದೆ. ಕೃಷ್ಣರಾಜನು ಹನುಮಂತನ ಕೊತ್ತಳ[೨೦] ಮತ್ತು ಕೊಮಾರಬುರುಜನ್ನು,[೨೧] ರಾಮರಾಯನು ಹೆಸರಿಲ್ಲದ ಒಂದು ಕೊತ್ತಳವನ್ನು,[೨೨] ವೆಂಗಳಪ್ಪ ನಾಯಕನು ಬಸವನ ಕೊತ್ತಳ[೨೩] ಮತ್ತು ಹೆಸರಿಲ್ಲದ ಮತ್ತೊಂದು ಕೊತ್ತಳವನ್ನು[೨೪] ಕಟ್ಟಿಸಿದರು. ಹನುಮಂತನ ಕೊತ್ತಳದ ನಿರ್ಮಾಣವು ಕ್ರಿ.ಶ. ೧೫೫೪ರಲ್ಲಿ ಪೂರ್ಣಗೊಂಡಿತು.[೨೫]

ವಿಜಯನಗರದ ರಾಮರಾಯ ಮತ್ತು ಐದು ಜನ ಮುಸ್ಲಿಮ್ ಅರಸರ ಸಂಯುಕ್ತ ಸೇನೆಗಳ ನಡುವೆ ಬಾಗಲಕೋಟೆ ಜಿಲ್ಲೆಯ ರಕ್ಕಸಗಿ ಮತ್ತು ತಂಗಡಗಿ ಗ್ರಾಮಗಳ ಹತ್ತಿರ ಕ್ರಿ.ಶ. ೧೫೬೫ರಲ್ಲಿ ಭೀಕರವಾದ ಯುದ್ಧ ನಡೆಯಿತು. ಈ ಯುದ್ಧದಲ್ಲಿ ರಾಮರಾಯನು ಹತನಾದನು. ತದನಂತರ ಮುದುಗಲ್ಲು ಮುಸ್ಲಿಮ್ ಅರಸರ ವಶದಲ್ಲಿ ಉಳಿಯಿತು.

ಆದಿಲ್ ಶಾಹಿ ಆಳ್ವಿಕೆ ಕ್ರಿ.ಶ. ೧೬೮೬ರಲ್ಲಿ ಕೊನೆಗೊಳ್ಳುವ ವರೆಗೆ ಮುದುಗಲ್ಲು ಅವರ ವಶದಲ್ಲಿ ಇದ್ದುದನ್ನು ಅಲ್ಲಿಯ ಅನೇಕ ಶಾಸನಗಳು ದೃಢಪಡಿಸುತ್ತವೆ. ಅವುಗಳಲ್ಲಿ ಮೂರು ವಿಜಯನಗರದೊಂದಿಗೆ ಕೊನೆಯ ಯುದ್ಧ ಮಾಡಿದ ಅಲಿ ಆದಿಲ್ ಶಾಹನ (ಕ್ರಿ.ಶ. ೧೫೫೮-೮೦) ಕಾಲದವು, ಹೆಚ್ಚಿನವು ಎರಡನೇ ಇಬ್ರಾಹಿಮ್ ಆದಿಲ್‌ಶಾಹನ (ಕ್ರಿ.ಶ. ೧೫೮೦-೧೬೨೭) ಕಾಲದವು ಮತ್ತು ಒಂದು ಮಹಮ್ಮದ್ ಆದಿಲ್‌ಶಾಹನ (ಕ್ರಿ.ಶ. ೧೬೨೭-೫೭) ಕಾಲದ್ದು. ಮೊದಲನೇ ಶಾಸನವನ್ನು ಬಿಜಾಪುರ ಸೈನ್ಯವು ವಿಜಯನಗರ ಸೈನ್ಯದ ಮೇಲೆ ಕ್ರಿ.ಶ. ೧೫೬೫ರಲ್ಲಿ ಸಾಧಿಸಿದ ವಿಜಯದ ಸಂಕೇತವಾಗಿ ಕಟ್ಟಿಸಿದ ಫತೇಜಂಗು ಬುರುಜಿನ ಮೇಲಿದೆ. ಕ್ರಿ.ಶ. ೧೫೮೮ರ ಈ ಶಾಸನವು ಫತೇಜಂಗು ಬುರುಜಿನ ನಿರ್ಮಾಣವು ಅಲಿ ಆದಿಲ್ ಶಾಹನ ಕಾಲದಲ್ಲಿ ಪ್ರಾರಂಭವಾಯಿತು ಮತ್ತು ನಿರ್ಮಾಣದ ಉಸ್ತುವಾರಿಯನ್ನು ವಹಿಸಿದ ದಿಯಾನತ್‌ಖಾನನು ಶಾಸನವನ್ನು ಹಾಕಿಸಿದನೆಂದು ತಿಳಿಸುತ್ತದೆ. ದಿಯಾನತ್ ಖಾನನು ಮುದುಗಲ್ಲು ಕೋಟೆಯ ಉಪಪಾಲಕ (ನಾಯಿಬ್ ಗೈಬತ್) ಆಗಿದ್ದನು.[೨೬] ಅದೇ ಅರಸನ ಆಳ್ವಿಕೆಯ ಮತ್ತೊಂದು ಶಾಸನ ದೀನ್‌ದಾರ್ ಖಾನನು ಮಸೀದಿಯನ್ನು ಕಟ್ಟಿಸಿದನೆಂದು ತಿಳಿಸುತ್ತದೆ.[೨೭] ಕ್ರಿ.ಶ.೧೫೭೪-೭೫ರ ಶಾಸನವು ಅಲಿ ಬುರುಜಿನ ನಿರ್ಮಾಣವನ್ನು ಉಲ್ಲೇಖಿಸುತ್ತದೆ.[೨೮] ಇದನ್ನು ಬಂಕಾಪುರ ಕೋಟೆಯನ್ನು ಜಯಿಸಿದ ಸಂಕೇತವಾಗಿ ನಿರ್ಮಿಸಿದೆ. ಕ್ರಿ.ಶ. ೧೫೮೩-೮೪ರಲ್ಲಿ ಒಂದು ಮಸೀದಿ[೨೯] ಮತ್ತು ಕ್ರಿ.ಶ. ೧೫೮೫ರಲ್ಲಿ ಮತ್ತೊಂದು ಮಸೀದಿಯ[೩೦] ನಿರ್ಮಾಣವನ್ನು ಎರಡು ಶಾಸನಗಳು ಉಲ್ಲೇಖಿಸುತ್ತವೆ. ಎರಡನೇ ಇಬ್ರಾಹಿಮ್ ಆದಿಲ್‌ಶಾಹನ ಆಳ್ವಿಕೆಯಲ್ಲಿ ಕ್ರಿ.ಶ. ೧೬೦೩-೧೬೦೪ರಲ್ಲಿ ಮಂತ್ರಿ ದಿಲಾವರ್‌ಖಾನನ ಕಾಲದಲ್ಲಿ ಒಂದು ಬುರುಜನ್ನು ಕಟ್ಟಲಾಯಿತು.[೩೧] ಹೋರ ಕೋಟೆಯುದ್ದಕ್ಕೂ ಬರೆದ ಮಲಿಕ ಮುರಾದನ ನಾಲ್ವತ್ತನಾಲ್ಕು ಶಾಸನಗಳಿವೆ. ಎರಡನೇ ಇಬ್ರಾಹಿಮ್ ಆದಿಲ್ ಶಾಹನ ಅಧಿಕಾರಿಯಾದ ಈತನು ಕ್ರಿ.ಶ. ೧೫೯೧ ರಿಂದ ೧೬೧೧ರ ವರೆಗೆ ಅಗುಸೆ, ದಿಡ್ಡಿ, ಬುರುಜು ಮತ್ತು ನಿಟುಗಳನ್ನು ಕಟ್ಟಿಸಿದುದನ್ನು ಇವು ತಿಳಿಸುತ್ತವೆ.[೩೨] ಮಹಮ್ಮದ್ ಆದಿಲ್ ಶಾಹನ ಆಳ್ವಿಕೆಯ ಕ್ರಿ.ಶ. ೧೬೪೩ರ ಒಂದು ಶಾಸನ ಅವನ ಅಧಿಕಾರಿಯಾದ ರಾಘುವಂಬು ಬೆಟ್ಟದ ಮೇಲೆ ಗಗನ್‌ಮಹಲನ್ನು ಕಟ್ಟಿಸಿದುದನ್ನು ಉಲ್ಲೇಖಿಸುತ್ತದೆ.[೩೩]

ಹದಿನೆಂಟನೇ ಶತಮಾನದಲ್ಲಿ ಕೋಟೆಯು ಮೊಘಲರ ವಶದಲ್ಲಿತ್ತು. ಮೊಘಲ ಚಕ್ರವರ್ತಿ ಔರಂಗ ಜೇಬನ ಆಳ್ವಿಕೆಯಲ್ಲಿ ರಾಜ ರಾಮಸಿಂಗ್ ಸಿಸೋಡಿಯನು ಮುದುಗಲ್ಲಿನ ಕಿಲ್ಲೇದಾರ ಮತ್ತು ಫೌಜ್‌ದಾರ ನಾಗಿದ್ದನು. ಇವನು ಕ್ರಿ.ಶ. ೧೭೦೩ರಲ್ಲಿ ಒಂದು ಬುರುಜನ್ನು ದುರಸ್ತಿಗೊಳಿಸಿ ಅದಕ್ಕೆ ರಾಮಬುರುಜು

ಎಂದು ಹೆಸರಿಟ್ಟನು.[೬೪] ಹದಿನೆಂಟನೇ ಶತಮಾನದ ಮೊದಲನೇ ಪಾದದವರೆಗೆ ಕೋಟೆಯು ಗುಜರಾತಿ ಅಧಿಕಾರಿಗಳ ವಶದಲ್ಲಿದ್ದುದು ಕೋಟೆಯ ಮೇಲಿನ ಗುಜರಾತಿ ಶಾಸನಗಳಿಂದ ಸ್ಪಷ್ಟವಾಗುತ್ತದೆ.[೬೫] ಅವುಗಳಲ್ಲಿ ಒಂದು ಕ್ರಿ.ಶ. ೧೮೨೪ ರದ್ದು.

### ಕೋಟೆ

ಆಯತಾಕಾರದಲ್ಲಿರುವ ದೊಡ್ಡ ಕೋಟೆಯ ಬಹುಭಾಗ ಸುಸ್ಥಿತಿಯಲ್ಲಿದೆ.[೬೬] ಕೋಟೆ ಗೋಡೆ ಯುದ್ದಕ್ಕೂ ಒಳಗೆ ಮತ್ತು ಹೊರಗೆ ಯಾವುದೇ ಒತ್ತುವರಿ ಇಲ್ಲದಿರುವವುದರಿಂದ ಅಧ್ಯಯನಕ್ಕೆ ಬಹಳ ಅನುಕೂಲಕರವಾಗಿದೆ. ಸಮತಟ್ಟಾದ ನೆಲದ ಮೇಲಿರುವ ಕೋಟೆಯು ಪಕ್ಕದ ಬೆಟ್ಟದ ಮೇಲೂ ವಿಸ್ತರಿಸಿದೆ (ಚಿತ್ರ ೧೧೩).

ಎರಡು ಸುತ್ತಿನ ಕೋಟೆಯ ಹೊರಕೋಟೆಯು ವಿಶಾಲವಾಗಿದ್ದು ಎರಡು ಕೋಟೆ ಗೋಡೆಗಳನ್ನು ಹೊಂದಿದೆ (ಚಿತ್ರಗಳು ೧೧೪-೧೧೫). ಎರಡು ಗೋಡೆಗಳು ಒಂದರ ಪಕ್ಕದಲ್ಲಿ ಇನ್ನೊಂದು, ಒಂದನ್ನೊಂದು ಅನುಸರಿಸಿ ಒಟ್ಟಿಗೆ ಸಾಗುತ್ತವೆ. ಎರಡರ ಮಧ್ಯದ ಅಂತರ ಬಹಳ ಕಡಿಮೆಯಿದ್ದು, ದಾರಿ ಮಾತ್ರವಿರುವುದರಿಂದ ಇಲ್ಲಿ ಯಾವುದೇ ಕಟ್ಟಡಗಳಿಲ್ಲ (ಚಿತ್ರ ೧೧೬). ಎರಡೂ ಗೋಡೆಗಳ ಹೊರಮೈಯನ್ನು ದಪ್ಪ ಕಲ್ಲುಗಳಿಂದ ಮತ್ತು ಒಳಮೈಯನ್ನು ಚಿಕ್ಕ ಕಲ್ಲುಗಳಿಂದ ಯಾವುದೇ ಗಾರೆಯನ್ನು ಬಳಸದೆ ಕಟ್ಟಿದ್ದಾರೆ. ಕಲ್ಲುಗಳ ಜೋಡಣೆ ಅಚ್ಚುಕಟ್ಟಾಗಿದ್ದು ಮಧ್ಯದಲ್ಲಿ ಸಂದಿಗಳಿಲ್ಲ. ಸಂದಿಗಳಲ್ಲಿ ಕಲ್ಲಿನ ಚಕ್ಕೆ ಬಳಸಿರುವುದು ಅತಿ ವಿರಳ. ವಿಜಯನಗರ ಕಾಲದಲ್ಲಿ ಕಟ್ಟಿದ ಒಳಗೋಡೆಯನ್ನು ಮುಸ್ಲಿಮರು ವಶಪಡಿಸಿಕೊಂಡಾಗ ದುರಸ್ತಿಗೊಳಿಸಿದ್ದಾರೆ. ಹೊರಗೋಡೆಯನ್ನು ಬಿಜಾಪುರದ ಎರಡನೇ ಇಬ್ರಾಹಿಮ್ ಆದಿಲ್ ಶಾಹನ ಅಧಿಕಾರಿಯಾದ ಮಲಿಕ್‌ಮುರಾದ ಕಟ್ಟಿಸಿದ್ದಾನೆ. ಹೊರಗೋಡೆಯ ಹೊರಭಾಗದಲ್ಲಿ ಅಗಲವಾದ ಕಂದಕವಿದೆ. ಈಗಲೂ ಮಳೆಗಾಲದಲ್ಲಿ ಇದರಲ್ಲಿ ನೀರು ತುಂಬಿರುತ್ತದೆ.

ದಪ್ಪ ಮತ್ತು ಎತ್ತರವಾದ ಒಳಗೋಡೆಯಲ್ಲಿ ೨೪ ಚೌಕಾಕಾರದ ಮತ್ತು ೨೫ ವೃತ್ತಾಕಾರದ ಕೊತ್ತಳಗಳಿವೆ. ಚೌಕಾಕಾರದ ಕೊತ್ತಳಗಳು ಮೊದಲಿನವಾಗಿದ್ದು ಹಿಂದೂ ಶೈಲಿಯಲ್ಲಿವೆ. ಮುಸ್ಲಿಮರ ವಶವಾದಾಗ ಕೋಟೆಯನ್ನು ದುರಸ್ತಿಗೊಳಿಸುವಾಗ ವೃತ್ತಾಕಾರದ ಕೊತ್ತಳಗಳನ್ನು ಕಟ್ಟಲಾಗಿದೆ (ಚಿತ್ರ ೧೧೭). ಬಂದೂಕುಗಳ ಉಪಯೋಗ ಪ್ರಾರಂಭವಾದಾಗ ಕೋಟೆಯ ಮೇಲಿನ ತೆನೆಗಳಲ್ಲಿ ಬಂದೂಕು ಮತ್ತು ತೋಪುಗಳನ್ನು ತೂರಿಸಲು ಅನುಕೂಲವಾಗುವಂತೆ ಕಿಂಡಿಗಳನ್ನು ಅಳವಡಿಸಿದ್ದಾರೆ. ಕೊತ್ತಳಗಳ ಮೇಲೆ ದೂರದವರೆಗೆ ಹಾರಿಸಬಹುದಾದ




೧೧೩. ಮುದುಗಲ್ಲು ಕೋಟೆ: ೧. ಕಾಟೀ ದರ್ವಾಜ, ೨. ಖಾಸ ಬಾವಿ, ೩. ಜಾಮಿ ಮಸೀದಿ, ೪. ನಾನಾದರ್ಗ, ೫. ಕಾವಲು ಗೋಪುರ, ೬. ಕೊಳ, ೭. ಗಗನ್‌ಮಹಲ್, ೮. ಮಸೀದಿ, ೯. ತೋರಣ, ೧೦. ಒಂಟಿ ಕೊತ್ತಳ, ೧೧. ವಕ್ರಾಣಿ, ೧೨. ದರ್ಗಾ, ೧೩. ರಾಮಲಿಂಗೇಶ್ವರ ದೇವಾಲಯ, ೧೪. ಫತೇ ದರ್ವಾಜ, ೧೫. ಚೌರಮಹಲ್

ಬಲಿಷ್ಠ ತೋಪುಗಳನ್ನಿಟ್ಟಿದ್ದರು. ಕೆಲವನ್ನು ಈಗಲೂ ಅಲ್ಲಿ ನೋಡಬಹುದು. ಒಳಗೋಡೆಯಲ್ಲಿ ಎರಡು ಬಾಗಿಲುಗಳು ಮತ್ತು ಒಂದು ದಿಡ್ಡಿ ಇವೆ.

ಹೊರಗೋಡೆಯು ದಪ್ಪ ಮತ್ತು ಎತ್ತರ ಎರಡರಲ್ಲೂ ಚಿಕ್ಕದಾಗಿದೆ. ಈ ಗೋಡೆಯಲ್ಲಿ ೩೪ ವೃತ್ತಾಕಾರದ ಕೊತ್ತಳಗಳು ಮಾತ್ರ ಇವೆ. ಗೋಡೆಯ ಮೇಲ್ಭಾಗದ ತೆನೆಗಳಲ್ಲಿ ಬಂದೂಕು ಮತ್ತು ತೋಪುಗಳಿಗಾಗಿ ಮಾಡಿದ ಕಿಂಡಿಗಳಿವೆ. ಗೋಡೆಯಲ್ಲಿ ಎರಡು ಬಾಗಿಲುಗಳು ಮತ್ತು ಅನೇಕ ದಿಡ್ಡಿಗಳಿವೆ. ದಿಡ್ಡಿಗಳು ಹೊರಗಿನಿಂದ ಹೊರ ಮತ್ತು ಒಳಗೋಡೆಗಳ ಮಧ್ಯದ ದಾರಿಗೆ ಪ್ರವೇಶವನ್ನು ಒದಗಿಸುತ್ತವೆ.

ಕೋಟೆಯ ಮೇಲೆ ಎಂಬತ್ತಕ್ಕೂ ಹೆಚ್ಚು ಶಾಸನಗಳಿವೆ. ಕೆಲವು ಶಾಸನಗಳು ಕೊತ್ತಳ ಅಥವಾ ಬುರುಜು, ದಿಡ್ಡಿ ಮತ್ತು ನಿಟುಗಳ ಹೆಸರುಗಳನ್ನು ಸೂಚಿಸುತ್ತವೆ. ತೆನೆಗಳು ಇಲ್ಲಿಯ ಶಾಸನಗಳಲ್ಲಿ ನಿಟುಗಳೆಂದು ಉಲ್ಲೇಖಗೊಂಡಿವೆ. ಪೂರ್ವ ದಿಕ್ಕಿನಲ್ಲಿರುವ ಮುಳ್ಳಗಸೆ ಅಥವಾ ಕಾಟೀ ದರ್ವಾಜದಿಂದ ಉತ್ತರಕ್ಕೆ ಸಾಗಿದಾಗ ಸಿಗುವ ವೃತ್ತಾಕಾರದ ಮೊದಲನೇ ಬುರುಜನ್ನು ಫತ್-ಇ-ಜಂಗ್[೩೭] ಮತ್ತು ಫತೇಜಂಗು ಬುರುಜು,[೩೮] ಎಂದು ಅದರ ಮೇಲಿನ ಶಾಸನಗಳು ಉಲ್ಲೇಖಿಸುತ್ತವೆ. ಇದರ ನಿರ್ಮಾಣವನ್ನು ಮೊದಲನೇ ಅಲಿ ಆದಿಲ್ ಶಾಹನ ಆಳ್ವಿಕೆಯಲ್ಲಿ ಪ್ರಾರಂಭಿಸಲಾಯಿತು. ದಿಯಾನತ್‌ಖಾನನ್ನು ಇದನ್ನು ಕ್ರಿ.ಶ. ೧೫೮೮ ರಲ್ಲಿ ಪೂರ್ಣ ಗೊಳಿಸಿದನು. ಇದರ ಮೇಲೆ ಮಧ್ಯಭಾಗದಲ್ಲಿ ತೋಪನ್ನು ಇಡುವುದಕ್ಕಾಗಿ ಎತ್ತರವಾದ ವರ್ತುಲಾಕಾರದ ವೇದಿಕೆಯನ್ನು ನಿರ್ಮಿಸಿದೆ. ಇದರ ಪಕ್ಕದಲ್ಲಿ ಉತ್ತರಕ್ಕಿರುವ ಕೊತ್ತಳವನ್ನು ಉದಗಿರಿಯ ಬಸುವರಾಜನು ಕಟ್ಟಿಸಿದನು. ಇದರ ಹೆಸರು ರಣರಂಗ ಭೈರವ.[೩೯] ಶಾಸನದ ಪಕ್ಕದಲ್ಲಿ ಭೈರವನ ರೇಖಾ ಚಿತ್ರವಿದೆ. ಭೈರವನು ಮೇಲಿನ ಕೈಗಳಲ್ಲಿ ತ್ರಿಶೂಲ, ಡಮರು ಮತ್ತು ಕೆಳಗಿನ ಕೈಗಳಲ್ಲಿ ಖಡ್ಗ, ಕಪಾಲ, ರುಂಡಗಳನ್ನು ಹಿಡಿದಿದ್ದಾನೆ. ರುಂಡದಿಂದ ಸೋರುತ್ತಿರುವ ರಕ್ತವನ್ನು ಕೆಳಗಿರುವ ನಾಯಿ ನೆಕ್ಕುತ್ತಿದೆ. ಇಲ್ಲಿಂದ ಮುಂದೆ ಹೋದಾಗ ಒಳಗೋಡೆಯ ಮೇಲ್ಭಾಗದಲ್ಲಿ ಎರಡು ತೋಪುಗಳಿವೆ. ಇಲ್ಲಿಂದ ಮುಂದೆ ಸಿಗುವ ವೃತ್ತಾಕಾರದ ಬುರುಜನ್ನು ಎರಡನೇ ಇಬ್ರಾಹಿಮ್ ಆದಿಲ್‌ಶಾಹನ ಅಧಿಕಾರಿಯಾದ ಮುರಾದಖಾನನು ಕ್ರಿ.ಶ. ೧೫೯೧ ರಲ್ಲಿ ಕಟ್ಟಿಸಿದನು.[೪೦]

ಈಶಾನ್ಯ ಮೂಲೆಯಲ್ಲಿರುವ ವೃತ್ತಾಕಾರದ ಬುರುಜಿನ ಹೆಸರು ಅಲಿ ಬುರುಜು (ಚಿತ್ರ ೧೫೬). ಇದನ್ನು ಮೊದಲನೇ ಅಲಿ ಆದಿಲ್ ಶಾಹನ ಆಳ್ವಿಕೆಯಲ್ಲಿ ಕ್ರಿ.ಶ. ೧೫೭೪-೭೫ರಲ್ಲಿ ಕಟ್ಟಲಾಯಿತು.[೪೧] ಇದರ ಮೇಲೆ ಒಂದು ತೋಪಿದೆ. ಇಲ್ಲಿಂದ ಪಶ್ಚಿಮಕ್ಕೆ ಸಾಗಿದಾಗ ಸಿಗುವ ಎರಡು ಚೌಕಾಕಾರದ ಕೊತ್ತಳಗಳು ಸಾಳುವ ತಿಮ್ಮಯ್ಯನ ಕೊತ್ತಳಗಳು.[೪೨] ಹದಿನಾರನೇ ಶತಮಾನದ ಪ್ರಾರಂಭದಲ್ಲಿ ಸಾಳುವ ತಿಮ್ಮಯ್ಯನು ಈ ಕೊತ್ತಳಗಳನ್ನು



೧೧೪. ಮುದುಗಲ್ಲು, ಪೂರ್ವದಿಕ್ಕಿನ ಕೋಟೆ



೧೧೫. ಮುದುಗಲ್ಲು, ಉತ್ತರ ದಿಕ್ಕಿನ ಕೋಟೆ

ಕಟ್ಟಿಸಿದನು. ಇವುಗಳಲ್ಲಿ ಮೊದಲನೇ ಕೊತ್ತಳದ ಶಾಸನದ ಬಲಭಾಗದಲ್ಲಿ ಎಡಕ್ಕೆ ಮುಖಮಾಡಿ ನಿಂತ ವರಾಹ ಮತ್ತು ಎಡಭಾಗದಲ್ಲಿ ತುದಿಯನ್ನು ಕೆಳಗೆ ಮಾಡಿ ನಿಲ್ಲಿಸಿದ ಖಡ್ಗದ ರೇಖಾಚಿತ್ರಗಳಿವೆ (ಚಿತ್ರ ೧೧೮). ಎರಡನೆಯ ಶಾಸನದ ಕೆಳಭಾಗದಲ್ಲಿ ಅಂತಹದೇ ಚಿತ್ರಗಳು ಮತ್ತು ಕೆಳಗೆ ಸೂರ್ಯ, ಚಂದ್ರರ ಚಿತ್ರಗಳಿವೆ. ವರಾಹ ಮತ್ತು ಖಡ್ಗ ವಿಜಯನಗರ ಅರಸರ ರಾಜ ಚಿಹ್ನೆಗಳಾಗಿರುವುದರಿಂದ ಈ ಕೊತ್ತಳಗಳನ್ನು ಅವರ ಕಾಲದಲ್ಲಿ ಕಟ್ಟಿದೆ.

ಉತ್ತರ ದಿಕ್ಕಿಗಿರುವ ಫತೇದರ್ವಾಜದ ಹೊರ ಗೋಡೆಯಲ್ಲಿಯ ಬುರುಜಿನ ಮೇಲೆ ಒಂದು ತೋಪಿದೆ. ಇಲ್ಲಿಂದ ಪಶ್ಚಿಮಕ್ಕೆ ಮುಂದೆ ಹೋದಾಗ ವಾಯವ್ಯ ಮೂಲೆಯ ಪತ್ತಿರ ಚೌಕಾಕಾರದ ಬಸವನ ಕೊತ್ತಳವಿದೆ.[೪೩] ಕೊತ್ತಳದ ಪಕ್ಕದಲ್ಲಿ ಬಸವನ ದಿಡ್ಡಿಯಿದೆ.[೪೪] ಈ ಭಾಗದಲ್ಲಿರುವ ಒಂದು ತೆನೆಯ ಮೇಲೆ ಬಸವನ ನಿಟು ಎಂದು ಬರೆದಿದೆ.[೪೫] ಬಸವನ ಕೊತ್ತಳವನ್ನು ಹಡಪ ವೆಂಗಳಪ್ಪ ನಾಯಕನು ಕಟ್ಟಿಸಿದನು.[೪೬] ಇಲ್ಲಿಂದ ಮುಂದೆ ದಕ್ಷಿಣಕ್ಕೆ ಹೋದಾಗ ಮತ್ತೊಂದು ದಿಡ್ಡಿ ಸಿಗುತ್ತದೆ. ಇದರ ಹೆಸರು ವಿನಾಯಕನ ದಿಡ್ಡಿ.[೪೭] ಇಲ್ಲಿರುವ ಒಂದು ತೆನೆಯ ಮೇಲೆ ವಿನಾಯಕನ ನಿಟು ಬರೆದಿದೆ.[೪೮]

ಪಶ್ಚಿಮ ದಿಕ್ಕಿನ ಕೋಟೆಗೋಡೆಯಲ್ಲಿ ವಕ್ರಾಣಿಯಿಂದ ನೈರುತ್ಯಕ್ಕೆ ದಿಡ್ಡಿಯ ಪಕ್ಕದಲ್ಲಿರುವ ವರ್ತುಲಾಕಾರದ ಬುರುಜನ್ನು ಎರಡನೇ ಇಬ್ರಾಹಿಮ್ ಆದಿಲ್ ಶಾಹನ ಮಂತ್ರಿ ದಿಲಾವರ್ ಖಾನನ ಕಾಲದಲ್ಲಿ ಕ್ರಿ.ಶ. ೧೬೦೩-೧೬೦೪ ರಲ್ಲಿ ಕಟ್ಟಲಾಯಿತು.[೪೯] ಕೋಟೆಯ ನೈರುತ್ಯ ಮೂಲೆಯ ಹತ್ತಿರವಿರುವ ದೊಡ್ಡ ಬುರುಜಿನ ಹೆಸರು ಕೊಮಾರ ಬುರುಜು. ಇದನ್ನು ಕೃಷ್ಣಾರಾಜಯನು ಕಟ್ಟಿಸಿದನು.[೫೦] ಆ ಭಾಗದಲ್ಲಿಯ ಮತ್ತೊಂದು ಬುರುಜನ್ನು ರಾಮರಾಯನು ಕಟ್ಟಿಸಿದನು.[೫೧] ಕೋಟೆಯ ಆಗ್ನೇಯ ಮೂಲೆಯಲ್ಲಿ ಬೆಟ್ಟದ ಮೇಲೆ ಎತ್ತರವಾದ ಸ್ಥಳದಲ್ಲಿ ಹನುಮಂತನ ಕೊತ್ತಳವಿದೆ. ಇದನ್ನು ರಾಮರಾಜನು ಕಟ್ಟಿಸಿದನು.[೫೨]

ಕೋಟೆಗೋಟೆಯ ಮೇಲೆ ಶಾಸನಗಳ ಪಕ್ಕದಲ್ಲಿರುವ ಕೆಲವು ರೇಖಾಚಿತ್ರಗಳನ್ನು ಈಗಾಗಲೇ ಗಮನಿಸಿದ್ದೇವೆ. ಮಲಿಕ ಮುರಾದನ ಶಾಸನಗಳ ಕೆಳಗೆ ಬಾಣ ಹೂಡಿದ ಬಿಲ್ಲು, ಬತ್ತಳಿಕೆ, ಖಡ್ಗ, ಬರ್ಚಿ, ಚೌರಿ, ಸೂರ್ಯ, ಲೇಖನಿ, ಖರ್ಜೂರ ಮರ ಮುಂತಾದ ರೇಖಾಚಿತ್ರಗಳಿವೆ (ಚಿತ್ರ ೧೧೯). ಹನುಮಂತನ ಕೊತ್ತಳದ ದಕ್ಷಿಣಕ್ಕಿರುವ ಕೊತ್ತಳದ ಮೇಲೆ ಆನೆಯ ಸುಂದರವಾದ ರೇಖಾಚಿತ್ರವಿದೆ. ಸರಳ ರೇಖೆಯಲ್ಲಿ ತೋರಿಸಿದ ನೆಲದ ಮೇಲೆ ಎಡಕ್ಕೆ ಮುಖಮಾಡಿ ಮುಂದೆ ಹೋಗುತ್ತಿರುವ ನೈಜ ಭಂಗಿಯಲ್ಲಿರುವ ಗಂಡಾನೆಯ



೧೧೩. ಮುದುಗಲ್ಲು, ಒಳ ಮತ್ತು ಹೊರಗೋಡೆಗಳು



೧೧೨. ಮುದುಗಲ್ಲು, ಒಳಗೋಡೆಯ ಬುರುಜು



೧೧೮. ಮುದುಗಲ್ಲು, ಸಾಳುವ ತಿಮ್ಮಯ್ಯನ ಕೊತ್ತಳ ಶಾಸನ ಮತ್ತು ವಿಜಯನಗರ ರಾಜ ಚಿಹ್ನೆ



೧೧೯. ಮುದುಗಲ್ಲು. ಮಲಿಕ್ ಮುರಾದ ಕಟ್ಟಿಸಿದ ಬುರುಜು ಎಂದು ತಿಳಿಸುವ ಶಾಸನ



೧೨೦. ಮುದುಗಲ್ಲು, ಆನೆಯ ರೇಖಾ ಚಿತ್ರ

ಸೊಂಡಿಲು ಸ್ವಲ್ಪಮುಂದೆ ಚಾಚಿದರೆ ಅದರ ಬಾಲವು ಹಿಂದೆ ಚಾಚಿದೆ. ಆನೆಯ ಕೊರಳಲ್ಲಿ ಗಂಟೆಯ ಸರವಿದೆ (ಚಿತ್ರ ೧೨೦).

## ಬಾಗಿಲುಗಳು

ಹೊರ ಮತ್ತು ಒಳಗೋಡೆಗಳಿಗೆ ಸೇರಿದಂತೆ ಎರಡು ಬಾಗಿಲುಗಳಿವೆ. ಪೂರ್ವ ದಿಕ್ಕಿಗಿರುವುದು ಮುಳ್ಳಗಸೆ ಅಥವಾ ಕಾಟೀ ದರ್ವಾಜ ಮತ್ತು ಉತ್ತರ ದಿಕ್ಕಿಗಿರುವುದು ವಿಜಯದ ಬಾಗಿಲು ಅಥವಾ ಫತೇ ದರ್ವಾಜ.

**ಕಾಟೀ ದರ್ವಾಜ :** ಮುಳ್ಳಗಸೆ ಅಥವಾ ಕಾಟೀ ದರ್ವಾಜ ಒಂದು ದೊಡ್ಡ ಸಂಕೀರ್ಣ. ಇದರಲ್ಲಿ ಅನುಕ್ರಮವಾಗಿ ಪೂರ್ವ, ದಕ್ಷಿಣ ಮತ್ತು ಪೂರ್ವಕ್ಕೆ ಅಭಿಮುಖವಾಗಿರುವ ಹೊರ, ಮಧ್ಯ ಮತ್ತು ಒಳ ಬಾಗಿಲುಗಳಿವೆ (ಚಿತ್ರ ೧೨೧). ಇವು ಕಂಬ ಮತ್ತು ತೊಲೆಗಳಿಂದ ನಿರ್ಮಾಣಗೊಂಡು ಹಿಂದೂ ಶೈಲಿಯಲ್ಲಿವೆ. ಹೊರಬಾಗಿಲಿನ ಪಕ್ಕದಲ್ಲಿರುವ ಎರಡು ವೃತ್ತಾಕಾರದ ಕೊತ್ತಳ (ಬುರುಜು)ಗಳು ಮುಂದೆ ಚಾಚಿಕೊಂಡು ಬಾಗಿಲಿಗೆ ರಕ್ಷಣೆ ನೀಡುತ್ತವೆ. ಇವುಗಳಲ್ಲಿ ಉತ್ತರಕ್ಕಿರುವ ಬುರುಜು ಬಾಗಿಲಿನಿಂದ L ಆಕಾರದಲ್ಲಿ ಮುಂದೆ ಚಾಚಿಕೊಂಡಿರುವ ಗೋಡೆಯ ಹೊರಭಾಗದಲ್ಲಿದ್ದು ಬಾಗಿಲಿನ ಪ್ರವೇಶವನ್ನು ಮರೆಮಾಡುತ್ತದೆ. ದೂರದಿಂದ ನೋಡಿದಾಗ ಎರಡು ಕೊತ್ತಳಗಳ ಮಧ್ಯದಲ್ಲಿ ಬಾಗಿಲಿರುವುದು ಗೋಚರಿಸುವುದಿಲ್ಲ (ಚಿತ್ರ ೧೨೨). ದೂರದಿಂದ ನೋಡುವ ವೈರಿಗೆ ಗೊಂದಲವನ್ನುಂಟುಮಾಡಲು ಈ ವಿಧಾನವನ್ನು ಅಳವಡಿಸಲಾಗಿದೆ. ಮೊದಲು ಪೂರ್ವದಿಂದ ಪಶ್ಚಿಮಕ್ಕೆ ಹೋಗಿ, ಉತ್ತರಕ್ಕೆ ತಿರುಗಿ ಮುಂದೆ ಹೋಗಿ ಪುನಃ ಪಶ್ಚಿಮಕ್ಕೆ ಹೋದರೆ ಬಾಗಿಲು ಎದುರಾಗುತ್ತದೆ. ಬಾಗಿಲಿಗೆ ಆಯತಾಕಾರದ ಚೌಕಟ್ಟಿದೆ (ಚಿತ್ರ ೧೨೪). ಚೌಕಟ್ಟಿನ ಹೊರಗೆ ಎರಡೂ ಕಡೆ ಸರಪಳಿಗಳಿವೆ. ಬಾಗಿಲಿಗೆ ಬೀಗ ಹಾಕಲು ಇವನ್ನು ಬಳಸಲಾಗುತ್ತಿತ್ತು. ಬಾಗಿಲಿಗೆ ಮರದ ಎರಡು ಕದಗಳಿವೆ. ಮೇಲೆ ಆನೆ, ಸಿಂಹ, ಹಂಸ, ಮೀನಿನ ಮೇಲೆ ಕುಳಿತ ಮನುಷ್ಯ ಮುಂತಾದ ಉಬ್ಬು ಚಿತ್ರಗಳನ್ನು ತಗಡಿನಲ್ಲಿ ಮಾಡಿ ಕದಗಳಿಗೆ ಜೋಡಿಸಿದೆ. ಕದಗಳ ಕೆಳಭಾಗದಲ್ಲಿ ಚೂಪು ತಲೆಯ ದಪ್ಪ ಮೊಳೆಗಳನ್ನು ಮತ್ತು ಮೇಲ್ಭಾಗದಲ್ಲಿ ಮುಂದೆ ಚಾಚಿರುವ ಶೂಲದಂತಹ ಹರಿತವಾದ ದೊಡ್ಡ ಮೊಳೆಗಳನ್ನು ಜೋಡಿಸಿದೆ (ಚಿತ್ರ ೧೨೫). ಮುಚ್ಚಿದ ಕದಗಳನ್ನು ತೆರೆಯಲು ವೈರಿ ಆನೆ ಬಲವನ್ನು ಉಪಯೋಗಿಸಿದಾಗ ಮೊಳೆಗಳು ಆನೆಯ ತಲೆಗೆ ಚುಚ್ಚುವಂತೆ ಜೋಡಿಸಿದೆ. ಮುಳ್ಳಿನಂತಹ ಈ ಮೊಳೆಗಳಿಂದ ಈ ಬಾಗಿಲನ್ನು ಮುಳ್ಳಗಸೆ ಅಥವಾ ಕಾಟೀ ದರ್ವಾಜವೆಂದು ಕರೆಯುವರು. ಮುಳ್ಳಿಗೆ ಉರ್ದು ಭಾಷೆಯಲ್ಲಿ ಕಾಟೀ ಎನ್ನುವರು. ಬಲಭಾಗದ ಕದದ ಕೆಳಭಾಗದಲ್ಲಿ ಚಿಕ್ಕ ಉಪ ಕದವಿದೆ. ಕದಗಳನ್ನು ಮುಚ್ಚಿದಾಗ ಈ ಚಿಕ್ಕ ಕದವನ್ನು ತೆರೆದು ಒಳಗೆ ಹೋಗಲು ಅವಕಾಶ




೧೨೧. ಮುದುಗಲ್ಲು, ಕೋಟೆ ದರ್ವಾಜ

ಮಾಡಿಕೊಡಲಾಗುತ್ತಿತ್ತು. ಚೌಕಟ್ಟು ದಾಟಿದ ಕೂಡಲೆ ಪ್ರವೇಶದ ಪಾರ್ಶ್ವಗಳಲ್ಲಿ ಕಟ್ಟೆಗಳಿವೆ. ಪ್ರತಿ ಕಟ್ಟೆಯ ಮೇಲೆ ೨X೨ ಕಂಬಗಳಿವೆ. ಪ್ರವೇಶ ಮತ್ತು ಕಟ್ಟೆಗಳ ಮೇಲೆ ಛಾವಣಿಯಿದೆ. ಬಾಗಿಲಿನಿಂದ ಮುಂದೆ ಹೋದಾಗ ಒಳ ಮತ್ತು ಹೊರಗೋಡೆಗಳ ಮಧ್ಯದಲ್ಲಿರುವ ಅಗಲವಾದ ಆವರಣವಿದೆ. ಹೊರ ಬಾಗಿಲಿನಿಂದ ಅನುಕ್ರಮವಾಗಿ ಪಶ್ಚಿಮಕ್ಕೆ, ಉತ್ತರ, ಪೂರ್ವ ಮತ್ತು ಪಶ್ಚಿಮಕ್ಕೆ ಹೋದಾಗ ಒಳಗೋಡೆಯಲ್ಲಿರುವ ಮಧ್ಯ ಬಾಗಿಲು ಎದುರಾಗುತ್ತದೆ.

ದಕ್ಷಿಣಾಭಿಮುಖವಾಗಿರುವ ಮಧ್ಯ ಬಾಗಿಲನ್ನು ಎರಡೂ ಬದಿಗಿರುವ ಆಯತಾಕಾರದ ಕೊತ್ತಳಗಳು ರಕ್ಷಿಸುತ್ತವೆ. ಪ್ರತಿ ಕೊತ್ತಳದ ಮೇಲಿನ ಭಾಗದಲ್ಲಿ ಒಂದು ಮುಂಚಾಚು (balcony) ಇದೆ. ಎಡಭಾಗದ ಕೊತ್ತಳದ ಮುಂಚಾಚು ಪುಷ್ಪ ವಿನ್ಯಾಸಗಳಿಂದ ಅಲಂಕೃತವಾದ ನಾಲ್ಕು ಬೋದಿಗೆಗಳ ಮೇಲೆ ನಿಂತಿದೆ. ಕೆಳಭಾಗದಲ್ಲಿ ಮೂರು ಮುಂದೆ ಮತ್ತು ಎರಡು ಹಿಂದೆ ಸರಿದ ಪಟ್ಟಿಕೆಗಳಿವೆ. ಮೇಲಿನ ಭಾಗದಲ್ಲಿ ಒಂದರ ಕೆಳಗೆ ಮತ್ತೊಂದು ಎರಡು ಸಾಲು ಕಿಟಕಿಗಳಿವೆ. ಕೆಳಗಿನ ಸಾಲಿನಲ್ಲಿ ಮೂರು ಕಮಾನಿನಾಕಾರದ ಕಿಟಕಿಗಳಿವೆ. ಮಧ್ಯದ ಕಿಟಕಿ ಸ್ವಲ್ಪ ದೊಡ್ಡದಾಗಿದೆ. ಮೇಲಿನ ಸಾಲಿನ ಮಧ್ಯದಲ್ಲಿ ಮೂರು ವಲಯಗಳ ಕಮಾನಿನ ಕಿಟಕಿಯಿದೆ. ಅದರ ಪಕ್ಕದಲ್ಲಿ ಕುರುಡು (blind) ಕಿಟಕಿಗಳಿವೆ. ಎಡಗಡೆಯ ಕುರುಡು ಕಿಟಕಿಯಲ್ಲಿ ಬಲಗೈಯನ್ನು ಮೇಲೆತ್ತಿದ ಆಂಜನೇಯನ ಉಬ್ಬುಶಿಲ್ಪವಿದೆ. ಬಲಗಡೆಯ ಕುರುಡು ಕಿಟಕಿಯಲ್ಲಿ ಬಲಗೈಯಲ್ಲಿ ಹಾವನ್ನು ಹಿಡಿದು ಎಡಗೈಯನ್ನು ಮೇಲೆತ್ತಿದ ಗರುಡನ ಉಬ್ಬುಶಿಲ್ಪವಿದೆ (ಚಿತ್ರ ೧೩೧). ಬಲಭಾಗದ ಕೊತ್ತಳದ ಮುಂಚಾಚಿನ ಮೇಲಿನ ಸಾಲಿನಲ್ಲಿ ಮೂರು ಆಯತಾಕಾರದ ಚಿಕ್ಕ ಕಿಟಕಿಗಳು ಮತ್ತು ಕೆಳಸಾಲಿನ ಮಧ್ಯದಲ್ಲಿ ಕಮಾನಿನಾಕಾರದ ಚಿಕ್ಕ ಕಿಟಕಿ ಇವೆ.

ಮಧ್ಯ ಬಾಗಿಲಿಗೆ ಆಯತಾಕಾರದ ಎರಡು ಚೌಕಟ್ಟುಗಳಿವೆ (ಚಿತ್ರ ೧೨೬). ಹೊರ ಚೌಕಟ್ಟಿನ ತೋಳುಗಳ ಕೆಳಭಾಗವನ್ನು ಶಿಲ್ಪಗಳಿಂದ ಮತ್ತು ಉಳಿದ ಭಾಗವನ್ನು ಮಕರಗಳ ಬಾಯಿಂದ ಹೊರಬರುವ ಬಳ್ಳಿ ಸುರುಳಿಗಳಿಂದ ಅಲಂಕರಿಸಿದೆ. ಕೆಳಭಾಗದಲ್ಲಿ ಎಡಕ್ಕೆ ಕೋಲು ಹಿಡಿದ ದ್ವಾರಪಾಲನ ಮತ್ತು ಬಲಕ್ಕೆ ಚಿಕ್ಕ ಹಲಗೆಯನ್ನು ಬಾರಿಸುತ್ತಿರುವವನ ಶಿಲ್ಪಗಳಿವೆ. ಬಳ್ಳಿ ಸುರುಳಿಗಳ ಅಲಂಕಾರ ಮೇಲಿನ ತೊಲೆಯ ಮೇಲೂ ಇದೆ. ಅದರ ಮಧ್ಯದಲ್ಲಿ ಚೌಕಾಕಾರದ ಹೂವಿದೆ. ಒಳ ಚೌಕಟ್ಟನ್ನು ಪುಷ್ಪ, ಲತಾ, ಪುಷ್ಪ, ಅಲಂಕಾರ ರಹಿತ ಮತ್ತು ಪುಷ್ಪ ಶಾಖೆಗಳಿಂದ ಅಲಂಕರಿಸಿದೆ. ಈ ಶಾಖೆಗಳು ವಿಜಯನಗರ ಕಾಲದ ದೇವಾಲಯಗಳ ಬಾಗಿಲುಗಳ ಶಾಖೆಗಳಿಗೆ ಹೋಲುತ್ತವೆ. ತೋಳುಗಳ ಕೆಳಭಾಗದಲ್ಲಿ ಎಡಕ್ಕೆ ಚೌರಿ ಹಿಡಿದಿರುವವನ ಮತ್ತು ಬಲಕ್ಕೆ ಚೌರಿ



೧೨೨. ಮುದುಗಲ್ಲು, ಕಾಟೀ ದರ್ವಾಜದ ಮುಂದಿನ ಭಾಗ



೧೨೩. ಮುದುಗಲ್ಲು, ಕಾಟೀ ದರ್ವಾಜದ ಹತ್ತಿರದ ಮುಂಚಾಚು (projecting balcony)ಗಳು

ಮತ್ತು ಗದೆಯನ್ನು ಹಿಡಿದಿರುವವನ ಶಿಲ್ಪಗಳಿವೆ. ತೊಲೆಯ ಮಧ್ಯಭಾಗದಲ್ಲಿ ಚೌಕಾಕಾರದ ಹೂವಿದೆ. ಬಾಗಿಲ ಚೌಕಟ್ಟಿನ ಮೇಲ್ಭಾಗದಲ್ಲಿ ಕುರುಡುಕಮಾನಿದೆ (blind arch). ಮೇಲಿನ ಕೈಪಿಡಿ ಗೋಡೆಯಲ್ಲಿ ಕಲ್ಲು ಮತ್ತು ಗಾರೆಯಿಂದ ಮಾಡಿದ ಮುಸ್ಲಿಮ್ ಶೈಲಿಯ ಕೊನೆಗಳಿವೆ. ಬಾಗಿಲಿಗೆ ಆಯತಾಕಾರದ ಎರಡು ಮರದ ಕದಗಳಿವೆ. ದಪ್ಪವಾದ ಕದಗಳು ಸುಸ್ಥಿತಿಯಲ್ಲಿವೆ. ಇವುಗಳ ಮೇಲೆ ಮರದ ಉಬ್ಬು ಪಟ್ಟಿಗಳನ್ನು ಉದ್ದ ಮತ್ತು ಅಗಲವಾಗಿ ಉದ್ದಗಲಕ್ಕೆ ಜೋಡಿಸಿದೆ (ಚಿತ್ರ ೧೨೮). ಪಟ್ಟಿಗಳು ಸಂಧಿಸುವ ಸ್ಥಳದಲ್ಲಿ ಅವುಗಳಿಗೆ ದುಂಡು ತಲೆಯ ದಪ್ಪ ಮೊಳೆಗಳನ್ನು ಹೊಡೆದು ಕದಕ್ಕೆ ಜೋಡಿಸಿದೆ. ಎಡಭಾಗದ ಕದದ ಮೇಲೆ ಒಂದು ಶಾಸನವನ್ನು ಆಳವಾಗಿ ಕೊರೆದು ಬರೆಯಲಾಗಿದೆ (ಚಿತ್ರ ೧೨೯). ಈ ಕದವನ್ನು ವೆಂಗಳಪ್ಪ ನಾಯಕನು ಕ್ರಿ.ಶ. ೧೫೬೦ರಲ್ಲಿ ಮಾಡಿಸಿದನೆಂಬುದು ಇದರಿಂದ ತಿಳಿಯುತ್ತದೆ.[೫೩]

ಮಧ್ಯ ಬಾಗಿಲಿನ ಪ್ರವೇಶದ ಪಾರ್ಶ್ವಗಳಲ್ಲಿ ಕಟ್ಟೆಗಳಿವೆ. ಕಟ್ಟೆಗಳ ಅಧಿಷ್ಠಾನದಲ್ಲಿ ಉಪಾನ, ಪದ್ಮ, ಅಲಂಕಾರಿಕ ಕುಮುದ, ಕಂಠ ಮತ್ತು ಕಪೋತ ಪಟ್ಟಿಕೆಗಳಿವೆ. ಕಂಠ ಭಾಗವನ್ನು ನೃತ್ಯ ಸಂಗೀತಗಾರರು, ಆನೆ, ಸಿಂಹ ಹಂಸ, ಮತ್ತು ಗಿಳಿಗಳಿಂದ ಅಲಂಕರಿಸಿದೆ. ಕಂಬಗಳ ಕೆಳಗಿನ ಅಧಿಷ್ಠಾನ ಭಾಗವನ್ನು ಮೀನಿನ ಮೇಲೆ ಕುಳಿತಿರುವ ಮನುಷ್ಯ, ಆನೆ ಮತ್ತು ವ್ಯಾಳಗಳಿಂದ ಅಲಂಕರಿಸಿದೆ. ಪ್ರತಿಯೊಂದು ಕಟ್ಟೆಯ ಮೇಲೆ ೪x೩ ಕಂಬಗಳಿವೆ. ಕಂಬಗಳ ಮೇಲೆ ಅರಸು ಮನೆತನದ ಸ್ತ್ರೀ ಪುರುಷರು, ಗಣೇಶ, ಗೋವರ್ಧನಧಾರಿ ಕೃಷ್ಣ ಮತ್ತು ವಿಷ್ಣುವಿನ ಶಿಲ್ಪಗಳಿವೆ. ಕೆಲವು ಕಂಬಗಳಿಂದ ಉಪಕಂಬಗಳು ಮುಂದೆ ಚಾಚಿವೆ. ಕೆಲವು ಕಂಬಗಳಿಂದ ಮುಂದೆ ಚಾಚಿದ ಭಾಗವನ್ನು ಕೆಳಗೆ ಆನೆ, ಮಧ್ಯದಲ್ಲಿ ಸಿಂಹ ಸವಾರರು ಮತ್ತು ಮೇಲೆ ಹಾರುವ ಗಂಧರ್ವರಿಂದ ಅಲಂಕರಿಸಿದೆ. ಬೋದಿಗೆಗಳು ಹೂವಿನ ಆಕಾರದಲ್ಲಿವೆ. ಕಂಬಗಳ ಮಧ್ಯದ ಭಾಗಗಳನ್ನು ಬೋದಿಗೆ ಮತ್ತು ತೊಲೆಗಳಿಂದ ನಿರ್ಮಾಣವಾದ ಕಮಾನುಗಳಿಂದ ಅಲಂಕರಿಸಿದೆ (ಚಿತ್ರ ೧೨೭). ಮಧ್ಯದ ಛಾವಣಿಯಲ್ಲಿ ದೊಡ್ಡ ಹೂವಿದೆ. ಕಂಬದ ಮೇಲಿರುವ ಅರಸು ಮನೆತನದವನು ಉದ್ದವಾದ ಕಿರೀಟವನ್ನು ಧರಿಸಿ ಎಡ ಕೈಯಲ್ಲಿ ವಸ್ತ್ರವನ್ನು ಹಿಡಿದಿದ್ದಾನೆ (ಚಿತ್ರ ೧೩೦). ಈ ಶಿಲ್ಪವು ವಿಜಯನಗರ ಅರಸರ ಶಿಲ್ಪಗಳಂತೆಯೇ ಇದೆ. ಈ ಬಾಗಿಲಿನಲ್ಲಿಯ ಸಂಯುಕ್ತ ಕಂಬಗಳೂ ವಿಜಯನಗರ ಶೈಲಿಯಲ್ಲಿವೆ. ಈ ಬಾಗಿಲಿನ ಮಂಟಪವನ್ನು ಇಲ್ಲಿಯ ಶಾಸನದಲ್ಲಿ ಮೊಗಸಾಲೆ ಎಂದು ಉಲ್ಲೇಖಿಸಿದೆ. ಇದನ್ನು ವಿಜಯನಗರ ಅರಸ ರಾಮರಾಯನ ಮಗ ಕೃಷ್ಣಪ್ಪರಾಜನ ಅಧಿಕಾರಿಯಾದ ವೆಂಗಳಪ್ಪ ನಾಯಕನು ಕ್ರಿ.ಶ ೧೫೬೦ರಲ್ಲಿ ಕಟ್ಟಿಸಿದನು.[೫೪] ಈ ಬಾಗಿಲ ಪಶ್ಚಿಮಕ್ಕೆ ಸಮಾನಾಂತರವಾಗಿ ದಕ್ಷಿಣಾಭಿಮುಖವಾದ ಚಿಕ್ಕ ಉಪ ಬಾಗಿಲಿದೆ. ಮೊಗಸಾಲೆಯ ಮಾಳಿಗೆಯ



೧೨೬. ಮುದುಗಲ್ಲು, ಕಾಟೀ ದರ್ವಾಜ, ಮಧ್ಯ ಬಾಗಿಲು



೧೨೭. ಮುದುಗಲ್ಲು, ಕಾಟೀ ದರ್ವಾಜ ಮೊಗಸಾಲೆಯ ಒಳಭಾಗ



೧೨೮. ಮುದುಗಲ್ಲು, ಕಾಟೀ ದರ್ವಾಜ, ಮಧ್ಯ ಬಾಗಿಲಿನ ಕದ



೧೨೯. ಮುದುಗಲ್ಲು, ಕದದ ಮೇಲಿನ ಶಾಸನ



೧೩೦. ಮುದುಗಲ್ಲು, ಕಾಟೀ ದರ್ವಾಜ, ಮಧ್ಯ ಬಾಗಿಲು, ರಾಜವಂಶದವರ ವ್ಯಕ್ತಿ ಶಿಲ್ಪ



೧೩.೧. ಮುದುಗಲ್ಲು, ಕಾಟೀ ದರ್ವಾಜ ಮುಂಚಾಚು (projecting balcony)



೧೩.೨. ಮುದುಗಲ್ಲು, ಕಾಟೀ ದರ್ವಾಜ, ಬಾಗಿಲ ಛಾವಣಿ ಮೇಲಿನ ಕಾವಲುಗಾರನ ಕೊಠಡಿ

ಮೇಲೆ ಕಾವಲುಗಾರರ ದೊಡ್ಡ ಕೊಠಡಿ ಇದೆ. ಇದರ ಬಾಗಿಲ ಎಡ ತೋಳಿನ ಮೇಲೆ ಕೊಡಲಿಯನ್ನು ಹಿಡಿದು ನಿಂತಿರುವ ಸ್ತ್ರೀಯ ಶಿಲ್ಪವಿದೆ (ಚಿತ್ರ ೧೩೨).

ಮಧ್ಯ ಬಾಗಿಲಿನಿಂದ ಒಳಗೆ ಬಂದಾಗ ಆಯತಾಕಾರದ ದೊಡ್ಡ ಆವರಣವಿದೆ. ಪಶ್ಚಿಮ ಭಾಗದಲ್ಲಿ ಆವರಣದ ಅಗಲ ಕಿರಿದಾಗಿದೆ. ಮಧ್ಯ ಬಾಗಿಲಿನಿಂದ ಉತ್ತರಕ್ಕೆ ಬಂದು ಈ ಆವರಣದಲ್ಲಿ ಪಶ್ಚಿಮಕ್ಕೆ ತಿರುಗಿ ಮುಂದೆ ಹೋದಾಗ ಪೂರ್ವಾಭಿಮುಖವಾಗಿರುವ ಒಳ ಬಾಗಿಲು ಎದುರಾಗುತ್ತದೆ. ಈ ಬಾಗಿಲು ಬಿದ್ದುಹೋಗಿದ್ದು ನಂತರದ ಕಾಲದಲ್ಲಿ ಕಟ್ಟಿದ ಕಮಾನಿನ ಬಾಗಿಲಿದೆ. ಪ್ರವೇಶದ ಪಕ್ಕದಲ್ಲಿ ಮೊದಲು ಕಟ್ಟಿದ ಕಟ್ಟೆಗಳಿವೆ. ಪ್ರತಿ ಕಟ್ಟೆಯ ಮೇಲೆ ೩x೨ ಕಂಬಗಳಿದ್ದವು. ಈಗ ಎಡಭಾಗದ ಕಟ್ಟೆಯ ಮೇಲೆ ಎರಡು ಕಂಬಗಳು ಮಾತ್ರ ಉಳಿದಿವೆ.

**ಫತೇ ದರ್ವಾಜ :** ಉತ್ತರ ದಿಕ್ಕಿನಲ್ಲಿರುವ ಫತೇ ದರ್ವಾಜ ಸಹ ದೊಡ್ಡ ಸಂಕೀರ್ಣ. ಇದರಲ್ಲಿ ಎರಡು ಹೊರ ಬಾಗಿಲುಗಳು, ಮಧ್ಯ ಬಾಗಿಲು ಮತ್ತು ಒಳ ಬಾಗಿಲು , ಹೀಗೆ ಒಟ್ಟು ನಾಲ್ಕು ಬಾಗಿಲುಗಳಿವೆ (ಚಿತ್ರ ೧೩೩)å ಈ ಬಾಗಿಲ ಸಂಕೀರ್ಣದ ಉತ್ತರಕ್ಕೆ ಹೊರಗೋಡೆಯಲ್ಲಿ ವೃತ್ತಾಕಾರದ ದೊಡ್ಡ ಬುರುಜು ಇದೆ (ಚಿತ್ರ ೧೪೯). ಇದಕ್ಕೆ ಸೇರಿದಂತೆ ಪೂರ್ವಕ್ಕೆ ಇರುವ ಚಿಕ್ಕ ಬುರುಜಿನ ದಕ್ಷಿಣಕ್ಕೆ ಪೂರ್ವ ದಿಕ್ಕಿನ ಹೊರ ಬಾಗಿಲಿದೆ. ದೊಡ್ಡ ಬುರುಜಿನ ಪಶ್ಚಿಮಕ್ಕೆ ಮತ್ತೊಂದು ಚಿಕ್ಕ ಬುರುಜು ಇದೆ. ಇವೆರಡರ ಮಧ್ಯದಲ್ಲಿರುವ ಬಾಗಿಲಿಲ್ಲದ ಪ್ರವೇಶವು ಪಶ್ಚಿಮ ದಿಕ್ಕಿನ ಹೊರ ಬಾಗಿಲಿನ ಮುಂದಿನ ಆವರಣವನ್ನು ಸೇರುತ್ತದೆ.

ಪೂರ್ವಾಭಿಮುಖವಾಗಿರುವ ಪೂರ್ವ ದಿಕ್ಕಿನ ಹೊರಬಾಗಿಲು ವೃತ್ತಾಕಾರದ ಎರಡು ಬುರುಜುಗಳ ಮಧ್ಯದಲ್ಲಿದೆ (ಚಿತ್ರ ೧೩೪). ದಕ್ಷಿಣಕ್ಕಿರುವ ಬುರುಜು ಬಾಗಿಲಿನಿಂದ ಮುಂದೆ ಚಾಚಿದ ಗೋಡೆಯಲ್ಲಿದೆ. ನೇರ ಪ್ರವೇಶವಿರುವ ಈ ಬಾಗಿಲಿಗೆ ಆಯತಾಕಾರದ ಚೌಕಟ್ಟಿದೆ. ಪ್ರವೇಶದ ಪಾರ್ಶ್ವಗಳಲ್ಲಿ ಕಟ್ಟೆಗಳಿಲ್ಲ. ಈ ಬಾಗಿಲ ಹೊರಗೆ ಮತ್ತು ಒಳಗೆ ಇರುವ ಎರಡು ಶಾಸನಗಳಿಂದ ಇದನ್ನು ಎರಡನೇ ಇಬ್ರಾಹಿಮ್ ಆದಿಲ್‌ಶಾಹನ ಅಧಿಕಾರಿಯಾದ ಮಲ್ಲಿಕ ಮುರಾದನು ಕಟ್ಟಿಸಿದನೆಂಬುದು ತಿಳಿಯುತ್ತದೆ.[೨೨೨] ಪಶ್ಚಿಮಾಭಿಮುಖ ವಾಗಿರುವ ಪಶ್ಚಿಮ ದಿಕ್ಕಿನ ಹೊರ ಬಾಗಿಲ ಮುಂದೆ ಆಯತಾಕಾರದ ಚಿಕ್ಕ ಆವರಣವಿದೆ (ಚಿತ್ರ ೧೩೬). ಇದಕ್ಕೆ ಉತ್ತರ ದಿಕ್ಕಿನಲ್ಲಿರುವ ಪ್ರವೇಶವು ಎರಡು ಬುರುಜುಗಳ ಮಧ್ಯದಲ್ಲಿದೆ. ಉತ್ತರದಿಂದ ದಕ್ಷಿಣಕ್ಕೆ ಬಂದು ಪೂರ್ವಕ್ಕೆ ತಿರುಗಿ ಮುಂದೆ ಹೋದಾಗ ಈ ಬಾಗಿಲು ಎದುರಾಗುತ್ತದೆ. ಬಾಗಿಲಿಗೆ ಆಯತಾಕಾರದ ಚೌಕಟ್ಟಿದೆ. ಪ್ರವೇಶದ ಪಕ್ಕದಲ್ಲಿ ಎರಡೂ ಬದಿಗೆ ಕಟ್ಟೆಗಳಿವೆ. ಪ್ರತಿ ಕಟ್ಟೆಯ ಮೇಲೆ ೩x೨ ಕಂಬಗಳಿವೆ. ಕಂಬಗಳು ಸರಳವಾಗಿದ್ದು




೧೩೩. ಮುದುಗಲ್ಲು, ಫತೇ ದರ್ವಾಜ



೧೩೪. ಮುದಗಲ್ಲು, ಫತೇ ದರ್ವಾಜ, ಪೂರ್ವ ದಿಕ್ಕಿನಿಂದ



೧೩೫. ಮುದಗಲ್ಲು, ಫತೇ ದರ್ವಾಜ ಮಲಿಕ್ ಮುರಾದನ ಶಾಸನ ಮತ್ತು ರೇಖಾಚಿತ್ರಗಳು

ಕೆಳಗಿನಿಂದ ಮೇಲಿನವರೆಗೆ ಚೌಕಾಕಾರವಾಗಿವೆ. ಬಾಗಿಲ ಹೊರಗೆ ಎಡ ಬಲಗಳಲ್ಲಿರುವ ಎರಡು ಶಾಸನಗಳು ಮತ್ತು ಬಾಗಿಲ ಕಂಬದ ಮೇಲಿರುವ ಮತ್ತೊಂದು ಶಾಸನ ಈ ಬಾಗಿಲನ್ನು ಅದೇ ಮಲಿಕ ಮುರಾದ ಅದೇ ವರ್ಷ ಕಟ್ಟಿಸಿದನೆಂದು ತಿಳಿಸುತ್ತವೆ[೨೯೧] (ಚಿತ್ರ ೧೩೭).

ಎರಡೂ ದಿಕ್ಕಿನ ಹೊರ ಬಾಗಿಲುಗಳಿಂದ ಒಳಗೆ ಬಂದಾಗ ಉತ್ತರ-ದಕ್ಷಿಣವಾಗಿರುವ ಉದ್ದವಾದ ಆವರಣವಿದೆ. ಹೊರ ಮತ್ತು ಒಳ ಗೋಡೆಗಳ ಮಧ್ಯದ ದಾರಿಯು ಈ ಆವರಣವನ್ನು ಸೇರುತ್ತದೆ. ಈ ಆವರಣದಲ್ಲಿ ದಕ್ಷಿಣಕ್ಕೆ ಸಾಗಿ ಪಶ್ಚಿಮಕ್ಕೆ ತಿರುಗಿದಾಗ ಪೂರ್ವಾಭಿಮುಖವಾಗಿರುವ ಮಧ್ಯ ಬಾಗಿಲು ಎದುರಾಗುತ್ತದೆ. ಒಳಗೋಡೆಯಲ್ಲಿರುವ ಈ ಬಾಗಿಲಿಗೆ ಆಯತಾಕಾರದ ಚೌಕಟ್ಟಿದ್ದು, ಅದರ ಮೇಲೆ ಕುರುಡು ಕಮಾನಿದೆ. ಬಾಗಿಲ ಬಲ ತೋಳಿನ ಮೇಲೆ ಗಣೇಶನ ಶಿಲ್ಪವಿದೆ. ಮೇಲಿನ ಕೈಪಿಡಿಗೋಡೆಯಲ್ಲಿ ಕಲ್ಲು ಮತ್ತು ಗಾರೆಯಿಂದ ಕಟ್ಟಿದ ಮುಸ್ಲಿಮ್ ಶೈಲಿಯ ತೆನೆಗಳಿವೆ. ಪ್ರವೇಶದ ಪಾರ್ಶ್ವಗಳಲ್ಲಿ ಕಟ್ಟೆಗಳಿವೆ. ಕಟ್ಟೆಗಳ ಅಧಿಷ್ಠಾನದಲ್ಲಿ ಉಪಾನ, ಪದ್ಮ, ಪೀನ ಮಸೂರಂವಂತಿರುವ ಕುಮುದ, ಕಪೋತ, ಅಗಲವಾದ ಕಂಠ ಮತ್ತು ಪದ್ಮ ಪಟ್ಟಿಕೆಗಳಿವೆ. ಹನ್ನೆರಡನೇ ಶತಮಾನದ ದೇವಾಲಯದ ಕೆಲವು ಪಟ್ಟಿಕೆಗಳನ್ನು ಇಲ್ಲಿ ಪುನ: ಉಪಯೋಗಿಸಿದೆ. ಪ್ರತಿ ಕಟ್ಟೆಯ ಮೇಲೆ ೩x೩ ಕಂಬಗಳಿವೆ. ಕಂಬಗಳು ಮೂರು ಚೌಕಾಕಾರದ ಮತ್ತು ಎರಡು ಅಷ್ಟಭುಜಾಕೃತಿಯ ಭಾಗಗಳನ್ನು ಹೊಂದಿವೆ. ಬಾಗಿಲ ದಕ್ಷಿಣಕ್ಕೆ ಚಿಕ್ಕ ಉಪ ಬಾಗಿಲಿದೆ. ಇದು ಪೂರ್ವದಿಂದ ಪಶ್ಚಿಮಕ್ಕೆ ಮತ್ತು ಅಲ್ಲಿಂದ ಉತ್ತರಕ್ಕೆ L ಆಕಾರದಲ್ಲಿ ತಿರುಗಿ ಮುಖ್ಯ ಬಾಗಿಲ ಪ್ರವೇಶವನ್ನು ಸೇರುತ್ತದೆ. ಉಪ ಬಾಗಿಲ ದಾರಿ ಕಟ್ಟೆಯ ಕೆಳಗಿದೆ.

ಮಧ್ಯ ಬಾಗಿಲಿನಿಂದ ಒಳಗೆ ಬಂದಾಗ ವಿಶಾಲ ಚೌಕಾಕಾರದ ಆವರಣವಿದೆ. ಈ ಆವರಣದ ದಕ್ಷಿಣಕ್ಕೆ ಎರಡು ಆಯತಾಕಾರದ ಕೊತ್ತಳಗಳ ಮಧ್ಯದಲ್ಲಿ ಉತ್ತರಾಭಿಮುಖವಾಗಿರುವ ಒಳಬಾಗಿಲಿದೆ. ಈ ಬಾಗಿಲಿನ ಆಯತಾಕಾರದ ಚೌಕಟ್ಟಿನ ಮೇಲೆ ಕುರುಡು ಕಮಾನಿದೆ (ಚಿತ್ರ ೧೩೮). ಪ್ರವೇಶದ ಪಾರ್ಶ್ವಗಳಲ್ಲಿ ಕಟ್ಟೆಗಳಿವೆ. ಪ್ರತಿ ಕಟ್ಟೆಯ ಮೇಲೆ ೪x೨ ಕಂಬಗಳಿವೆ. ಈ ಕಂಬಗಳು ಮಧ್ಯ ಬಾಗಿಲಿನಲ್ಲಿಯ ಕಂಬಗಳಂತೆ ಇವೆ (ಚಿತ್ರ ೧೩೮).

### ದಿಡ್ಡಿಗಳು

ಒಳಗೋಡೆಯಲ್ಲಿ ಒಂದು ಮತ್ತು ಹೊರಗೋಡೆಯಲ್ಲಿ ಅನೇಕ ಚಿಕ್ಕ ಬಾಗಿಲುಗಳಿವೆ. ಇವುಗಳನ್ನು ಶಾಸನಗಳು ದಿಡ್ಡಿಗಳೆಂದು ಉಲ್ಲೇಖಿಸಿವೆ (ಚಿತ್ರ ೧೪೨).[೨೯೨]



೧೩೬. ಮುದಗಲ್ಲು, ಫತೇ ದರ್ವಾಜ, ಪಶ್ಚಿಮ ದಿಕ್ಕಿನ ಹೊರಬಾಗಿಲು



೧೩೭. ಮುದಗಲ್ಲು, ಶಾಸನ, ಮಲಿಕ್‌ಮುರಾದ ಕಟ್ಟಿಸಿದ ಅಗುಸೆ



೧೩೮. ಮುದಗಲ್ಲು, ಫತೇ ದರ್ವಾಜ. ಒಳಬಾಗಿಲು ಹೊರಗಿಂದ




೧೩೯. ಮುದಗಲ್ಲು, ಫತೇ ದರ್ವಾಜ. ಒಳಬಾಗಿಲು ಒಳಗಿನಿಂದ

ಪೂರ್ವ ದಿಕ್ಕಿನ ಒಳಗೋಡೆಯಲ್ಲಿ ಕಾಟೀ ದರ್ವಾಜದ ದಕ್ಷಿಣಕ್ಕೆ ಒಂದು ದಿಡ್ಡಿಯಿದೆ. ಇದಕ್ಕೆ ಆಯತಾಕಾರದ ಬಾಗಿಲ ಚೌಕಟ್ಟಿದೆ (ಚಿತ್ರ ೧೪೧). ಇದರ ತೊಲೆಯ ಮಧ್ಯದಲ್ಲಿ ಹೂವಿನ ಚಿತ್ರವಿದೆ. ಇದು ಒಳ ಮತ್ತು ಹೊರಗೋಡೆಗಳ ಮಧ್ಯದ ದಾರಿಯಿಂದ ಕೋಡೆಯೊಳಕ್ಕೆ ಪ್ರವೇಶ ನೀಡುತ್ತದೆ. ಹೊರಗೋಡೆಯಲ್ಲಿಯ ದಿಡ್ಡಿಗಳು ಕೋಟೆಯ ಹೊರಗಿನಿಂದ ಹೊರ ಮತ್ತು ಒಳ ಗೋಡೆಗಳ ಮಧ್ಯದಲ್ಲಿಯ ದಾರಿಗೆ ಪ್ರವೇಶ ನೀಡುತ್ತವೆ. ಈ ದಿಡ್ಡಿಗಳನ್ನು ಕೊತ್ತಳಗಳ ಪಕ್ಕದಲ್ಲಿ ಕೊತ್ತಳ ಮತ್ತು ಗೋಡೆ ಸಂಧಿಸುವ ಮೂಲೆಗಳಲ್ಲಿ ಅಳವಡಿಸಿದೆ. ಕೆಲವು ಕೊತ್ತಳಗಳ ಎರಡು ಬದಿಗೂ ದಿಡ್ಡಿಗಳಿವೆ. ಮೂಲೆಯಲ್ಲಿಯ ದಿಡ್ಡಿ ವೈರಿಗೆ ಕಾಣದಿರುವಂತೆ ಮಾಡಲು ಅದರ ಮುಂದೆ ವೃತ್ತಾಕಾರದ ಗೋಡೆಯನ್ನು ಕಟ್ಟಿದೆ (ಚಿತ್ರ ೧೪೦). ಈ ಗೋಡೆಯು ಪಾರ್ಶ್ವಗಳಲ್ಲಿ ಕೋಟೆ ಮತ್ತು ಕೊತ್ತಳಗಳಿಗೆ ತಾಗದೆ ಎರಡೂ ಬದಿಗೆ ಪ್ರವೇಶವನ್ನು ಒದಗಿಸುತ್ತದೆ. ಈ ಪ್ರವೇಶಗಳು ದೂರದಿಂದ ಗೋಚರಿಸದೆ ಗೋಡೆಯ ಕೋಟೆ ಮತ್ತು ಕೊತ್ತಳಕ್ಕೆ ತಾಗಿಕೊಂಡಂತೆ ಕಾಣುತ್ತದೆ.

## ನಿಟುಗಳು

ಕೋಟೆ ಮತ್ತುಕೊತ್ತಳಗಳ ಮೇಲೆ ಎದ್ದು ನಿಂತಿರುವ ತೆನೆಗಳನ್ನು ಅವುಗಳ ಮೇಲಿರುವ ಶಾಸನಗಳು 'ನಿಟು'ಗಳೆಂದು ಉಲ್ಲೇಖಿಸುತ್ತವೆ[೫೪](ಚಿತ್ರಗಳು ೧೪೪-೧೪೭).

ವರ್ತುಲಾಕಾರದ ಮೇಲ್ಭಾಗವುಳ್ಳ ನಿಟುಗಳು ರಚನೆಯಲ್ಲಿ ವೈವಿಧ್ಯಮಯವಾಗಿವೆ. ಇವುಗಳಲ್ಲಿರುವ ರಂಧ್ರಗಳಿಗನುಗುಣವಾಗಿಯ ಇವುಗಳನ್ನು ಒಂಬತ್ತು ವಿಧಗಳಲ್ಲಿ ವಿಂಗಡಿಸಬಹುದು (ಚಿತ್ರಗಳು ೧೪೩-೧೪೮).

೧. ಒಳಮೈ ಮತ್ತು ಹೊರಮೈ ಎರಡರಲ್ಲೂ ರಂಧ್ರಗಳಿಲ್ಲದೆ ಘನ ಗೋಡೆಯಂತಿರುವುದು.

೨. ಒಳ ಮೈಯಲ್ಲಿ ಮತ್ತು ಹೊರಮೈಯಲ್ಲಿ ಒಂದು ಚಿಕ್ಕ ರಂಧ್ರವಿರುವುದು.

೩. ಒಳಮೈಯಲ್ಲಿ ಒಂದು ದೊಡ್ಡ ಮತ್ತು ಹೊರಮೈಯಲ್ಲಿ ಒಂದರ ಪಕ್ಕದಲ್ಲೊಂದು ಎರಡು ಚಿಕ್ಕ ರಂಧ್ರಗಳಿರುವುದು.

೪. ಒಳಮೈಯಲ್ಲಿ ಒಂದು ದೊಡ್ಡ ಮತ್ತು ಹೊರಮೈಯಲ್ಲಿ ಒಂದೇ ಸಾಲಿನಲ್ಲಿ ಮೂರು ಚಿಕ್ಕ ರಂಧ್ರಗಳಿರುವುದು.

೫. ಒಳಮೈಯಲ್ಲಿ ಒಂದು ದೊಡ್ಡ ಮತ್ತು ಹೊರಮೈಯಲ್ಲಿ ಮೇಲಿನ ಸಾಲಿನಲ್ಲಿ ಎರಡು, ಕೆಳಗಿನ ಸಾಲಿನಲ್ಲಿ ಒಂದು ರಂಧ್ರಗಳಿರುವುದು.

೬. ಒಳಮೈಯಲ್ಲಿ ಒಂದು ದೊಡ್ಡ ಮತ್ತು ಹೊರಮೈಯಲ್ಲಿ ಮೇಲಿನ ಸಾಲಿನಲ್ಲಿ ಮೂರು, ಕೆಳಗಿನ ಸಾಲಿನಲ್ಲಿ ಒಂದು ರಂಧ್ರಗಳಿರುವುದು.



೧೪೦. ಮುದುಗಲ್ಲು, ದಿಡ್ಡಿಯ ಮುಂದಿನ ವರ್ತುಲಾಕಾರದ ಗೋಡೆ



೧೪೧. ಮುದುಗಲ್ಲು, ದಿಡ್ಡಿ



೧೪೨. ಮುದುಗಲ್ಲು, ಶಾಸನ, ಮಲಿಕ್ ಮುರಾದ ಕಟ್ಟಿಸಿದ ವಿಡಿ



೧೪೩. ಮುದುಗಲ್ಲು, ನಿಟುಗಳು




೧೪೪. ಮುದುಗಲ್ಲು, ಶಾಸನ, ಬಸವನ ನಿಟು



೧೪೫. ಮುದುಗಲ್ಲು, ಶಾಸನ, ಮಲಿಕ್ ಮುರಾದ ಕಟ್ಟಿಸಿದ ನಿಟು



೧೪೬. ಮುದುಗಲ್ಲು, ಶಾಸನ. ಯೆದುಲ ಶಾಹನ ಶೂರ ಪ್ರತಾಪ ಮಲಿಕ್ ಮುರಾದ ಕಟ್ಟಿಸಿದ ನಿಟು



೧೪೭. ಮುದುಗಲ್ಲು, ಶಾಸನ. ರಣದೊಳು ಹಿಂಮ್ಮೆಟುವ ಹೇಡಿಗಳರಸ ಮಲಿಕ ಮುರಾದ ಕಟಿಸಿದ ನಿಟು

೭. ಒಳಮೈಯಲ್ಲಿ ಒಂದು ಚಿಕ್ಕ ಮತ್ತು ಒಂದು ದೊಡ್ಡ ರಂಧ್ರ, ಹೊರಮೈಯಲ್ಲಿ ಮೇಲಿನ ಸಾಲಿನಲ್ಲಿ ಎರಡು ಮತ್ತು ಕೆಳಗಿನ ಸಾಲಿನಲ್ಲಿ ಒಂದು ರಂಧ್ರಗಳಿರುವುದು.

೮. ಒಳಮೈಯಲ್ಲಿ ಮೇಲಿನ ಸಾಲಿನಲ್ಲಿ ಎರಡು ಚಿಕ್ಕ ರಂಧ್ರ, ಕೆಳಗಿನ ಸಾಲಿನಲ್ಲಿ ಒಂದು ಬಹಳ ದೊಡ್ಡ ರಂಧ್ರ ಮತ್ತು ಹೊರಮೈಯಲ್ಲಿ ಮೇಲಿನ ಸಾಲಿನಲ್ಲಿ ಎರಡು ಚಿಕ್ಕ, ಕೆಳಗಿನ ಸಾಲಿನಲ್ಲಿ ದೊಡ್ಡ ವೃತ್ತಾಕಾರದ ರಂಧ್ರಗಳಿರುವುದು.

೯. ಒಳಮೈಯಲ್ಲಿ ಮಾತ್ರ ಬಹಳ ದೊಡ್ಡ ಗೂಡು ಇದ್ದು ಹೊರಭಾಗದಲ್ಲಿಎರಡು ರಂಧ್ರಗಳಿರುವುದು.

ಪ್ರಾಚೀನ ಕೋಟೆಗಳಲ್ಲಿ ನಿಟು ಅಥವಾ ತೆನೆ ಒಂದೇ ಕಲ್ಲಿನಲ್ಲಿ ಮಾಡಿದ ಘನಗೋಡೆಗಳಂತಿದೆ.[೨೯] ಒಂದು ನಿಟುವಿನ ಹಿಂದೆ ವೈರಿಗೆ ಕಾಣದಂತೆ ನಿಂತು ಎರಡು ನಿಟುಗಳ ಮಧ್ಯದ ಸಂದಿಯಿಂದ ಬಾಣ ಬಿಡಲು ಇವುಗಳನ್ನುಉಪಯೋಗಿಸುತ್ತಿದ್ದರು. ಇಂತಹ ಘನವಾದ ನಿಟುಗಳನ್ನು ಮುದುಗಲ್ಲಿನಲ್ಲಿ ನೋಡಬಹುದು. ಆದರೆ ಇಲ್ಲಿ ಇವುಗಳನ್ನು ಒಂದೇ ಕಲ್ಲಿನಲ್ಲಿ ಮಾಡದೆ, ಚಿಕ್ಕ ಕಲ್ಲುಗಳಿಂದ ಕಟ್ಟಲಾಗಿದೆ. ಮದ್ದುಗುಂಡುಗಳ ಬಳಕೆ ಪ್ರಾರಂಭವಾದ ಮೇಲೆ ನಿಟುಗಳ ವಿನ್ಯಾಸದಲ್ಲಿ ಬದಲಾವಣೆಯಾಯಿತು. ನಿಟುಗಳಲ್ಲಿ ಬಂದೂಕುಗಳನ್ನು ತೂರಿಸಲು ಚಿಕ್ಕ ರಂಧ್ರ ಮತ್ತು ತೋಪುಗಳ ಬಾಯಿಯನ್ನು ತೂರಿಸಲು ದೊಡ್ಡ ರಂಧ್ರಗಳನ್ನು ಅಳವಡಿಸಲಾಯಿತು. ಒಳಮೈಯಲ್ಲಿ ಒಂದು ಮತ್ತು ಹೊರಮೈಯಲ್ಲಿ ಹೆಚ್ಚು ರಂಧ್ರಗಳನ್ನು ಮಾಡುವುದರಿಂದ ಬೇಕಾದ ದಿಕ್ಕಿಗೆ ಗುಂಡು ಹಾರಿಸಲು ಅನುಕೂಲವಾಗುತ್ತದೆ. ಕೆಳಗಿನ ಚಿಕ್ಕ ರಂಧ್ರದಿಂದ ಕೋಟೆ ಗೋಡೆಯ ಹತ್ತಿರ ಬಂದವರ ಮೇಲೆ ಗುಂಡು ಹಾರಿಸಬಹುದು ಮತ್ತು ಕಾಯಿಸಿದ ಅಂಬಲಿ ಮುಂತಾದುವುಗಳನ್ನು ಸುರಿಯಬಹುದು. ಕೆಳಸಾಲಿನಲ್ಲಿಯ ದೊಡ್ಡ ರಂಧ್ರವನ್ನು ತೋಪಿನಿಂದ ಗುಂಡು ಹಾರಿಸಲು ಬಳಸಲಾಗುತ್ತಿತ್ತು. ಒಳಮೈಯಲ್ಲಿ ಇರುವ ದೊಡ್ಡ ಗೂಡು ಕಾವಲುಗಾರರನ್ನು ಬಿಸಿಲು ಮತ್ತು ಮಳೆಯಿಂದ ರಕ್ಷಿಸುತ್ತಿತ್ತು. ಒಂದು ಗೂಡನ್ನು ದೇವಾಲಯದ ದೇವಕೋಷ್ಠದ ಅರೆಗಂಬ ಮತ್ತು ಮೇಲಿನ ಕಪೋತಗಳಿಂದ ನಿರ್ಮಿಸಿದೆ. ಇವನ್ನು ಹನ್ನೆರಡನೇ ಶತಮಾನದ ದೇವಾಲಯದ ಅವಶೇಷಗಳಿಂದ ಸಂಗ್ರಹಿಸಿ ಪುನಃ ಉಪಯೋಗಿಸಿದೆ. ಇದರ ಹಿಂದಿನ ಗೋಡೆಯಲ್ಲಿ ರಂಧ್ರಗಳಿಲ್ಲ. ಇದರಲ್ಲಿ ಈಗ ಯಾವುದೇ ದೇವರ ವಿಗ್ರಹವಿಲ್ಲ.

## ಮುಂಚಾಚುಗಳು

ಕೋಟೆ ಗೋಡೆಯ ಮತ್ತು ಕೊತ್ತಳಗಳ ಮೇಲೆ ಅನೇಕ ಮುಂಚಾಚು (balcony) ಗಳಿವೆ (ಚಿತ್ರ ೧೪೯). ಕಾಟೀ ದರ್ವಾಜದಲ್ಲಿರುವ ಇಂತಹ ಎರಡು ಮುಂಚಾಚುಗಳನ್ನು ಈಗಾಗಲೇ ಗಮನಿಸಿದ್ದೇವೆ. ಮುಂಚಾಚುಗಳು ಕೋಟೆ ಗೋಡೆ ಮತ್ತು ಕೊತ್ತಳಗಳ ರೇಖೆಯಿಂದ ಹೊರಭಾಗಕ್ಕೆ ಮುಂದೆ ಚಾಚಿಕೊಂಡಿವೆ.

ಆಕಾರದಲ್ಲಿ ನಿಟುಗಳಂತಿರುವ ಇವು ವಿವಿಧ ಗಾತ್ರದವುಗಳಾಗಿದ್ದು, ಗಾತ್ರಕ್ಕನುಗುಣವಾಗಿ ಎರಡು, ಮೂರು ಅಥವಾ ನಾಲ್ಕು ಬೋದಿಗೆಗಳ ಮೇಲೆ ನಿಂತಿವೆ. ಕೆಲವು ಬೋದಿಗೆಗಳನ್ನು ಸುರುಳಿ ಅಥವಾ ಪುಷ್ಪಗಳಿಂದ ಅಲಂಕರಿಸಿದೆ. ಚಿಕ್ಕ ಮುಂಚಾಚುಗಳ ಹೊರಮೈಯಲ್ಲಿ ಎರಡು ಅಥವಾ ಮೂರು ರಂಧ್ರಗಳಿವೆ. ದೊಡ್ಡ ಮುಂಚಾಚುಗಳು ಅಲಂಕಾರಮಯವಾಗಿವೆ.ಇವುಗಳಲ್ಲಿ ಬೋದಿಗೆಗಳ ಮೇಲೆ ತೊಲೆ, ಕಪೋತ ಮತ್ತು ಪದ್ಮ ಪಟ್ಟಿಕೆಗಳಿವೆ. ಕೆಲವು ಮುಂಭಾಗದಲ್ಲಿ ಮೂರು ಎತ್ತರವಾದ ಕಮಾನುಗಳ ಕಿಟಕಿಗಳನ್ನು ಹೊಂದಿವೆ. ಕಾಟೀ ದರ್ವಾಜದ ದಕ್ಷಿಣಕ್ಕೆ ಹೊರ ಗೋಡೆಯಲ್ಲಿ ವಿಶೇಷವಾಗಿ ಅಲಂಕರಿಸಿದ ಎರಡು ಮುಂಚಾಚುಗಳಿವೆ (ಚಿತ್ರ ೧೨೩). ಇವುಗಳ ವಿನ್ಯಾಸ ಚಿಕ್ಕ ದೇವಾಲಯದಂತಿದೆ. ಇವು ಅಧಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ ಮತ್ತು ಶಿಖರಗಳನ್ನು ಹೊಂದಿವೆ. ಎಡ ಭಾಗದಲ್ಲಿರುವ ಮುಂಚಾಚಿನ ಭಿತ್ತಿ ಭಾಗದಲ್ಲಿ ಆಯತಾಕಾರದ ಗೂಡು ಇದ್ದು, ಅದರಲ್ಲಿ ಬಲಗೈಯನ್ನು ಮೇಲೆತ್ತಿ ನಿಂತಿರುವ ಆಂಜನೇಯನ ಉಬ್ಬು ಶಿಲ್ಪವಿದೆ. ಇದರ ಮೇಲ್ಭಾಗದಲ್ಲಿ ಆಯತಾಕಾರದ ಶಾಲ ಶಿಖರವಿದೆ. ಬಲಭಾಗದಲ್ಲಿರುವ ಮುಂಚಾಚಿನ ಅಂತಹವೇ ಗೂಡು ಕಮಾನಿನಾಕಾರದಲ್ಲಿದೆ. ಇದರಲ್ಲಿ ಬಲಗೈಯಲ್ಲಿ ಹಾವನ್ನು ಹಿಡಿದು, ಎಡಗೈಯನ್ನು ಮೇಲೆತ್ತಿ ನಿಂತಿರುವ ಗರುಡನ ಉಬ್ಬು ಶಿಲ್ಪವಿದೆ. ಇದರ ಮೇಲ್ಭಾಗದಲ್ಲಿ ಚೌಕಾಕಾರದ ಕೂಟ ಶಿಖರವಿದೆ. ಶಿಖರದ ಮುಂಭಾಗ ದಲ್ಲಿ ಕೂಡು ಕೀರ್ತಿಮುಖಗಳಿವೆ. ಕೂಡನ್ನು ಮನುಷ್ಯನ ತಲೆಯ ಉಬ್ಬು ಶಿಲ್ಪದಿಂದ ಅಲಂಕರಿಸಿದೆ.

## ಒಳಕೋಟೆ

ಬೆಟ್ಟದ ಮೇಲೆ ಚಿಕ್ಕದಾದ ಒಳಕೋಟೆಯಿದೆ. ಈ ಕೋಟೆಗೆ ಬಾಗಶಃ ಕೆತ್ತಿದ ಅನಿಯಮಿತಾಕಾರದ ಚಿಕ್ಕ ಕಲ್ಲುಗಳನ್ನು ಬಳಸಿರುವುದರಿಂದ ಕಲ್ಲುಗಳ ಮಧ್ಯದಲ್ಲಿ ದೊಡ್ಡ ಸಂದಿಗಳುಂಟಾಗಿವೆ. ಸಂದಿಗಳಲ್ಲಿ ಕಲ್ಲಿನ ಚಕ್ಕೆಗಳನ್ನು ಬಳಸಿದೆ, ಗಾರೆಯನ್ನು ಬಳಸಿಲ್ಲ. ಇದರಲ್ಲಿ ಚೌಕ ಮತ್ತು ಆಯತಾಕಾರದ ಏಳು ಕೊತ್ತಳ ಗಳಿಗಿವೆ. ಒಂದು ಕೊತ್ತಳ ವೃತ್ತಾಕಾರದಲ್ಲಿದೆ. ಮೇಲ್ಭಾಗದಲ್ಲಿ ತೆನೆಗಳಿಲ್ಲ. ಇದು ವಿಜಯನಗರ ಅರಸರ ಕಾಲದಲ್ಲಿ ನಿರ್ಮಾಣಗೊಂಡಿದೆ. ಕೋಟೆಯೊಳಗೆ ವರ್ತುಲಾಕಾರದ ಬಹಳ ದೊಡ್ಡ ಕಾವಲುಗೋಪುರ (ಚಿತ್ರ ೧೫೨). ಗಗನ್‌ಮಹಲ್ ಮತ್ತು ಈದಗಾ ಇವೆ. ಅಲ್ಲದೆ ಇಲ್ಲಿ ಒಂದು ತೋರಣವು ಕಂಡುಬರುತ್ತದೆ.

## ತೋಪುಗಳು

ಕೋಟೆಯಲ್ಲಿ ಅನೇಕ ತೋಪುಗಳನ್ನು ಬಳಸಿದ್ದು ಕೋಟೆ ಗೋಡೆಯಲ್ಲಿಯ ತೋಪು ಕಿಂಡಿಗಳು ಮತ್ತು ಅವುಗಳನ್ನು ಸ್ಥಾಪಿಸಲು ನಿರ್ಮಿಸಿದ ವೇದಿಕೆಗಳಿಂದ ಸ್ಪಷ್ಟವಾಗುತ್ತದೆ. ಆದರೆ ಈಗ ಇಲ್ಲಿ ಉಳಿದಿರುವುದು

ನಾಲ್ಕು ತೋಪುಗಳು ಮಾತ್ರ. ಇವುಗಳಲ್ಲಿ ಅತಿ ದೊಡ್ಡ ತೋಪು ಅಲಿ ಬುರುಜಿನ ಮೇಲಿದೆ. ಇದು ೩೯೨ ಸೆಂ.ಮೀ. ಉದ್ದವಿದೆ. ಇದು ಬಳೆಗಳ ಹೊರ ಪದರು ಮತ್ತು ಉದ್ದವಾದ ಪಟ್ಟಿಗಳ ಒಳ ಪದರಿನಿಂದ ನಿರ್ಮಿತವಾಗಿದೆ. ನೆಲದ ಮೇಲೆ ಸ್ಥಾಪಿಸಲು ಕೆಳ ಭಾಗದಲ್ಲಿ ಒಂದು ಹೊರ ಚಾಚು (projection) ಇದೆ. ಸಾಗಿಸಲು ಅನುಕೂಲವಾಗುವಂತೆ ಮೇಲ್ಭಾಗದಲ್ಲಿ ನಾಲ್ಕು ಜೊತೆ ಬಳೆಗಳ ಹಿಡಿಕೆಗಳಿವೆ. ೩೮೩ ಸೆಂ.ಮೀ. ಉದ್ದವಿರುವ ಮತ್ತೊಂದು ತೋಪು ಫತೇ ದರ್ವಾಜದ ಬುರುಜಿನ ಮೇಲಿದೆ (ಚಿತ್ರ ೧೫೦). ಇದು ಅಲಿ ಬುರುಜಿನ ತೋಪಿನಂತಿದೆ. ಕಾಟೀ ದರ್ವಾಜದ ಉತ್ತರಕ್ಕೆ ಕೋಟೆಗೋಡೆಯ ಮೇಲೆ ಎರಡು ತೋಪುಗಳಿವೆ. ಅವುಗಳಲ್ಲಿ ಒಂದು ೩೦೦ ಸೆಂ.ಮೀ. ಉದ್ದವಿದೆ. ಇದರ ಹಿಂಭಾಗದ ಹತ್ತಿರ ಒಂದು ಜೊತೆ ಬಳೆಗಳ ಹಿಡಿಕೆಗಳಿವೆ. ಮಧ್ಯಭಾಗದಲ್ಲಿ ಎರಡೂ ಬದಿಗೆ ಒಂದೊಂದು ಹೊರ ಚಾಚುಗಳಿವೆ. ಬಾಯಿಯನ್ನು ಒಂಭತ್ತು ಚೂಪಾದ ದಳಗಳ ಹೂವಿನಿಂದ ಮತ್ತು ಕುತ್ತಿಗೆಯನ್ನು ಮಣಿಗಳಿಂದ ಅಲಂಕರಿಸಿದೆ. ಇದರ ಪಕ್ಕದಲ್ಲಿರುವ ಇನ್ನೊಂದು ತೋಪು ತುಂಡಾಗಿದೆ.

### ಕಾವಲು ಗೋಪುರ

ಬೆಟ್ಟದ ಮೇಲೆ ಬಂಡೆಗಳಿಂದ ಸ್ವಾಭಾವಿಕವಾಗಿ ನಿರ್ಮಾಣಗೊಂಡಿರುವ ಎತ್ತರವಾದ ಸ್ಥಳದಲ್ಲಿ ವರ್ತುಲಾಕಾರದ ಕಾವಲುಗೋಪುರವನ್ನು ಕಟ್ಟಿದೆ. ಮೇಲೆ ಹೋಗಲು ಬಂಡೆಗಳ ಮಧ್ಯದ ಸಂದಿಯಲ್ಲಿ ಮೆಟ್ಟಿಲುಗಳನ್ನು ಕಟ್ಟಿದೆ. ಮೇಲೆ ಅಗಲವಾದ ವೇದಿಕೆಯನ್ನು ನಿರ್ಮಿಸಿ ಅದರ ಮೇಲೆ ಗೋಪುರವನ್ನು ಕಟ್ಟಿದೆ (ಚಿತ್ರ ೧೫೧).

### ಗಗನ್ ಮಹಲ್

ಬೆಟ್ಟದ ಮೇಲೆ ಒಳಕೋಟೆಯಲ್ಲಿ ಚಿಕ್ಕ ಗಲ್ಲುಗಳಿಂದ ಕಟ್ಟಿ ಗಾರೆ ಮಾಡಿದ ಶಿಥಿಲಾವಸ್ಥೆಯಲ್ಲಿರುವ ಒಂದು ಕಟ್ಟಡವಿದೆ. ಅಲಂಕಾರವಿಲ್ಲದ ಎತ್ತರವಾದ ವೇದಿಕೆಯ ಮೇಲೆ ನಿರ್ಮಿಸಿದ ಈ ಕಟ್ಟಡದ ಮಧ್ಯಭಾಗ ಬಿದ್ದು ಹೋಗಿದೆ. ನಾಲ್ಕು ದಿಕ್ಕಿನ ಗೋಡೆಗಳಲ್ಲಿ ದೊಡ್ಡ ಕಮಾನುಗಳಿವೆ. ಮೇಲಿನ ಕೈಪಿಡಿ ಗೋಡೆಯಲ್ಲಿ ಕೆಳ ಸಾಲಿನಲ್ಲಿ ಚಿಕ್ಕ ಕಮಾನು ಕಿಂಡಿಗಳು, ಮೇಲಿನ ಸಾಲಿನಲ್ಲಿ ತೆನೆಗಳು ಮತ್ತು ಚಿಕ್ಕ ಮಿನಾರ್‌ಗಳು ಇವೆ (ಚಿತ್ರ ೧೫೩). ಇದರ ಮೆಟ್ಟಿಲುಗಳ ಪಕ್ಕದಲ್ಲಿ ವೇದಿಕೆಯಲ್ಲಿಯ ಕಲ್ಲಿನ ಮೇಲಿನ ಕನ್ನಡ ಶಾಸನವು ಇದನ್ನು 'ಸೊಫೆ' ಎಂದು ಉಲ್ಲೇಖಿಸುತ್ತದೆ. ಬಿಜಾಪುರದ ಮಹಮ್ಮದ್ ಆದಿಲ್‌ಶಾಹನ ಅಧಿಕಾರಿಯಾದ ರಾಘೋಜಿ ಸೆದಬಾಬಾಜಿ ಕ್ರಿ.ಶ. ೧೬೪೩ರಲ್ಲಿ ಇದನ್ನು ಕಟ್ಟಿಸಿದನು.[೬೦] ಹೈದರಾಬಾದಿನ ವಸ್ತು ಸಂಗ್ರಹಾಲಯದಲ್ಲಿರುವ




1




2




3




4




5




6




7




8




9

೧೪೮. ಮುದುಗಲ್ಲು, ನಿಟುಗಳು



೧೪೯. ಮುದುಗಲ್ಲು, ಫತೇ ದರ್ವಾಜದ ಬುರುಜು



೧೫೦. ಮುದುಗಲ್ಲು, ಫತೇ ದರ್ವಾಜದ ಬುರುಜಿನ ಮೇಲಿನ ತೋಪು



೧೫೧. ಮುದುಗಲ್ಲು, ಕಾವಲು ಗೋಪುರ



೧೫೨. ಮುದುಗಲ್ಲು, ಕಾವಲು ಗೋಪುರ



೧೫೩. ಮುದುಗಲ್ಲು, ಗಗನಮಹಲ್



೧೫೪. ಮುದುಗಲ್ಲು, ವಕ್ರಾಣಿ

ಮುದುಗಲ್ಲಿನ ಪರ್ಶಿಯನ್ ಶಾಸನವು ಇದೇ ಅರಸನ ಸೇವಕನಾದ ರಾಘುವಂದು ಇದೇ ಪರ್ವ ಬೆಟ್ಟದ ಮೇಲೆ ಗಗನ್‌ಮಹಲನ್ನು ಕಟ್ಟಿಸಿದನೆಂದು ತಿಳಿಸುತ್ತದೆ. ಕಟ್ಟಡವನ್ನು ಶಾಸನವು ಹೀಗೆ ವರ್ಣಿಸುತ್ತದೆ : "ಸೊಬಗು ಮತ್ತು ಆಕರ್ಷಣೆಯಲ್ಲಿ ಬೆಟ್ಟದ ಮೇಲೆ ಕಟ್ಟಿದ ಸುಂದರವಾದ ಗಗನ್‌ಮಹಲ್‌ಗೆ ಸಾಟಿಯಾದುದು ಇಲ್ಲ. ಅಮೃತ ಶಿಲೆಯಲ್ಲಿ ಕಟ್ಟಿದ ಥಳಥಳಿಸುವ ಅರಮನೆ ಪೂರ್ವದಿಂದ ಪಶ್ಚಿಮದವರೆಗೆ ಪ್ರಕಾಶಮಾನವಾದ ಚಂದ್ರನಂತೆ ಹೊಳೆಯುತ್ತದೆ. (ಇದನ್ನುಕಟ್ಟಿದ) ಪರ್ವತಕ್ಕೆ ಕಾಕಸಸ್ ಪರ್ವತವನ್ನು ಹೋಲಿಸಲಾಗದು. ಇದರಷ್ಟು ಎತ್ತರ ಮತ್ತು ಬೃಹತ್ತಾದುದು ಜಗತ್ತಿನಲ್ಲಿ ಅಸ್ತಿತ್ವದಲ್ಲಿಲ್ಲ."[೮] ಕನ್ನಡ ಶಾಸನದ ರಾಘೋಜಿಯೇ ಪರ್ಶಿಯನ್ ಶಾಸನದ ರಾಘುವಂದು. ಆದ್ದರಿಂದ ಸೊಫೆಯೇ ಗಗನ್‌ಮಹಲ್. ಸೊಫೆ ಎಂದರೆ ಸೋಫಾ (sofa) ಎಂದರ್ಥ. ಸೋಫಾ ಪದವು ಅರಬ್ಬೀ ಭಾಷೆಯ ಸುಫ್ಫಾದಿಂದ ಬಂದಿದೆ. ಈ ಕಟ್ಟಡದಲ್ಲಿ ಕುಳಿತುಕೊಳ್ಳಲು ಸೋಫಾ ಇತ್ತು. ಇಂತಹ ಸೋಫಾವನ್ನು ರಾಯಚೂರು ಕೋಟೆಯಲ್ಲಿಯ ಇಂತಹದೇ ಕಟ್ಟಡದಲ್ಲಿ ಈಗ ನೋಡಬಹುದು. ಈ ಕಟ್ಟಡ ಅತಿ ಎತ್ತರದಲ್ಲಿರುವುದರಿಂದ ಕೋಟೆಯೊಳಗೆ ಮತ್ತು ಕೋಟೆ ಹೊರಗೆ ದೂರದವರೆಗೆ ನೋಡಬಹುದು.

### ತುಪ್ಪದ ಕೊಳ

ಬೆಟ್ಟದ ಮೇಲಿನ ಹನುಮಂತನ ಕೊತ್ತಳದ ಹತ್ತಿರ ವೃತ್ತಾಕಾರದ ಚಿಕ್ಕ ತುಪ್ಪದ ಕೊಳವಿದೆ. ಇದನ್ನು ಚಿಕ್ಕ ಕಲ್ಲುಗಳಿಂದ ಕಟ್ಟಿ ಒಳಭಾಗದಲ್ಲಿ ಗಾರೆಯನ್ನು ಮಾಡಿದೆ.

### ವ್ಯಾಯಾಮ ಶಾಲೆ

ಜಾಮಿ ಮಸೀದಿಯ ಎದುರಿಗೆ ವ್ಯಾಯಾಮ ಶಾಲೆಯಿದೆ. ಕಡಿಮೆ ಎತ್ತರದ ಈ ಚಿಕ್ಕ ಕಟ್ಟಡದ ಛಾವಣಿಯಲ್ಲಿ ಗಾರೆಯ ಪುಷ್ಪ ಮತ್ತು ಜಾಮಿತಿಯ ವಿವಿಧ ವಿನ್ಯಾಸಗಳ ಅಲಂಕಾರವಿದೆ.

### ಬಾವಿಗಳು

ಕೋಟೆಯಲ್ಲಿ ಅನೇಕ ಬಾವಿಗಳಿವೆ. ಇವುಗಳಲ್ಲಿ ಅತಿ ಪುರಾತನವಾದದ್ದು ಅರಬಾವಿ. ವಕ್ರಾಣಿಯ ಪೂರ್ವಕ್ಕಿರುವ ಚೌಕಾಕಾರದ ಈ ಬಾವಿಗೆ ಪೂರ್ವ ದಿಕ್ಕಿನಲ್ಲಿ ಮೆಟ್ಟಿಲುಗಳಿವೆ. ಪ್ರವೇಶದ ಪಕ್ಕದಲ್ಲಿರುವ ಕಂಬದ ಮೇಲೆ ಕ್ರಿ.ಶ. ೧೦೬೫ರ ದಾನ ಶಾಸನವಿರುವುದರಿಂದ[೬] ಈ ಬಾವಿ ಅದಕ್ಕಿಂತ ಹಿಂದಿನದು. ವಕ್ರಾಣಿಯ ನೈರುತ್ಯಕ್ಕೆ ಮತ್ತೊಂದು ಚಿಕ್ಕ ಬಾವಿಯಿದೆ. ಆಯತಾಕಾರದ ಈ ಬಾವಿಯ ಪೂರ್ವಕ್ಕೆ ಮೆಟ್ಟಿಲುಗಳಿವೆ. ಕಾಟೀ

೧೫೫. ಮುದುಗಲ್ಲು, ಚಾರಮಹಲ್ ಬಾವಿ






೧೫೬. ಮುದುಗಲ್ಲು, ಅಲಿ ಬುರುಜು

ದರ್ವಾಜದ ನೈರುತ್ಯಕ್ಕೆ ಆಯತಾಕಾರದ ದೊಡ್ಡ ಬಾವಿಯಿದೆ. ಇದನ್ನು ಖಾಸ್‌ಬೌಡಿ ಎಂದು ಕರೆಯುತ್ತಾರೆ. ಆಳವಾದ ಬಾವಿಗೆ ಪಶ್ಚಿಮ ದಿಕ್ಕಿನಲ್ಲಿ ಮೆಟ್ಟಿಲುಗಳಿವೆ. ಅಲಿ ಬುರುಜಿನ ಹತ್ತಿರ ಚಾರ್‌ಮಹಲ್ ಬಾವಿಯಿದೆ (ಚಿತ್ರ ೧೫೫). ಚೌಕಾಕಾರದ ಬಾವಿಗೆ ಪೂರ್ವ ದಿಕ್ಕಿನಲ್ಲಿ ಮೆಟ್ಟಿಲುಗಳಿವೆ. ಈ ಬಾವಿಯನ್ನು ವಿಜಯನಗರ ಅರಸ ನರಸನಾಯಕನ ಕಾಲದಲ್ಲಿ ಕ್ರಿ.ಶ. ೧೫೦೨ರಲ್ಲಿ ಸಾಳುವ ತಿಮ್ಮಯ್ಯ ಕಟ್ಟಿಸಿದನೆಂದು ಅಲ್ಲಿಯ ಶಾಸನ ತಿಳಿಸುತ್ತದೆ.[೬೩] ಬೆಟ್ಟದ ಮೇಲೆ ಹಲಾಲಖೋರ ಬಾವಿ ಇದೆ. ಚೌಕಾಕಾರದ ಈ ಚಿಕ್ಕ ಬಾವಿಯನ್ನು ಕುರುಗೋಡ ಸೋಮಣ್ಣನಾಯಕನ ಪ್ರಧಾನನ ಮಗ ನರಸಪ್ಪನು ಕ್ರಿ.ಶ. ೧೫೦೩ರಲ್ಲಿ ಕಟ್ಟಿಸಿರುವುದು ಅದರಲ್ಲಿಯ ಶಾಸನದಿಂದ ತಿಳಿಯುತ್ತದೆ.

ಕೋಟೆಯ ಪಶ್ಚಿಮ ಭಾಗದಲ್ಲಿ ಕೋಟೆಗೋಡೆಯ ಪಕ್ಕದಲ್ಲಿ ವಿಶಾಲವಾದ ವಕ್ರಾಣಿಯಿದೆ. ಇದರ ಪೂರ್ವ ದಿಕ್ಕಿಗೆ ಕೆಳಗಿಳಿಯಲು ಮೂರುಕಡೆ ಮೆಟ್ಟಿಲುಗಳಿವೆ (ಚಿತ್ರ ೧೫೪).

## ದೇವಾಲಯಗಳು

ಫತೇ ದರ್ವಾಜದಿಂದ ದಕ್ಷಿಣಕ್ಕೆ ಹೋಗುವ ದಾರಿಯ ಪಶ್ಚಿಮಕ್ಕೆ ರಾಮಲಿಂಗ ದೇವಾಲಯವಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯದಲ್ಲಿ ಮೂರು ಗರ್ಭಗುಡಿಗಳಿವೆ. ಇದರಲ್ಲಿ ರಾಮಲಿಂಗೇಶ್ವರ ಲಿಂಗ, ಆಂಜನೇಯ ಮತ್ತು ಗಣೇಶನನ್ನು ಪೂಜಿಸುತ್ತಾರೆ. ಹನ್ನೆರಡನೇ ಶತಮಾನದ ದೇವಾಲಯದಲ್ಲಿ ಕ್ರಿ.ಶ. ೧೨೧೫ರ ದಾನಶಾಸನವಿದೆ.[೬೫] ಕೋಟೆಯ ನೈರುತ್ಯ ಭಾಗದಲ್ಲಿ ಬೆಟ್ಟದ ಬುಡದಲ್ಲಿ ದಿಡ್ಡಿ ಆಂಜನೇಯನ ಗುಹಾ ದೇವಾಲಯವಿದೆ. ಇದರಲ್ಲಿಯ ಬಂಡೆಯ ಮೇಲೆ ಆಂಜನೇಯನ ಉಬ್ಬು ಶಿಲ್ಪವಿದೆ.

## ಮಸೀದಿಗಳು ಮತ್ತು ದರ್ಗಾಗಳು

ಕಾಟೀ ದರ್ವಾಜದಿಂದ ಪಶ್ಚಿಮಕ್ಕೆ ಹೋಗುವಾಗ ದಾರಿಯ ದಕ್ಷಿಣಕ್ಕೆ ನಾನಾ ದರ್ಗಾ ಇದೆ. ಇದರ ಪಕ್ಕದಲ್ಲಿ ಉತ್ತರಾಭಿಮುಖವಾಗಿರುವ ಜಾಮಿ ಅಥವಾ ಕಾಲಿ ಮಸೀದಿಯಿದೆ. ಈ ಮಸೀದಿಯನ್ನು ಆದಿಲ್ ಶಾಹಿ ಅರಸರ ಅಧಿಕಾರಿಯಾದ ದೀನದಾರ್ ಖಾನಸು ಹದಿನಾರನೇ ಶತಮಾನದಲ್ಲಿ ಕಟ್ಟಿಸಿದನು.[೬೬] ಇಲ್ಲಿಂದ ಮುಂದೆ ಪಶ್ಚಿಮಕ್ಕೆ ಹೋದಾಗ ಹುಸೇನ್ ಪಾಶ ದರ್ಗಾ ಇದೆ. ಅರಬಾವಿಯ ಹತ್ತಿರ ಪಶ್ಚಿಮಕ್ಕೆ ಚಿಕ್ಕದಾದ ಮತ್ತೊಂದು ಮಸೀದಿಯಿದೆ.

## ಶಾಸನಗಳಲ್ಲಿಯ ವಾಸ್ತು ಪದಗಳು

ಕೋಟೆಯ ವಿವಿಧ ಭಾಗಗಳನ್ನು ಸೂಚಿಸುವ ಕೆಲವು ಪದಗಳು ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಕೋಟೆ ಕಟ್ಟಿಸಿದವರು ಇಂತಹ ಭಾಗಗಳನ್ನು ಆಯಾ ಪದಗಳಿಂದ ಗುರುತಿಸುತ್ತಿದ್ದರೆಂದು ಖಚಿತವಾಗಿ ಹೇಳಬಹುದು.

ಕೋಟೆಯ ಬಾಗಿಲುಗಳನ್ನು ಎರಡು ವಿಧಗಳಲ್ಲಿ ವಿಂಗಡಿಸಿ ಗುರುತಿಸಿದೆ. ದೊಡ್ಡ ಬಾಗಿಲನ್ನು 'ಅಗುಸೆ'[೧೭] ಎಂದು ಮತ್ತು ಚಿಕ್ಕ ಬಾಗಿಲುಗಳನ್ನು 'ದಿಡ್ಡಿ'ಗಳೆಂದು[೧೮] ಉಲ್ಲೇಖಿಸಿದೆ. ಕಾಟೀ ದರ್ವಾಜದ ಮಧ್ಯದ ಬಾಗಿಲಿನ ಕಟ್ಟೆಗಳ ಮೇಲಿರುವ ಮಂಟಪದಂತಹ ಮೊಗಸಾಲೆಯನ್ನು ತೆಲುಗು ಶಾಸನದಲ್ಲಿ 'ಮೊಗಸಾಲ'[೧೯] ಎಂದು ಉಲ್ಲೇಖಿಸಿದೆ. ಇದೇ ಬಾಗಿಲಿನಲ್ಲಿಯ ಕದವನ್ನು 'ಕದ'[೨೦] ಎಂದೇ ಉಲ್ಲೇಖಿಸಿದೆ.

ಕೊತ್ತಳಗಳನ್ನು ಕೆಲವು ಕನ್ನಡ ಶಾಸನಗಳಲ್ಲಿ 'ಕೊತ್ತಳ'[೨೧]ಗಳೆಂದು ಮತ್ತು ಒಂದು ತೆಲುಗು ಶಾಸನದಲ್ಲಿ 'ಕೊತ್ತಳಂ'[೨೨] ಎಂದು ಗುರುತಿಸಿದೆ. ಪರ್ಶಿಯನ್ ಶಾಸನಗಳಲ್ಲಿ ಕೊತ್ತಳಗಳನ್ನು 'ಬುರ್ಜ್'[೨೩] ಎಂದು ಉಲ್ಲೇಖಿಸಿದೆ. ಪರ್ಶಿಯನ್ ಭಾಷೆಯಲ್ಲಿ ಕೊತ್ತಳವನ್ನು ಬುರ್ಜ್ ಎಂದು ಕರೆಯುವರು. ಪರ್ಶಿಯನ್ ಭಾಷೆ ಹೆಚ್ಚು ಬಳಕೆಯಲ್ಲಿದ್ದುದರಿಂದ ಈ ಪದ ಜನಜನಿತವಾಗಿತ್ತು. ಆದುದರಿಂದ ಕೆಲವು ಕನ್ನಡ ಶಾಸನಗಳಲ್ಲಿ ಕೊತ್ತಳವನ್ನು 'ಬುರುಜು'[೨೪] ಎಂದೇ ಉಲ್ಲೇಖಿಸಿದೆ. ಕೋಟೆಯ ಮೇಲಿನ ತೆನೆಗಳನ್ನು 'ನಿಟು'ಗಳೆಂದು ಉಲ್ಲೇಖಿಸಿರುವುದನ್ನು ಮೇಲೆ ಗಮನಿಸಿದ್ದೇವೆ.

## ಶಾಸನಗಳಲ್ಲಿಯ ಬಿರುದುಗಳು

ಮುದುಗಲ್ಲು ಕೋಟೆಯ ಮೇಲೆ ಅತಿ ಹೆಚ್ಚು ಶಾಸನಗಳಿವೆ. ಇವು ಬಾಗಿಲು, ಬುರುಜು ಮತ್ತು ನಿಟುಗಳನ್ನು ಕಟ್ಟಿಸಿದ ವಿವರಗಳನ್ನು ನೀಡುತ್ತವೆ. ನಿರ್ಮಾಣ ಕಾರ್ಯಕ್ಕೆ ಸಂಬಂಧಿಸಿದ ಅರಸ ಅಥವಾ ಅಧಿಕಾರಿಯ ಹೆಸರನ್ನು ಜೊತೆಗೆ ಅವನ ಅನೇಕ ಬಿರುದುಗಳನ್ನು ಉಲ್ಲೇಖಿಸುತ್ತವೆ. ಕೆಲವು ಬಿರುದುಗಳು ಹೀಗಿವೆ : "ಸ್ವಾಮಿ ಕಾರ್ಯ ಹೇತು, ಪ್ರಜಾಪಾಲಕ, ಸತ್ಯಸಂಧ, ರಣರಂಗಧೀರ, ಸ್ವಾಮಿದ್ರೋಹರ ಗಂಡ, ತುರುಕದಳ ವಿಭಾಡ, ಸಾಹಸಭೀಮ, ಅರಿರಾಯಮಾನಮರ್ದನ, ಪರದಳಕೆ ಕಾಲಭೈರವ, ಅರಿಗಳ ಹೃದಯಶೂಲ, ಚಪಡವ ಕೇಳುವ ದೊರೆಗಳ ಗಂಡ, ಆಡಿ ತಪ್ಪುವವರ ಮಿಂಡ, ಲೋಭಿ ವಜೀರರ ಗಂಡ, ಪರದ್ರವ್ಯಕೆ ಆಸೆ ಮಾಡುವ ದೊರೆಗಳ ಗಂಡ, ರಣದೊಳು ಓಮ್ಮೆಟುವ ಹೇಡಿಗಳರಸ, ಆದಿಲಶಾಹನ ಹಲಾಲಖೋರ ಮತ್ತು

ಆದಿಲಶಾಹನ ನೆಚ್ಚಿನ ಬಂಟ" ಕೋಟೆಯ ಸಂರಕ್ಷಣೆಗೆ ನೇಮಕಗೊಂಡ ಸೈನಿಕರು ಇವುಗಳನ್ನು ಪದೇ ಪದೇ ಓದಿದಾಗ ಅವರಿಗೆ ಅವರ ಕರ್ತವ್ಯಗಳು ನೆನಪಾಗಿ, ತಮ್ಮ ಒಡೆಯನ ಬಗ್ಗೆ ಅಭಿಮಾನ ಹೆಚ್ಚಾಗಿ, ತಮ್ಮ ಜೀವದ ಹಂಗು ತೊರೆದು ಕೋಟೆಯನ್ನು ರಕ್ಷಿಸುವಂತೆ ಪ್ರೇರೇಪಿಸುತ್ತಿದ್ದವು. ಸೈನಿಕರಲ್ಲಿ ದೇಶಭಕ್ತಿಯ ಪ್ರಜ್ಞೆ ಮೂಡಿಸುವುದರೊಂದಿಗೆ ಚಾಡಿ ಹೇಳದಂತೆ, ಜಿಪುಣರಾಗದಂತೆ, ರಣರಂಗ ದಿಂದ ಪಲಾಯನ ಮಾಡದಂತೆ ನೀತಿಗಳನ್ನು ಸಹ ಬೋಧಿಸುತ್ತಿದ್ದವು.[೨೨]

ಟಿಪ್ಪಣಿಗಳು

೧. Allchin F.R., 1960, *Piklihal Excavations, APGAS,* No.1, Hyderabad, p.3, McCrindle J.W. 1885, *Ancient India as described by Ptolemy,* p. 179.

೨. *ARIE,* 1957-58, No. B 365.

೩. *ಅದೇ,* No. B 364.

೪. *HAS,* 18, No.16.

೫. *ಅದೇ,* No. 17; *APGAS,* 15, No. Raichur Dist. 25; *ARIE,* 1957-58, No.B 253.

೬. Allchin, *ಪೂರ್ವೋಕ್ತ*, p. 3; *Gazetteer of the Bombay Presidency,* Vol.I, pt. ii, Bombay, 1856, pp. 527-533, 245.

೭. Nilakanta Sastri K.A., 1966, *A History of South India*, p. 236.

೮. Desai P B. Shrinivas H. Ritti, B.R.Gopal, 1981, *A History of Karnataka,* Karnatak University, Dharwad, pp. 353-354.

೯. ಅಕ್ಕಸಾಲಿಗನ ಮಗಳ ಘಟನೆಯಿಂದ ಆಕರ್ಷಿತನಾದ ಆಂಗ್ಲ ಸಾಹಿತಿಯೊಬ್ಬನು ಇದನ್ನು ಆಧರಿಸಿ ಒಂದು ಐತಿಹಾಸಿಕ ಕಾದಂಬರಿಯನ್ನು ಬರೆದಿದ್ದಾನೆ. Watson Adam, 1964, *The war of the Goldsmith's Daughter,* Chatto & Windus, London.

೧೦ *ARIE,* 1953-54, No. B 254; *HAS,* 18, No. 18; *APGAS,* 15, No. Raichur Dist. 26.

೧೧. Sewell Robert, 1982 (reprint), *A Forgotten Empire*, Asian Educational Services, New Delhi, p. 76.

೧೨. *ARIE,* 1957-58, No. B 363.

೧೩. Patil Channabasappa S. and Vinoda C. Patil, (Eds), 1998, *Inscriptions of Raichur District,* Directorate of Archacology and Musems, Mysore, Nos. 120-121.

೧೪. *ARIE*, 1957-58, No. B 366.

೧೫. *ಅದೇ,* 1958-59, No. D 125.

೧೬. *ಅದೇ,* 1957-58, No. B 362.

೧೭. *ARSIE,* 1926-27, B.K. No. 169; *SII,* XV, No. 261.

೧೮. *ARIE,* 1959-60, No. B 502.

೧೯. *ಅದೇ,* 1957-58, No. B 360-361.

೨೦. Patil Channabasappa S. and Vinoda C. Patil, *ಪೂರ್ವೋಕ್ತ,* No. 183

೨೧. *ಅದೇ,* No. 164.

೨೨. *ಅದೇ,* No. 167.

೨೩. *ಅದೇ,* No. 146.

೨೪. *ಅದೇ,* No. 213; *ARIE,* 1958-59, No. B 706.

೨೫. *ಅದೇ,* No. 184.

೨೬. *EIM,* 1935-36, p. 15, pl. ix (a); *ARIE,* 1984-85, No. C 148.

೨೭. *EIM,* 1935-36, p. 16, pl. ix (b); *ARIE,* 1959-60, No. D 173.

೨೮. *EIM,* 1935-36, pp. 16-17, Pl. x(a); *ARIE,* 1959-60, No. D 172.

೨೯. *EIM,* 1935-36, p. 17, pl. x (b); *ARIE,* 1984-85, No. C 152.

೩೦. *EIM,* 1935-36, p. 17, pl. x (c); *ARIE,* 1984-85, No. C 150.

೩೧. *EIM,* 1935-36, p. 18, pl. xi (a); *ARIE,* 1984-85, No. C 149

೩೨. ARIE,1957-58, No. B 367-369; 1958-59, No. B 707; Patil Channabasappa S. and Vonoda C. Patil, *ಪೂರ್ವೋಕ್ತ,* Nos. 126, 133-137, 139-142, 149,152-159,161-163,165-166, 169-182, 185-191, 214.

೩೩. *EIM,* 1935-36, pp.18-19, pl. xi (b); Patil Channabasappa S. and Vonoda C. Patil, *ಪೂರ್ವೋಕ್ತ,* No. 193.

೩೪. *ARIE,* 1958-59, No. D 126.

೩೫. *ಅದೇ,* 1958-59, No. 708-709.

೩೬. *Annual Report of His Exalted Highness the Nizam's Dominion for the year 1935-36,* Hyderabad, pp. 25-27; Patil Channabasappa S.,1996, "Mudugal Fort and its Bearing on the Defence System at Vijayanagara", D.V. Devaraj and Channabasappa S. Patil (Eds.), *Vijayanagara : Progress of Research 1988-91*, pp. 197-209; ಪಾಟೀಲ ಚನ್ನಬಸಪ್ಪ ಎಸ್. "ಮುದುಗಲ್ಲು ಕೋಟೆ" *ದಿಕ್ಸೂಚಿ ಮಾಸಪತ್ರಿಕೆ*, ಸೆಪ್ಟೆಂಬರ್ ೧೯೯೩ ಪು. ೨೬, ೨೭, ೧೯೯೯ *ಕರ್ನಾಟಕ ಕೋಟೆಗಳು*, ಸಂ.೧, ಪು. ೧೦೫-೧೧೩; ಪಾಟೀಲ್ ಸುಜಾತಾ, ೧೯೯೯ "ಮುದುಗಲ್ಲು ಕೋಟೆ," ಎಂ.ವಿ. ಕೃಷ್ಣಪ್ಪ ಮತ್ತು ಚನ್ನಬಸಪ್ಪ ಎಸ್. ಪಾಟೀಲ (ಸಂ), *ವಿಜಯನಗರ ಅಧ್ಯಯನ,* ಸಂ.೪, ಪು. ೫೯-೬೩.

೩೭. *EIM,*1935-36, p. 15. pl ix (a); *ARIE*, 1984-85, No.C 148.

೩೮. *ARIE,* 1985-86, No. B 97.

೩೯. Patil Channabasappa S. and Vinoda C. Patil, *ಪೂರ್ವೋಕ್ತ,* No. 119.

೪೦. *ಅದೇ,* No.122; *ARIE*, No. B 367.

೪೧. *EIM,* 1935-36, p. 16-17, pl. x (a); *ARIE*, 1959-60, No. D 172.

೪೨. Patil Channabasappa S. and Vinoda C. Patil, *ಪೂರ್ವೋಕ್ತ,* Nos. 121-122.

೪೩. *ಅದೇ,* No. 145.

೪೪. *ಅದೇ,* No. 144.

೪೫. *ಅದೇ,* No. 143.

೪೬. *ಅದೇ,* No. 146.

೪೭. *ಅದೇ,* No. 148.

೪೮. *ಅದೇ,* No. 149.

೪೯. *ಅದೇ,* No. 202; *EIM,* 1935-36, p. 18, pl. xi (a); *ARIE,* 1984-85, No. C 149.

೫೦. *ಅದೇ,* No. 164.

೫೧. *ಅದೇ,* No. 167.

೫೨, *ಅದೇ,* Nos. 183-184.

೫೩. *ಅದೇ,* No. 118; *ARIE,* No. B 361.

೫೪. *ಅದೇ,* No. 117; *ARIE,* 1957-58, No.B 360.

೫೫. *ಅದೇ,* Nos. 133-134; *ARIE,* 1957-58, No. B 368.

೫೬. *ಅದೇ,* Nos. 135-137; *ARIE,* 1957-58, No. B 369.

೫೭. *ಅದೇ,* Nos. 144, 148, 177.

೫೮. *ಅದೇ,* Nos. 139, 141-143, 147, 153, 159, 165, 170-171, 185, 188, 191.

೫೯. ಇಂತಹ ನಿಟು ಅಥವಾ ತೆನೆಗಳನ್ನು ಐಹೊಳೆ ಮತ್ತು ಕುಮ್ಮಟದುರ್ಗ ಕೋಟೆಗಳಲ್ಲಿ ಮತ್ತು ಹಾನಗಲ್ಲಿನಲ್ಲಿರುವ ವೀರಗಲ್ಲಿನ ಕೋಟೆಯ ಶಿಲ್ಪದಲ್ಲಿ ನೋಡಬಹುದು. ನೋಡಿ Joshi S.K. 1985, *Defence Architecture in Early Karnataka,* pl. 18-19.

೬೦. Patil Channabasappa S. and Vinoda C. Patil, *ಪೂರ್ವೋಕ್ತ,* No. 193.

೬೧. *ಅದೇ,* No. 204; *EIM,* 1935-36, pp. 18-19, pl. xi (b).

೬೨. *ಅದೇ,* No. 209; *ARIE,* 1957-58, No. B 364.

೬೩. *ಅದೇ,* No. 208; *ARIE,* 1957-58, No. B 363.

೬೪. *ಅದೇ,* No. 192; *ARIE,* 1957-58, No. B 366.

೬೫. *ಅದೇ,* No. 194; *ARIE;* 1953-54, No. B 253; *HAS*, 18, No.17; *APGAS*, No. Raichur Dist. 25.

೬೬. *ಅದೇ,* No. 197; *EIM,* 1935-36, p. 16, pl. ix (b); *ARIE*, 1959-60, No. D 173.

೬೭. *ಅದೇ,* Nos. 133-137.

೬೮. *ಅದೇ,* Nos. 144, 148,177.

೬೯. *ಅದೇ,* No. 117.

೭೦. *ಅದೇ,* No. 118.

೭೧. *ಅದೇ,* Nos. 120.-121, 145-146, 213.

೭೨. *ಅದೇ,* No. 183.

೭೩. *ಅದೇ,* Nos. 195, 205-206.

೭೪. *ಅದೇ,* Nos. 122, 126, 140, 149, 156, 162-164, 166, 172, 176, 179, 181-182, 187, 189, 190, 196, 214.

೭೫. ಪಾಟೀಲ ಚನ್ನಬಸಪ್ಪ ಎಸ್., ೧೯೯೯, *ಪೂರ್ವೋಕ್ತ,* ಪು. ೧೧೨.

# ೧೮. ಕಲಮಂಗಿ

ಕಲಮಂಗಿ ಸಿಂಧನೂರು ತಾಲೂಕಿನಲ್ಲಿ ಸಿಂಧನೂರಿನಿಂದ ಪಶ್ಚಿಮಕ್ಕೆ ೨೪ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೫° ೪೪' ಉತ್ತರ ಮತ್ತು ರೇಖಾಂಶ ೭೬° ೨೮' ಪೂರ್ವದಲ್ಲಿರುವ ಒಂದು ಚಿಕ್ಕ ಗ್ರಾಮ. ಇಲ್ಲಿ ಒಂದು ಕೋಟೆ ಮತ್ತು ಕೆಲವು ದೇವಾಲಯಗಳಿವೆ.

ಇಲ್ಲಿಯ ಕೋಟೆ ಊರ ಸುತ್ತಲು ಇದ್ದು, ಬೆಟ್ಟದ ಮೇಲೂ ಹರಡಿದೆ. ಇದರಲ್ಲಿ ಎರಡು ಬಾಗಿಲುಗಳು ಮತ್ತು ಎರಡು ಕೊತ್ತಳಗಳು ಇವೆ. ಕೋಟೆಯನ್ನು ಚಿಕ್ಕ ಕಲ್ಲುಗಳಿಂದ ಗಾರೆಯನ್ನು ಬಳಸದೆ ಕಟ್ಟಿದೆ. ಕೋಟೆಯ ಮುಖ್ಯ ಬಾಗಿಲು ಉತ್ತರಾಭಿಮುಖವಾಗಿದೆ. ಕಮಾನಿನಾಕಾರದ ಬಾಗಿಲನ್ನು ಇತ್ತೀಚೆಗೆ ದುರಸ್ತಿ ಮಾಡಿದೆ. ಬಾಗಿಲಿಗೆ ಚೌಕಟ್ಟಿಲ್ಲ. ಪ್ರವೇಶದ ಪಕ್ಕದಲ್ಲಿ ಕಟ್ಟೆಗಳಿವೆ. ಬಾಗಿಲ ಒಳಭಾಗದ ಗೋಡೆಯಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಬಾಗಿಲನ್ನು ದಾಟಿದ ಮೇಲೆ ಮುಂದಿನ ಬಲಭಾಗದ ಕಟ್ಟೆಯ ಮೇಲೆ ಮಲ್ಲಿಕಾರ್ಜುನ ದೇವಾಲಯವಿದೆ. ದೇವಾಲಯದ ಮುಂದೆ ನಾಗರ ಕಲ್ಲುಗಳಿವೆ. ಮುಖ್ಯ ಬಾಗಿಲನ್ನು ದಾಟಿ ಮುಂದೆ ಹೋದಾಗ ಉತ್ತರಾಭಿಮುಖವಾಗಿರುವ ಮತ್ತೊಂದು ಬಾಗಿಲಿದೆ. ಇದನ್ನು ಸಣ್ಣಗಸೆ ಎಂದು ಕರೆಯುತ್ತಾರೆ. ಕಮಾನಿನಾಕಾರದಲ್ಲಿರುವ ಈ ಬಾಗಿಲಿಗೆ ಚೌಕಟ್ಟಿಲ್ಲ (ಚಿತ್ರ ೧೫೭). ಕೋಟೆ ಗೋಡೆಯಲ್ಲಿ ದಕ್ಷಿಣಕ್ಕೆ ಒಂದು ಮತ್ತು ಪಶ್ಚಿಮಕ್ಕೆ ಮತ್ತೊಂದು ಕೊತ್ತಳಗಳಿವೆ. ವೃತ್ತಾಕಾರದ ಕೊತ್ತಳಗಳಲ್ಲಿ ಉದ್ದವಾದ ಬಂದೂಕು ಸಂದಿಗಳಿವೆ (ಚಿತ್ರ ೧೫೮).

ಈ ಕೋಟೆಯಲ್ಲಿ ಬಸವಣ್ಣ, ರಾಮಲಿಂಗೇಶ್ವರ, ಕೋಗಿಲೆ ಬೆನಕಪ್ಪ ಮತ್ತು ಆಂಜನೇಯ ದೇವಾಲಯಗಳಿವೆ. ಸಣ್ಣ ಅಗಸೆಯ ಹತ್ತಿರವಿರುವ ಬಸವಣ್ಣ ದೇವಾಲಯ ಹತ್ತು-ಹನ್ನೊಂದನೇ ಶತಮಾನಗಳದ್ದು. ದಪ್ಪ ಚೌಕಾಕಾರದ ಕಂಬಗಳ ಈ ದೇವಾಲಯದಲ್ಲಿ ಸಪ್ತಮಾತ್ರಿಕೆಯರ ಶಿಲ್ಪವಿದೆ. ಶಿಥಿಲಾವಸ್ಥೆಯಲ್ಲಿರುವ ರಾಮಲಿಂಗೇಶ್ವರ ದೇವಾಲಯ ಹನ್ನೊಂದು-ಹನ್ನೆರಡನೇ ಶತಮಾನಗಳದ್ದು. ಕೋಗಿಲೆ ಬೆನಕನ ದೇವಾಲಯ ಇತ್ತೀಚಿನದು. ಆದರೆ ಇದರ ಬಾಗಿಲು ಹತ್ತನೇ ಶತಮಾನದ್ದು.

ಚಿಕ್ಕ ಕಲ್ಲುಗಳಿಂದ ಕಟ್ಟಿದ ಈ ಕೋಟೆಯ ಕಾಲ ಹತ್ತೊಂಬತ್ತನೇ ಶತಮಾನದ ಕೊನೆ ಭಾಗ.



೧೫೭. ಕಲಮಂಗಿ, ಬಾಗಿಲು



೧೫೮. ಕಲಮಂಗಿ, ದಕ್ಷಿಣ ದಿಕ್ಕಿನ ಬುರುಜು

# ೧೯. ರೌಡಕುಂದ

ರೌಡಕುಂದ ಸಿಂಧನೂರು ತಾಲೂಕಿನಲ್ಲಿ ಸಿಂಧನೂರಿನಿಂದ ದಕ್ಷಿಣಕ್ಕೆ ೧೭ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೫° ೪೦' ಉತ್ತರ ಮತ್ತು ರೇಖಾಂಶ ೭೬° ೪೪' ಪೂರ್ವಕ್ಕಿದೆ. ಈ ಚಿಕ್ಕ ಗ್ರಾಮದಲ್ಲಿ ಕೋಟೆ, ದೇವಾಲಯಗಳು ಶಾಸನಗಳು ಇವೆ.

ನೆಲಮಟ್ಟದಲ್ಲಿರುವ ಗ್ರಾಮದ ಪಕ್ಕದಲ್ಲಿ ಎರಡು ಬೆಟ್ಟಗಳಿವೆ. ಈ ಪರಿಸರದಲ್ಲಿ ನವಶಿಲಾಯುಗದ ಅವಶೇಷಗಳು ದೊರೆತಿವೆ. ಉತ್ತರ ದಿಕ್ಕಿಗಿರುವ ಬೆಟ್ಟದ ಮೇಲೆ ಕೋಟೆಯಿದೆ ಮತ್ತು ಈಶಾನ್ಯ ದಿಕ್ಕಿಗಿರುವ ಬೆಟ್ಟದ ಮೇಲೆ ರಂಗನಾಥ ದೇವಾಲಯವಿದೆ. ರಂಗನಾಥ ದೇವಾಲಯದಲ್ಲಿ ಕಲ್ಯಾಣ ಚಾಲುಕ್ಯ ಅರಸ ಒಂದನೇ ಸೋಮೇಶ್ವರನ ಕ್ರಿ.ಶ. ೧೦೫೪ರ ಶಾಸನವಿದೆ. ಈಶಾಸನದಲ್ಲಿ ಊರಿನ ಹೆಸರು ರೇವಡಕುಂದ ಎಂದು ಉಲ್ಲೇಖಗೊಂಡಿದೆ. ಮಹಾಮಂಡಳೇಶ್ವರ ಅಮ್ಮಣ ದೇವನ ಆಡಳಿತಕ್ಕೆ ಒಳಪಟ್ಟ ನಿಟ್ಟರವೆ-೭೦ ರಲ್ಲಿ ಈ ಗ್ರಾಮವಿತ್ತು. ಸಿಂದಕುಲದ ಮಹಾಸಾಮಂತ ಕಣ್ಣರಸನು ಕರ್ಣೇಶ್ವರ ದೇವರಿಗೆ ದಿಗ್ಗಿಗೆರೆಯ ಕೆಳಗಿನ ಭೂಮಿಯನ್ನು ದಾನವಾಗಿ ನೀಡಿದ.[೧]

ಬೆಟ್ಟದ ತುದಿಯಲ್ಲಿಯ ಕಿರಿದಾದ ಪ್ರದೇಶದಲ್ಲಿ ಚಿಕ್ಕ ಕೋಟೆಯಿದೆ. ಬೆಟ್ಟದ ಅಂಚಿಗೆ ಹೊಂದಿಕೊಳ್ಳುವಂತೆ ಕಟ್ಟಿರುವುದರಿಂದ ಕೋಟೆಗೆ ಯಾವುದೆ ನಿಯಮಿತವಾದ ಆಕಾರವಿಲ್ಲ. ಕೋಟೆಯನ್ನುದಪ್ಪ ಚೌಕಾಕಾರದ ಕಲ್ಲುಗಳಿಂದ ಗಾರೆಯನ್ನು ಬಳಸದೆ ಕಟ್ಟಿದೆ. ಕೋಟೆ ಗೋಡೆಯ ಮೇಲ್ಭಾಗದಲ್ಲಿ ಬಂದೂಕು ಕಿಂಡಿಗಳಿವೆ (ಚಿತ್ರ ೧೫೯). ಕೋಟೆಯಲ್ಲಿ ಒಂದು ಚೌಕಾಕಾರದ ಮತ್ತು ಒಂದು ವೃತ್ತಾಕಾರದ ಕೊತ್ತಳಗಳಿವೆ. ಕೋಟೆಗೆ ಬಾಗಿಲ ಕಟ್ಟಡವಿಲ್ಲ. ಬಂಡೆಗಳ ಮಧ್ಯದಲ್ಲಿ ಒಳಗೆ ಹೋಗಲು ದಾರಿಯಿದೆ.

ಕೋಟೆಯ ಒಳಗೆ ನೈರುತ್ಯ ಭಾಗದಲ್ಲಿ ವೃತ್ತಾಕಾರದ ದೊಡ್ಡ ಕಾವಲು ಗೋಪುರವಿದೆ (ಚಿತ್ರ ೧೬೦). ಪಶ್ಚಿಮಾಭಿಮುಖವಾಗಿರುವ ಇದರ ಬಾಗಿಲಿನ ಸರಳವಾದ ಚೌಕಟ್ಟಿನ ಮೇಲೆ ಕುರುಡು ಕಮಾನು ಇದೆ. ಗೋಡೆಯ ಮೇಲ್ಭಾಗದಲ್ಲಿ ಬಂದೂಕು ಕಿಂಡಿಗಳು ಮತ್ತು ಕೈಪಿಡಿ ಗೋಡೆಯಲ್ಲಿ ತೆನೆಗಳು ಇವೆ. ತೆನೆಗಳಿಗೆ ಗಾರೆ ಮಾಡಿದೆ. ಬಾಗಿಲನ್ನು ಪ್ರವೇಶಿಸಿ ಮೆಟ್ಟಿಲುಗಳನ್ನು ಹತ್ತಿ, ಬಲಕ್ಕೆ ತಿರುಗಿ ಪುನಃ ಮೆಟ್ಟಿಲುಗಳನ್ನು ಹತ್ತಿದಾಗ ಗೋಪುರದ ಒಳಭಾಗವನ್ನು ಸೇರುತ್ತೇವೆ. ಗೋಪುರದ ಒಳಭಾಗ ವೃತ್ತಾಕಾರದಲ್ಲಿದೆ. ಇದರ ಮಧ್ಯದಲ್ಲಿ ನಾಲ್ಕು ಕಂಬಗಳು ಮತ್ತು ಗೋಡೆಯ ಬದಿಯಲ್ಲಿ ಎಂಟು ಅರೆಗಂಬಗಳಿವೆ (ಚಿತ್ರ ೧೬೧).



೧೫೯. ರೌಡಕುಂದ, ಕೋಟೆಯ ನೈರುತ್ಯ ಭಾಗ



೧೬೦. ರೌಡಕುಂದ, ಕಾವಲು ಗೋಪುರ



೧೬೧. ರೌಡಕುಂದ, ಕಾವಲು ಗೋಪುರದ ಒಳಬಾಗಿಲು



೧೬೨. ರೌಡಕುಂದ, ಕಾವಲು ಗೋಪುರ

ಕಂಬಗಳಲ್ಲಿ ಮೂರು ಚೌಕಾಕಾರದ ಮತ್ತು ಎರಡು ಅಷ್ಟಭುಜಾಕೃತಿಯ ಭಾಗಗಳಿವೆ. ಬೋದಿಗೆಗಳ ಸುರುಳಿಯಾಕಾರದಲ್ಲಿವೆ. ಗೋಪುರದ ಪೂರ್ವಭಾಗದ ಗೋಡೆಯಲ್ಲಿ ಕಮಾನಿನಾಕಾರದ ದೊಡ್ಡ ಗೂಡು ಇದೆ. ಇದರ ಮಧ್ಯದಲ್ಲಿ ಆಯತಾಕಾರದ ಕಿಟಕಿಯಿದೆ (ಚಿತ್ರ ೧೬೧). ಉತ್ತರ ಮತ್ತು ದಕ್ಷಿಣ ಭಾಗದ ಗೋಡೆಗಳಲ್ಲಿ ಆಯತಾಕಾರದ ಕಿಟಕಿಗಳಿವೆ. ಕೋಟೆಯ ಒಳಗೆ ಬೇರೆ ಅವಶೇಷಗಳಿಲ್ಲ. ದಪ್ಪ ಕಲ್ಲುಗಳಿಂದ ಕಟ್ಟಿದ ಈ ಕೋಟೆಯ ಕಾಲ ಹದಿನಾರು-ಹದಿನೇಳನೇ ಶತಮಾನಗಳು.

**ಟಿಪ್ಪಣಿ**

೧. *ARIE*, 1985-86, No. B 104.

# ೨೦. ಮುಕ್ಕುಂದ

ಮುಕ್ಕುಂದ ಸಿಂಧನೂರು ತಾಲೂಕಿನಲ್ಲಿ ಸಿಂಧನೂರಿನಿಂದ ದಕ್ಷಿಣಕ್ಕೆ ೨೦ ಕಿ.ಮೀ. ದೂರದಲ್ಲಿ, ಅಕ್ಷಾಂಶ ೧೫° ೩೫' ಉತ್ತರ ಮತ್ತು ರೇಖಾಂಶ ೭೬° ೪೨' ಪೂರ್ವದಲ್ಲಿರುವ ಚಿಕ್ಕ ಗ್ರಾಮ. ಐತಿಹಾಸಿಕ ಪ್ರಸಿದ್ಧವಾದ ಈ ಊರಿನಲ್ಲಿ ಕೋಟೆ, ದೇವಾಲಯ ಮತ್ತು ಶಾಸನಗಳಿವೆ.

## ಐತಿಹಾಸಿಕ ಹಿನ್ನೆಲೆ

ಶಾಸನಗಳಲ್ಲಿ ಊರಿನ ಹೆಸರು ಮುಕ್ಕುಂದ ಮತ್ತು ಮುಕ್ಕುಂದೆ ಎಂದು ಉಲ್ಲೇಖಗೊಂಡಿದೆ. ಇದು ವಿದ್ಯಾಕೇಂದ್ರವಾದ ಅಗ್ರಹಾರವಾಗಿದ್ದು, ಎಡದೊರೆನಾಡಿನ ಉಪವಿಭಾಗವಾದ ನಿಟ್ಟರವೆ-೭೦ರಲ್ಲಿತ್ತು. ಕಲ್ಯಾಣ ಚಾಲುಕ್ಯ ಅರಸ ಒಂದನೇ ಸೋಮೇಶ್ವರ ರಾಣಿ ತ್ರೈಲೋಕ್ಯ ಮಹಾದೇವಿ ಈ ಊರನ್ನು ಆಳುತ್ತಿದ್ದು, ಕ್ರಿ.ಶ. ೧೦೬೬ರಲ್ಲಿ ಕಪಿಲೇಶ್ವರ ದೇವರಿಗೆ ಭೂಮಿಯನ್ನು ದಾನವಾಗಿ ನೀಡಿದಳು.[೧] ಚಾಲುಕ್ಯ ಚಕ್ರವರ್ತಿ ಆರನೇ ವಿಕ್ರಮಾದಿತ್ಯನು ಕ್ರಿ.ಶ.೧೦೮೮ರಲ್ಲಿ ಉತ್ತರಾಯಣ ಸಂಕ್ರಾಂತಿಯ ಸಂದರ್ಭದಲ್ಲಿ ಗೌತಮಿ, ಗಂಗಾ ಮತ್ತು ಗೋದಾವರಿ ನದಿಗಳ ಸಂಗಮದಲ್ಲಿ ಹಿರಣ್ಯಗರ್ಭ ಮುಂತಾದ ದಾನಗಳನ್ನು ಮಾಡುತ್ತಿದ್ದಾಗ, ಸಿಂದ ಕುಲದ ಬಾಚರಸನು ಮುಕ್ಕುಂದ ಅಗ್ರಹಾರದ ಮಹಾಜನರಿಗೆ ಹಣವನ್ನು ದಾನವಾಗಿ ನೀಡಿದನು.[೨] ಅದೇ ಬಾಚರಸನು ಕ್ರಿ.ಶ. ೧೧೯೭ರಲ್ಲಿ ಸೋಮಲಿಂಗೇಶ್ವರ ದೇವರಿಗೆ ಭೂದಾನ ಮಾಡಿದನು.[೩] ಕ್ರಿ.ಶ. ೧೧೩೪ ರಲ್ಲಿ ಇದೇ ಬಾಚರಸನು ಕೇಶವ ದೇವರಿಗೆ ಭೂದಾನವನ್ನು ಮಾಡಿದನು.[೪]

## ಕೋಟೆ

ಊರ ಮಧ್ಯದಲ್ಲಿರುವ ಬೆಟ್ಟದ ಮೇಲೆ ಚಿಕ್ಕ ಕೋಟೆಯಿದೆ. ಹಿಂದಿನ ಕಾಲದಲ್ಲಿ ಊರಿನ ಸುತ್ತಲು ಕೋಟೆಯಿತ್ತು. ಈಗ ಅದರ ಮೂರು ಬಾಗಿಲುಗಳು ಮಾತ್ರ ಉಳಿದಿವೆ.ಇವುಗಳಲ್ಲಿ ಉತ್ತರಕ್ಕಿರುವುದು ಗಂಗಮ್ಮನ ಅಗಸೆ, ಪೂರ್ವಕ್ಕಿರುವುದು ಕೆಳಗಡೆ ಅಗಸೆ ಮತ್ತು ಪಶ್ಚಿಮಕ್ಕಿರುವುದು ವೀರಭದ್ರ ಅಗಸೆ. ವೀರಭದ್ರ ಅಗಸೆಯ ಹತ್ತಿರ ಸೋಮೇಶ್ವರ, ಮುರಾರಿ ಮತ್ತು ವೀರಭದ್ರ ದೇವಾಲಯಗಳಿವೆ. ಸೋಮೇಶ್ವರ ಮತ್ತು ಮುರಾರಿ ದೇವಾಲಯಗಳು ಹನ್ನೊಂದನೇ ಶತಮಾನದವು. ಸೋಮೇಶ್ವರ ದೇವಾಲಯದ ಗೋಡೆಯ ಮೇಲೆ ದೊಡ್ಡ ಮತ್ತು ಚಿಕ್ಕ ಶಿಲ್ಪಗಳಿವೆ.







೧೬೩. ಮುಕ್ಕುಂದ ಕೋಟೆ: ೧. ಗಂಗಮ್ಮನ ಅಗಸಿ, ೨. ಕೆಳಗಡೆ ಅಗಸಿ, ೩. ಕಾವಲುಗಾರರ ಮಂಟಪ, ೪. ಮೇಲಗಡೆ ಅಗಸಿ, ೫. ವೀದಭದ್ರಗುಡಿ ಅಗಸಿ, ೬. ಸೋಮನಾಥ ದೇವಾಲಯ, ೭. ಮುರಾರಿ ದೇವಾಲಯ



೧೬೪. ಮುಕ್ಕುಂದ, ಕೋಟೆ, ಈಶಾನ್ಯದಿಂದ



೧೬೫. ಮುಕ್ಕುಂದ, ಕೋಟೆಯ ದಕ್ಷಿಣಭಾಗ

ಬೆಟ್ಟದ ಮೇಲಿನ ಕೋಟೆ ಸುಮಾರಾಗಿ ಆಯತಾಕಾರದಲ್ಲಿದೆ. ಆದರೆ ಇದರ ಪೂರ್ವಭಾಗ ಗಜಪೃಷ್ಠಾಕಾರ ದಲ್ಲಿದೆ (ಚಿತ್ರ ೧೬೩). ದಪ್ಪ ಚೌಕಾಕಾರದ ಕಲ್ಲುಗಳಿಂದ ಗಾರೆಯನ್ನು ಬಳಸದೆ ಕಟ್ಟಿದ ಕೋಟೆಯ ಕೈಪಿಡಿ ಗೋಡೆಯಲ್ಲಿ ತೆನೆಗಳಿವೆ. ಕೋಟೆಯ ಮೇಲ್ಭಾಗದಲ್ಲಿ ಅಲ್ಲಲ್ಲಿ ಚೌಕಾಕಾರದ ದೊಡ್ಡ ಕಿಂಡಿಗಳಿವೆ. ಉತ್ತರ ದಿಕ್ಕಿನಲ್ಲಿ ಬಂಡೆಗಳ ಮಧ್ಯದಲ್ಲಿ ಕೋಟೆಗೆ ಹತ್ತಲು ದಾರಿಯಿದೆ (ಚಿತ್ರ ೧೬೪). ಕೋಟೆಯೊಳಗೆ ಪಶ್ಚಿಮ ಮತ್ತು ಆಗ್ನೇಯ ಭಾಗಗಳಲ್ಲಿ ಎರಡು ದೊಡ್ಡ ಮಂಟಪಗಳಿವೆ. ಮಂಟಪಗಳನ್ನು ಸರಳವಾದ ಕಂಬ, ತೊಲೆ ಮತ್ತು ಚಪ್ಪಡಿಗಳಿಂದ ಕಟ್ಟಿದೆ (ಚಿತ್ರ ೧೬೫).

### ಟಿಪ್ಪಣಿಗಳು

೧. *ARIE*, 1985-86, No. B 101.

೨. *ಅದೇ*, No. B 102.

೩. *ಅದೇ*, 1980-81, No. B 168.

೪. *ಅದೇ*, No. B 169.

ಅಧ್ಯಾಯ ಐದು

# ಕೊಪ್ಪಳ ಜಿಲ್ಲೆಯ ಕೋಟೆಗಳು

## ೧. ಕಾಟಾಪುರ

ಕಾಟಾಪುರ ಕುಷ್ಟಗಿ ತಾಲೂಕಿನಲ್ಲಿ ಕುಷ್ಟಗಿಯಿಂದ ವಾಯವ್ಯಕ್ಕೆ ೬೫ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೫° ೫೮' ಉತ್ತರ ಮತ್ತು ರೇಖಾಂಶ ೭೬° ೧ ಪೂರ್ವಕ್ಕಿದೆ. ಈ ಚಿಕ್ಕ ಗ್ರಾಮದಲ್ಲಿ ಕೋಟೆ, ದೇವಾಲಯ, ಶಿಲ್ಪ, ಬಾವಿ ಮುಂತಾದವು ಇವೆ.

ಕಾಟಾಪುರ ಸಂಸ್ಥಾನವು ಆದಿಲ್ ಶಾಹಿ ಆಡಳಿತಕ್ಕೆ ಒಳಪಟ್ಟಿತ್ತು. ಇದರಲ್ಲಿ ೩೩೦ ಹಳ್ಳಿಗಳಿದ್ದವು. ತಿಮ್ಮಪ್ಪಯ್ಯನು ಈ ಸಂಸ್ಥಾನವನ್ನು ಪ್ರವರ್ಧಮಾನಕ್ಕೆ ತಂದನು. ಮೊದಲು ಇಲ್ಲಿ ಜಂಗಮರು ಆಳ್ವಿಕೆ ನಡೆಸಿದರು. ನಂತರ ಬ್ರಾಹ್ಮಣರು ತಮ್ಮ ಹೆಸರಿನ ಹಿಂದೆ 'ಅಯ್ಯ' ಪದವನ್ನು ಸೇರಿಸಿಕೊಂಡು ಆಳ್ವಿಕೆಯನ್ನು ಮುಂದುವರೆಸಿದರು. ಇಲ್ಲಿ ಕೊಸೇರಿ ತಿಮ್ಮಪ್ಪಯ್ಯ, ಮಲಕಪ್ಪಯ್ಯ, ಪುಟ್ಟಪ್ಪಯ್ಯ, ಹನುಮಪ್ಪಯ್ಯ, ರಂಗಪ್ಪಯ್ಯ ಮುಂತಾದವರು ೧೯೪೮ರ ವರೆಗೆ ಆಳಿದರು.

ಮೊದಲು ಊರ ಸುತ್ತಲು ಕೋಟೆಯಿತ್ತು. ಅದು ಈಗ ಬಿದ್ದು ಹೋಗಿದೆ. ಈಗ ಸಂಸ್ಥಾನವನ್ನು ಆಳಿದ ದೇಸಾಯಿಯವರ ಮನೆಯ ಸುತ್ತಲು ಆಯತಾಕಾರದ ಚಿಕ್ಕ ಕೋಟೆಯಿದೆ. ಕೋಟೆಯ ಸುತ್ತಲು ಕೋಟೆಗೆ ಸಮಾನಾಂತರದಲ್ಲಿ ಮಣ್ಣಿನ ಕೋಟೆಯಿದೆ. ಇದು ಒಡ್ಡಿನಂತೆ ಇದ್ದು, ಬದಿಗಳಲ್ಲಿ ಕಲ್ಲುಗಳಿಲ್ಲ. ಇದೇ ರೀತಿಯ ಮಣ್ಣಿನ ಕೋಟೆ ಉತ್ತರ ಭಾಗದಲ್ಲಿ ಮುಂದೆ ಚಾಚಿದೆ (ಚಿತ್ರ ೧೬೬). ಇಲ್ಲಿ ಒಂದು ಬಾಗಿಲಿದೆ. ಶಿಥಿಲವಾಗಿರುವ ಬಾಗಿಲಿಗೆ ಚೌಕಟ್ಟು, ಛಾವಣಿಗಳಿಲ್ಲ.

ಆಯತಾಕಾರದ ಕೋಟೆಗೆ ಉತ್ತರ ದಿಕ್ಕಿನಲ್ಲಿ ಬಾಗಿಲು ಮತ್ತು ನಾಲ್ಕು ಮೂಲೆಗಳಲ್ಲಿ ವೃತ್ತಾಕಾರದ ಕೊತ್ತಳಗಳಿವೆ. ಕೋಟೆಗೋಡೆಯ ಕೆಲಭಾಗ, ವಾಯುವ್ಯ ಮತ್ತು ನೈರುತ್ಯ ಕೊತ್ತಳಗಳ ಕೆಲಭಾಗ ಶಿಥಿಲವಾಗಿವೆ. ಕೋಟೆ ಗೋಡೆಯನ್ನು ಅನಿಯಮಿತಾಕಾರದ ಚಿಕ್ಕ ಕಲ್ಲುಗಳಿಂದ ಕಟ್ಟಿದೆ. ಕೊತ್ತಳಗಳಲ್ಲಿ ನೆಲಮಟ್ಟದಿಂದ ಅರ್ಧ ಎತ್ತರದವರೆಗೆ ಬಂದೂಕು ಕಿಂಡಿಗಳಿವೆ. ಕೊತ್ತಳಗಳ ಒಳಗೆ ನೆಲಮಟ್ಟದಲ್ಲಿ ನಿಂತು ಬಂದೂಕು ಹಾರಿಸಲು ಈ ಕಿಂಡಿಗಳನ್ನು ಮಾಡಿದೆ (ಚಿತ್ರ ೧೬೭). ಕೊತ್ತಳಗಳಿಗೆ ಆಯತಾಕಾರದ ಚಿಕ್ಕ ಬಾಗಿಲುಗಳಿವೆ.




೧೬೬. ಕಾಟಾಪುರ ಕೋಟೆ: ೧. ಬಾಗಿಲು, ೨. ದ್ಯಾಮವ್ವನ ಗುಡಿ, ೩. ಮಹಾಮಾಯಿ ಗುಡಿ, ೪. ಈಶ್ವರ ದೇವಾಲಯ, ೫. ಕಟ್ಟಡ, ೬. ಬಾಗಿಲು, ೭. ಕಟ್ಟಡ, ೮. ಕಟ್ಟಣ, ೯. ಬಾವಿ



೧೬೭. ಕಾಟಾಪುರ, ದಕ್ಷಿಣ ಕೋಟೆ ಮತ್ತು ಆಗ್ನೇಯ ಬುರುಜು



೧೬೮. ಕಾಟಾಪುರ. ಕೋಟೆಯೊಳಗಿನ ಕಟ್ಟಡ

ಉತ್ತರ ದಿಕ್ಕಿಗಿರುವ ಬಾಗಿಲು ಶಿಥಿಲವಾಗಿರುವುದರಿಂದ ಚೌಕಟ್ಟು, ಛಾವಣಿ ಉಳಿದಿಲ್ಲ. ಕೋಟೆಯ ಒಳಗೆ ದೇಸಾಯಿಯ ಮನೆ, ದರ್ಬಾರ್ ಸಭಾಂಗಣದಂತಹ ಕಟ್ಟಡ ಮತ್ತು ಬಾವಿ ಇವೆ. ಕೋಟೆಯ ಮಧ್ಯದಲ್ಲಿ ಉತ್ತರಾಭಿಮುಖವಾಗಿರುವ ದರ್ಬಾರ್ ಸಭಾಂಗಣದಂತಹ ಕಟ್ಟಡದ ಮುಂಭಾಗದಲ್ಲಿ ಉಪಾನ, ಪದ್ಮ, ಕಂಠ ಮತ್ತು ಪದ್ಮ ಪಟ್ಟಿಕೆಗಳಿವೆ. ಸಭಾಂಗಣದ ಪಾರ್ಶ್ವಗಳಲ್ಲಿ ಮತ್ತು ಹಿಂಬದಿಯಲ್ಲಿ ಕೊಠಡಿಗಳಿವೆ. ಸಭಾಂಗಣದ ಹಿಂದಿನ ಅರ್ಧ ಭಾಗ ಸ್ವಲ್ಪ ಎತ್ತರದಲ್ಲಿದ್ದು, ಅದರ ಮುಂಚೆ ಪದ್ಮ, ಕಂಠ ಮತ್ತು ಪದ್ಮ ಪಟ್ಟಿಕೆಗಳಿವೆ. ಕಟ್ಟಡವು ಶಿಥಿಲವಾಗಿದೆ (ಚಿತ್ರ ೧೬೮). ಪಶ್ಚಿಮ ಗೋಡೆಯ ಮಧ್ಯ ಭಾಗಕ್ಕೆ ತಾಗಿದಂತೆ ಪೂರ್ವಾಭಿಮುಖವಾಗಿರುವ ದೊಡ್ಡ ಕಟ್ಟಡವಿದೆ. ಇದೇ ದೇಸಾಯಿಯ ಮನೆ. ಈಗ ಮನೆಯಲ್ಲಿ ಯಾರೂ ವಾಸವಾಗಿಲ್ಲ. ಇದರ ದಕ್ಷಿಣಕ್ಕೆ ಒಂದು ಬಾವಿಯಿದೆ. ಬಾವಿಗೆ ಪಶ್ಚಿಮ ದಿಕ್ಕಿನಲ್ಲಿ ಮೆಟ್ಟಿಲುಗಳಿವೆ.

ಕೋಟೆಯ ಹೊರಗೆ ಉತ್ತರಕ್ಕೆ ಮಣ್ಣಿನ ಕೋಟೆಯ ಒಳಮೈಗೆ ಒಂದು ಕಟ್ಟಡದ ಅವಶೇಷಗಳಿವೆ. ಕೋಟೆಯ ವಾಯವ್ಯಮೂಲೆಯ ಉತ್ತರಕ್ಕೆ ಈಶ್ವರ ದೇವಾಲಯವಿದೆ. ಪೂರ್ವಾಭಿಮುಖವಾಗಿರುವ ದೇವಾಲಯ ಸುಸ್ಥಿತಿಯಲ್ಲಿದೆ. ವಿವಿಧ ಪಟ್ಟಿಕೆಗಳ ಅಧಿಷ್ಠಾನದ ಮೇಲೆ ಸರಳ ರೇಖೆಯಲ್ಲಿರುವ ಗೋಡೆಯಿದೆ. ಗೋಡೆಯ ಮೇಲೆ ಹಂಸ, ಮೀನು, ಹಾವು, ಮಂಗ ಮತ್ತು ಆನೆ ಶಿಲ್ಪಗಳಿವೆ. ಗರ್ಭಗೃಹದ ಮೇಲ್ಕಟ್ಟಡ ಮೆಟ್ಟಿಲಿನಾಕಾರದಲ್ಲಿಯ ಕದಂಬ ನಾಗರ ಅಥವಾ ಕಳಿಂಗ ಶೈಲಿಯದು. ಇದರ ಮುಂದಿನ ಸುಕನಾಸಿಯ ದೊಡ್ಡ ಕೂಡಿನ ಮೇಲೆ ಕೀರ್ತಿಮುಖವಿದೆ. ಗರ್ಭಗೃಹದ ಬಾಗಿಲಿನ ಲಲಾಟದಲ್ಲಿ ಗಣೇಶನ ಶಿಲ್ಪವಿದೆ. ಸಭಾಮಂಟಪದಲ್ಲಿ ವೃತ್ತಾಕಾರದ ಕಂಬಗಳಿವೆ. ತೆರೆದ ಈ ಮಂಟಪದ ಸುತ್ತಲು ಕಕ್ಷಾಸನವಿದೆ. ಇದರ ಕಾಲ ಹನ್ನೆರಡನೇ ಶತಮಾನ. ಈ ದೇವಾಲಯದ ಉತ್ತರಕ್ಕೆ ದೇವಿ, ನಾಗ ಶಿಲ್ಪಗಳು ದುರ್ಗಾಮಾಯಿ ಮತ್ತು ದ್ಯಾಮವ್ವ ದೇವಾಲಯಗಳಿವೆ.

ಮಧ್ಯಮ ಮತ್ತು ಚಿಕ್ಕ ಗಾತ್ರದ ಕಲ್ಲುಗಳಿಂದ ಕಟ್ಟಿದ ಈ ಕೋಟೆಯ ಕಾಲ ಹದಿನೇಳು-ಹದಿನೆಂಟನೇ ಶತಮಾನಗಳು.

## ೨. ಹನಮಸಾಗರ

ಹನಮಸಾಗರ ಕುಷ್ಟಗಿ ತಾಲೂಕಿನಲ್ಲಿ ಕುಷ್ಟಗಿಯ ವಾಯವ್ಯಕ್ಕೆ ೨೦ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೫°೮' ಉತ್ತರ ಮತ್ತು ರೇಖಾಂಶ ೭೬°೪' ಪೂರ್ವದಲ್ಲಿದೆ. ಈ ಗ್ರಾಮದ ಉತ್ತರಕ್ಕೆ ಬೆಟ್ಟದ ಮೇಲೆ ಕೋಟೆ ಮತ್ತು ದೇವಾಲಯ ಇವೆ.

ಬೆಟ್ಟದ ಮೇಲಿನ ಕೋಟೆ ಎರಡು ಸುತ್ತಿನದು. ಆಯತಾಕಾರದ ಹೊರಸುತ್ತಿನಲ್ಲಿ ಉತ್ತರ ದಿಕ್ಕಿಗೆ ಎರಡು ಬಾಗಿಲುಗಳು ಮತ್ತು ದಕ್ಷಿಣ ದಿಕ್ಕಿಗೆ ಒಂದು ವೃತ್ತಾಕಾರದ ಕೊತ್ತಳ ಇವೆ (ಚಿತ್ರ ೧೬೯). ಹೊರಸುತ್ತಿನ ಗೋಡೆಯನ್ನು ನಶ್ಯ ಬಣ್ಣದ ಚಪ್ಪಟೆಯಾದ ಚಿಕ್ಕ ಕಲ್ಲುಗಳಿಂದ ಗಾರೆಯನ್ನು ಬಳಸದೆ ಕಟ್ಟಿದೆ. ಗೋಡೆಯಲ್ಲಿ ಆಯತಾಕಾರದ ಬಂದೂಕು ಕಿಂಡಿಗಳಿವೆ (ಚಿತ್ರ ೧೭೨). ಉತ್ತರ ದಿಕ್ಕಿನಲ್ಲಿರುವ ಎರಡು ಬಾಗಿಲುಗಳಲ್ಲಿ ದಕ್ಷಿಣ ಭಾಗದ ಬಾಗಿಲಿಗೆ ಚೌಕಟ್ಟಿದೆ (ಚಿತ್ರ ೧೭೧), ಮತ್ತೊಂದಕ್ಕೆ ಇಲ್ಲ. ಸುಸ್ಥಿಯಲ್ಲಿರುವ ಬಾಗಿಲಿಗೆ ಒಳ ಮತ್ತು ಹೊರಬದಿ, ಎರಡು ಕಡೆಗೂ ಸರಳವಾದ ಚೌಕಟ್ಟುಗಳಿದ್ದು, ಪ್ರವೇಶದ ಮೇಲೆ ಕಲ್ಲು ಚಪ್ಪಡಿಗಳ ಛಾವಣಿಯಿದೆ. ಪ್ರವೇಶದ ಪಾರ್ಶ್ವಗಳಲ್ಲಿ ಕಟ್ಟೆಗಳಿವೆ. ಪ್ರತಿ ಕಟ್ಟೆಯ ಮೇಲೆ ಒಂದು ಕಂಬದ ಎರಡು ಅಂಕಣಗಳಿವೆ (ಚಿತ್ರ ೧೭೦).

ಆಯತಾಕಾರದಲ್ಲಿರುವ ಒಳಕೋಟೆಯ ಪೂರ್ವಕ್ಕೆ ಒಂದು ಬಾಗಿಲು ಮತ್ತು ನಾಲ್ಕು ಮೂಲೆಗಳಲ್ಲಿ ವೃತ್ತಾಕಾರದ ಕೊತ್ತಳಗಳು ಇವೆ. ಒಳಕೋಟೆಯನ್ನು ಅನಿಯಮಿತಾಕಾರದ ಚಿಕ್ಕ ಕಲ್ಲುಗಳಿಂದ ಕಟ್ಟಿದೆ (ಚಿತ್ರ ೧೭೩). ಕೋಟೆಯ ಬಾಗಿಲಿಗೆ ಚೌಕಟ್ಟು ಅಥವಾ ಛಾವಣಿ ಇಲ್ಲ. ಕೋಟೆಯೊಳಗೆ ಒಂದು ಕಟ್ಟಡದ ಅವಶೇಷಗಳಿವೆ. ಒಳಕೋಟೆಯ ಹೊರಗೆ ಉತ್ತರಕ್ಕೆ ಒಂದು ವೃತ್ತಾಕಾರದ ಒಂಟಿ ಕೊತ್ತಳವಿದೆ (ಚಿತ್ರ ೧೭೪). ಆಯತಾಕಾರದ ಚಿಕ್ಕ ಕಲ್ಲುಗಳಿಂದ ಕಟ್ಟಿದ ಕೊತ್ತಳದ ಮಧ್ಯದಲ್ಲಿ ಆಯತಾಕಾರದ ಉದ್ದವಾದ ಬಂದೂಕು ಕಿಂಡಿಗಳು ಮತ್ತು ಮೇಲಿನ ಭಾಗದಲ್ಲಿ ಉದ್ದವಾದ ಮತ್ತು ಚಿಕ್ಕ ಕಿಂಡಿಗಳು ಇವೆ. ಕೊತ್ತಳದ ಉತ್ತರಕ್ಕೆ ವೆಂಕಟೇಶ್ವರ ದೇವಾಲಯವಿದೆ.

ಚಿಕ್ಕ ಕಲ್ಲುಗಳಿಂದ ಕಟ್ಟಿದ ಈ ಕೋಟೆಯ ನಿರ್ಮಾಣ ಹದಿನೇಳು-ಹದಿನೆಂಟನೇ ಶತಮಾನಗಳಲ್ಲಿ ಆಗಿದೆ.




೧೬೯. ಹನಮಸಾಗರ ಕೋಟೆ: ೧. ಬಾಗಿಲು, ೨. ಲಕ್ಷ್ಮೀವೆಂಕಟೇಶ್ವರ ಗುಡಿ, ೩. ಬಾಗಿಲು, ೪. ಕಟ್ಟಡ







೧೭೦. ಹನಮಸಾಗರ, ಹೊರಕೋಟೆ ಬಾಗಿಲು



೧೭೩. ಹನಮಸಾಗರ, ಒಳಕೋಟೆ



೧೭೪. ಹನಮಸಾಗರ, ಒಳಕೋಟೆಯ ಬುರುಜು

## ೩. ಚಳಗೇರಿ



ಚಳಗೇರಿ ಕುಷ್ಟಗಿ ತಾಲೂಕಿನಲ್ಲಿ ಕುಷ್ಟಗಿಯಿಂದ ವಾಯವ್ಯಕ್ಕೆ ೧೨ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೫° ೪೮' ಉತ್ತರ ಮತ್ತು ರೇಖಾಂಶ ೭೬°೬' ಪೂರ್ವದಲ್ಲಿದೆ. ಇಲ್ಲಿ ಒಂದು ಚಿಕ್ಕ ಕೋಟೆ, ದೇವಾಲಯ ಮತ್ತು ಬಾವಿ ಇವೆ.

ಈ ಊರಿನಲ್ಲಿ ಹಿಂದೆ ಎರಡು ಸುತ್ತಿನ ಕೋಟೆಯಿತ್ತು. ಈಗ ಒಳಸುತ್ತು ಮತ್ತು ಅದರ ಸುತ್ತಲಿನ ಕಂದಕ ಮಾತ್ರ ಉಳಿದಿವೆ. ಕೋಟೆಯ ಉತ್ತರ ಮತ್ತು ಪೂರ್ವ ಭಾಗ ಶಿಥಿಲವಾಗಿದೆ. ಆಯತಾಕಾರದ ಕೋಟೆಯನ್ನು ಮಧ್ಯಮ ಮತ್ತು ಚಿಕ್ಕ ಗಾತ್ರದ ಅನಿಯಮಿತಾಕಾರದ ಕಲ್ಲುಗಳಿಂದ ಗಾರೆಯನ್ನು ಬಳಸದೆ ಕಟ್ಟಿದೆ (ಚಿತ್ರ ೧೭೬). ಕೋಟೆಯಲ್ಲಿ ಪಶ್ಚಿಮ ದಿಕ್ಕಿಗೆ ಒಂದು ಚೌಕಾಕಾರದ ಮತ್ತು ಒಂದು ವೃತ್ತಾಕಾರದ, ನೈರುತ್ಯ ಮೂಲೆಯಲ್ಲಿ, ಉತ್ತರ ಮತ್ತು ದಕ್ಷಿಣ ದಿಕ್ಕಿನಲ್ಲಿ ಒಂದೊಂದು ವೃತ್ತಾಕಾರದ ಕೊತ್ತಳಗಳಿವೆ (ಚಿತ್ರ ೧೭೭). ಪೂರ್ವ, ಉತ್ತರ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಒಂದೊಂದು ಬಾಗಿಲುಗಳಿವೆ.

ಉತ್ತರ ದಿಕ್ಕಿಗಿರುವ ಎಲ್ಲಮ್ಮನ ಅಗಸೆ ಕಮಾನಿನಾಕಾರದಲ್ಲಿದೆ. ಪೂರ್ವ ದಿಕ್ಕಿನ ಮೂಡಲಗಸೆ ಶಿಥಿಲವಾಗಿದೆ. ಇದರ ಉತ್ತರಕ್ಕೆ ದುರ್ಗಾ ಮತ್ತು ಬಸವಣ್ಣನ ದೇವಾಲಯಗಳಿವೆ. ಅಗಸೆಯ ದಕ್ಷಿಣಕ್ಕೆ ಮೌನೇಶ್ವರ ಮಠವಿದೆ. ಇದಕ್ಕೆ ಮೈಸೂರು ಮಠವೆಂದು ಕರೆಯುತ್ತಾರೆ. ಮಠದ ಪಕ್ಕದಲ್ಲಿ ಚಿಕ್ಕ ನಂದಿಗಳಿವೆ. ಆಗ್ನೇಯ ಮೂಲೆಯಲ್ಲಿ ಊರ ಬಾವಿಯಿದೆ. ಬಾವಿಗೆ ಪಶ್ಚಿಮ ದಿಕ್ಕಿನಲ್ಲಿ ಮೆಟ್ಟಿಲುಗಳಿವೆ. ಬಾವಿಯ ಪಶ್ಚಿಮಕ್ಕೆ ಈಶ್ವರ ಮತ್ತು ಉತ್ತರಕ್ಕೆ ಆಂಜನೇಯ ದೇವಾಲಯಗಳಿವೆ. ವಾಯವ್ಯ ಮೂಲೆಯಲ್ಲಿ ಪಾವಟೆಯಮ್ಮನ ದೇವಾಲಯವಿದೆ.

ಕೋಟೆಯ ಹೊರಗೆ ಉತ್ತರಕ್ಕೆ ಬಾಗಿಲ ಪಕ್ಕದ ಕೊತ್ತಳದ ಪಕ್ಕದಲ್ಲಿ ಲಕ್ಷ್ಮಿಯ ಚಿಕ್ಕ ದೇವಾಲಯವಿದೆ. ಪಶ್ಚಿಮ ಗೋಡೆಯ ಚೌಕಾಕಾರದ ಕೊತ್ತಳದ ಪಕ್ಕದಲ್ಲಿ ಪಶ್ಚಿಮಕ್ಕೆ ರಾಮಲಿಂಗ ದೇವಾಲಯವಿದೆ. ಇದು ಪಶ್ಚಿಮಾಭಿಮುಖವಾಗಿದೆ.

ಮಧ್ಯಮ ಮತ್ತು ಚಿಕ್ಕ ಕಲ್ಲುಗಳಿಂದ ಕಟ್ಟಿದ ಈ ಕೋಟೆಯ ಕಾಲ ಹದಿನೇಳು-ಹದಿನೆಂಟನೇ ಶತಮಾನಗಳು.




೧೭೫. ಚಳಗೇರಿ: ೧. ಪೂರ್ವದ ಬಾಗಿಲು, ೨. ಹನುಮಂತನ ಗುಡಿ, ೩. ಬಾವಿ, ೪. ಈಶ್ವರನ ಗುಡಿ ೫. ಮೈಸೂರು ಮಠ, ೬. ದ್ಯಾಮವ್ವನ ಗುಡಿ, ೭. ದಕ್ಷಿಣ ಬಾಗಿಲು, ೮. ಉತ್ತರದ ಬಾಗಿಲು



೧೨೬. ಚಳಗೇರಿ, ಕೋಟೆ



೧೨೭. ಚಳಗೇರಿ, ಬುರುಜು

# ೪. ಕುರುಬನಾಳ

ಕುರುಬನಾಳ ಕುಷ್ಟಗಿ ತಾಲೂಕಿನಲ್ಲಿ ಕುಷ್ಟಗಿಯ ದಕ್ಷಿಣಕ್ಕೆ ೫ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೫° ೪೨' ಉತ್ತರ ಮತ್ತು ರೇಖಾಂಶ ೭೬°೧೪' ಪೂರ್ವದಲ್ಲಿದೆ. ಈ ಚಿಕ್ಕ ಗ್ರಾಮದಲ್ಲಿ ಶಿಥಿಲವಾದ ಕೋಟೆ ಮತ್ತು ದೇವಾಲಯಗಳಿವೆ.

ಬಹಳ ಶಿಥಿಲವಾದ ಒಂದು ಸುತ್ತಿನ ಕೋಟೆಯಲ್ಲಿ ಎರಡು ಬಾಗಿಲುಗಳು ಮತ್ತು ನಾಲ್ಕು ವೃತ್ತಾಕಾರದ ಕೊತ್ತಳಗಳು ಕಾಣುತ್ತವೆ. ಕೋಟೆಯನ್ನು ಮಧ್ಯಮ ಮತ್ತು ಚಿಕ್ಕ ಗಾತ್ರದ ಕಲ್ಲುಗಳಿಂದ ಗಾರೆಯನ್ನು ಬಳಸದೆ ಕಟ್ಟಿದೆ. ಹೊರ ಬಾಗಿಲು ಉತ್ತರಾಭಿಮುಖವಾಗಿದೆ. ಇದರಲ್ಲಿ ಚೌಕಟ್ಟು ಅಥವಾ ಛಾವಣಿ ಇಲ್ಲ. ಇಲ್ಲಿಂದ ದಕ್ಷಿಣಕ್ಕೆ ಹೋಗಿ ಪಶ್ಚಿಮಕ್ಕೆ ತಿರುಗಿದಾಗ ಪೂರ್ವಾಭಿಮುಖವಾದ ಮತ್ತೊಂದು ಬಾಗಿಲಿದೆ. ಕಮಾನಿನಾಕಾರದ ಈ ಬಾಗಿಲಿಗೆ ಚೌಕಟ್ಟಿಲ್ಲ (ಚಿತ್ರ ೧೭೮). ಇದಕ್ಕೆ ಗಾರೆಮಾಡಿದೆ. ಪಶ್ಚಿಮ ಗೋಡೆಗೆ ಇರುವ ಕೊತ್ತಳ ಸುಸ್ಥಿತಿಯಲ್ಲಿದೆ. ಈ ಕೊತ್ತಳದ ಕೆಳಭಾಗ ದಪ್ಪ ಕಲ್ಲುಗಳಿಂದ, ಮಧ್ಯದ ಭಾಗ ಮಧ್ಯಮ ಮತ್ತು ಚಿಕ್ಕ ಕಲ್ಲುಗಳಿಂದ ಮತ್ತು ಮೇಲಿನ ಭಾಗ ಚಿಕ್ಕ ಕಲ್ಲುಗಳಿಂದ ಕಟ್ಟಿದೆ. ಇದರಲ್ಲಿ ಉದ್ದವಾದ ಮತ್ತು ಚಿಕ್ಕ ಬಂದೂಕು ಕಿಂಡಿಗಳಿವೆ (ಚಿತ್ರ ೧೭೯).

ಒಳ ಬಾಗಿಲಿನ ಹತ್ತಿರ ಪೂರ್ವಾಭಿಮುಖವಾಗಿರುವ ದ್ಯಾಮವ್ವನ ಗುಡಿಯಿದೆ. ಹೊರ ಬಾಗಿಲು ಎದುರಿಗೆ ಶರಣಬಸಪ್ಪನ ಗುಡಿಯಿದೆ.

ಮಧ್ಯಮ ಮತ್ತು ಚಿಕ್ಕ ಕಲ್ಲುಗಳಿಂದ ಕಟ್ಟಿದ ಈ ಕೋಟೆಯು ಹದಿನೇಳು-ಹದಿನೆಂಟನೇ ಶತಮಾನಗಳದ್ದು.



೧೭೮. ಕುರುಬನಾಳ, ಬಾಗಿಲು



೧೭೯. ಕುರುಬನಾಳ, ಬುರುಜು

## ೫೭. ಮುಧೋಳ

ಮುಧೋಳ ಯಲಬುರ್ಗ ತಾಲೂಕಿನಲ್ಲಿ ಯಲಬುರ್ಗದಿಂದ ವಾಯವ್ಯ ದಿಕ್ಕಿಗೆ ೭ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೫° ೩೮' ಉತ್ತರ ಮತ್ತು ರೇಖಾಂಶ ೭೫° ೫೯' ಪೂರ್ವದಲ್ಲಿದೆ. ಐತಿಹಾಸಿಕ ಪ್ರಸಿದ್ಧವಾದ ಈ ಗ್ರಾಮದಲ್ಲಿ ಕೋಟೆ, ದೇವಾಲಯ, ಶಿಲ್ಪ, ವೀರಗಲ್ಲು, ಶಾಸನ ಮುಂತಾದವು ಇವೆ.

ಈ ಗ್ರಾಮದ ಹೆಸರನ್ನು ಇಲ್ಲಿರುವ ಶಾಸನಗಳು ಮುದುವೊಳಲ್ ಎಂದು ಉಲ್ಲೇಖಿಸುತ್ತವೆ. ಒಂಭತ್ತನೇ ಶತಮಾನದಲ್ಲಿ ಈ ಗ್ರಾಮ ಅಸ್ತಿತ್ವದಲ್ಲಿತ್ತು. ರಾಷ್ಟ್ರಕೂಟ ಅರಸ ಅಕಾಲವರ್ಷ ಶುಭತುಂಗ (ಎರಡನೇ ಕೃಷ್ಣ) ಆಳ್ವಿಕೆಯಲ್ಲಿ ಮಹಾಶ್ರೀಮಂತನು ಬೆಳ್ವೊಲ-೩೦೦ನ್ನು ಆಳುತ್ತಿದ್ದ. ಆಗ ಕ್ರಿ.ಶ. ೮೯೭ರಲ್ಲಿ ಮುದುವೊಳಲ ಮೇಲೆ ನಡೆದ ದಾಳಿಯಲ್ಲಿ ಸಮ್ಮಗಾರ ಚಂದ ಮಡಿದನೆಂದು ಇಲ್ಲಿಯ ವೀರಗಲ್ಲಿನ ಶಾಸನದಿಂದ ತಿಳಿಯುತ್ತದೆ.[1] ಹನ್ನೊಂದನೇ ಶತಮಾನದಲ್ಲಿ ಕಲ್ಯಾಣ ಚಾಲುಕ್ಯ ಅರಸ ಮೂರನೇ ತೈಲನ ಸಾಮಂತ ಸಿಂದ ಚಾವುಂಡರಸ ಈ ಭಾಗವನ್ನು ಆಳುತ್ತಿದ್ದಾಗ ದಂಡನಾಯಕ ಸೋವರಸನ ಹೆಂಡತಿ ಬೊಮ್ಮಲದೇವಿ ಈ ಊರಿನಲ್ಲಿ ಹರಿಹರ ದೇವಾಲಯವನ್ನು ಕಟ್ಟಿಸಿದಳು.[2] ಇದೊಂದು ಅಗ್ರಹಾರವಾಗಿತ್ತು. ಇಲ್ಲಿ ರಾಷ್ಟ್ರಕೂಟರ ಕಾಲದ ಸಿದ್ಧೇಶ್ವರ ದೇವಾಲಯ ಮತ್ತು ಕಲ್ಯಾಣ ಚಾಲುಕ್ಯರ ಕಾಲದ ಮಲ್ಲಿಕಾರ್ಜುನ ಮತ್ತು ತ್ರಿಲಿಂಗೇಶ್ವರ ದೇವಾಲಯಗಳಿವೆ.

ಹಿಂದಿನ ಕಾಲದಲ್ಲಿ ಊರಿನ ಸುತ್ತಲು ಕೋಟೆಯಿತ್ತು. ಅದು ಈಗ ಉಳಿದಿಲ್ಲ. ಈಗಿರುವ ಕೋಟೆ ದೇಸಾಯಿಯವರ ಮನೆಯ ಸುತ್ತ ಮಾತ್ರ ಇದೆ. ಈ ಮನೆತನದ ಶಂಕರಪ್ಪ ಮತ್ತು ಉಪಾಶಪ್ಪ ದೇಸಾಯಿಗಳಾಗಿದ್ದರು. ಕೋಟೆಯನ್ನು ಶಂಕರಪ್ಪನ ಕಾಲದಲ್ಲಿ ನಿರ್ಮಿಸಲಾಗಿದೆ.

ಆಯತಾಕಾರದ ಕೋಟೆಯ ಪೂರ್ವಕ್ಕೆ ಎರಡು ಬಾಗಿಲು, ನಾಲ್ಕು ಮೂಲೆಗಳಲ್ಲಿ ಮತ್ತು ಉತ್ತರ, ಪಶ್ಚಿಮ, ದಕ್ಷಿಣ ದಿಕ್ಕಿನ ಗೋಡೆಗಳ ಮಧ್ಯದಲ್ಲಿ ಒಂದೊಂದು ವೃತ್ತಾಕಾರದ ಕೊತ್ತಳಗಳಿವೆ (ಚಿತ್ರ ೧೮೦). ಕೋಟೆಯನ್ನು ಆಯತಾಕಾರದ ಸೈಜುಗಲ್ಲುಗಳಿಂದ ಕಟ್ಟಿದೆ (ಚಿತ್ರ ೧೮೧). ಪೂರ್ವ ಗೋಡೆಯ ಮಧ್ಯದ ಬಾಗಿಲನ್ನು ಮರೆಮಾಡಲು ಅದರ ಮುಂದೆ L ಆಕಾರದ ಉದ್ದವಾದ ಗೋಡೆಯನ್ನು ಕಟ್ಟಿದೆ. ಈ ಗೋಡೆಯ ಪೂರ್ವ ದಿಕ್ಕಿನ ಬದಿಯಲ್ಲಿಯೊಂದು ಗೂಡಿನಲ್ಲಿ ಕುಳಿತ ಭಂಗಿಯಲ್ಲಿರುವ ದೇವಿಯ ಶಿಲ್ಪವಿದೆ. ಪೂರ್ವಾಭಿಮುಖವಾಗಿರುವ ಬಾಗಿಲಿಗೆ ಮರದ ಚೌಕಟ್ಟಿದೆ. ಬಾಗಿಲ ಮೇಲ್ಭಾಗ ಶಿಥಿಲವಾಗಿರುವುದರಿಂದ ಮಣ್ಣಿನ ಹೆಳ್ಳೆಗಳಿಂದ ದುರಸ್ತಿ ಮಾಡಿದೆ. ಪ್ರವೇಶದ ಪಕ್ಕದಲ್ಲಿ ಕಟ್ಟೆಗಳಿವೆ. ಬಲಭಾಗದ ಕಟ್ಟೆಯ ಮೇಲೆ ಒಂದು ಕೊಠಡಿಯಿದೆ.




೧೮೦. ಮುಧೋಳ ಕೋಟೆ : ೧. ಬಾಗಿಲು, ೨. ಕಟ್ಟಡ, ೩. ತ್ರಿಲಿಂಗೇಶ್ವರ ದೇವಾಲಯ, ೪. ಕಲ್ಲೇಶ್ವರ ದೇವಾಲಯ



೧೮೧. ಮುಧೋಳ, ಕೋಟೆ



೧೮೨. ಮುಧೋಳ, ಬುರುಜು

ಬಾಗಿಲ ಒಳಬದಿ ಕಮಾನಿನಾಕಾರದಲ್ಲಿದೆ. ಬಾಗಿಲಿನ ಛಾವಣಿ ಬಿದ್ದು ಹೋಗಿದೆ. ಜೊತ್ತಳಗಳ ಮೇಲಿನ ಭಾಗದಲ್ಲಿ ಉದ್ದವಾದ ಬಂದೂಕು ಕಿಂಡಿಗಳಿವೆ. ಪ್ರತಿ ಕಿಂಡಿಯ ಬದಿಗಳಲ್ಲಿ ಎರಡೆರಡು ದಪ್ಪ ಕಲ್ಲುಗಳಿವೆ. ಕೈಪಿಡಿ ಗೋಡೆಯಲ್ಲಿ ಚಿಕ್ಕ ಬಂದೂಕು ಕಿಂಡಿಗಳಿವೆ. ಕೈಪಿಡಿ ಗೋಡೆಯ ಮೇಲ್ಭಾಗಕ್ಕೆ ಗಾರೆ ಮಾಡಿದೆ (ಚಿತ್ರ ೧೮೨).

ಕೋಟೆಯೊಳಗೆ ಬಿದ್ದು ಹೋಗಿರುವ ಒಂದು ಕಟ್ಟಡವಿದೆ. ಮತ್ತೊಂದು ಸುಸ್ಥಿತಿಯಲ್ಲಿರುವ ಕಟ್ಟಡದಲ್ಲಿ ದೇಸಾಯಿ ಮನೆತನದವರು ವಾಸವಾಗಿದ್ದಾರೆ. ವಾಯುವ್ಯ ಮೂಲೆಯಲ್ಲಿ ಸಿದ್ದೇಶ್ವರ ದೇವಾಲಯವಿದೆ. ಈ ಚಿಕ್ಕ ತ್ರಿಕೂಟ ದೇವಾಲಯದಲ್ಲಿ ಮೂರು ಲಿಂಗಗಳಿವೆ. ಈ ಕೋಟೆಯನ್ನು ಹತ್ತೊಂಬತ್ತನೇ ಶತಮಾನದ ಕೊನೆಗೆ ಅಥವಾ ಇಪ್ಪತ್ತನೇ ಶತಮಾನದ ಪ್ರಾರಂಭದಲ್ಲಿ ಕಟ್ಟಿದೆ.

## ಟಿಪ್ಪಣಿಗಳು

೧. Patil Channabasappa S. and Vinoda C. Patil (Eds), 1998, *Inscriptions of Koppal District,* No. 371; ದೇವರಕೊಂಡಾರೆಡ್ಡಿ(ಸಂ), ೧೯೯೮, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ : ೨ ಕೊಪ್ಪಳ ಜಿಲ್ಲೆ,* ಯಲಬುರ್ಗ ತಾಲೂಕ ೩೦.

೨. *ಅದೇ,* No. ೩೭೩; ದೇವರಕೊಂಡಾರೆಡ್ಡಿ (ಸಂ), *ಪೂರ್ವೋಕ್ತ,* ಯಲಬುರ್ಗ ತಾಲೂಕ ೩೨.

## ೬. ಯಲಬುರ್ಗ

ಯಲಬುರ್ಗ ಕೊಪ್ಪಳ ಜಿಲ್ಲೆಯ ಒಂದು ತಾಲೂಕ ಕೇಂದ್ರ. ಇದು ಅಕ್ಷಾಂಶ ೧೫° ೫' ಉತ್ತರ ಮತ್ತು ರೇಖಾಂಶ ೭೬° ೪' ಪೂರ್ವದಲ್ಲಿದೆ. ಎರಂಬರಗೆ ಎಂಬ ಹೆಸರಿನಿಂದ ಪ್ರಸಿದ್ಧವಾಗಿದ್ದ ಈ ಊರು ತನ್ನ ಐತಿಹಾಸಿಕ ಮಹತ್ವವನ್ನು ಈಗ ಕಳೆದುಕೊಂಡಿದೆ.

ಹನ್ನೊಂದರಿಂದ ಹದಿಮೂರನೇ ಶತಮಾನದವರೆಗೆ ಸಿಂದರು ಈ ಪ್ರದೇಶವನ್ನು, ಮೊದಲು ಕಲ್ಯಾಣ ಚಾಲುಕ್ಯರ ಸಾಮಂತರಾಗಿ ನಂತರ ಕಲಚೂರಿಯರ ಸಾಮಂತರಾಗಿ ಆಳುತ್ತಿದ್ದರು. ಈ ಭಾಗವನ್ನು ಸಿಂದನಾಡು ಎಂದು ಕರೆಯುತ್ತಿದ್ದರು. ಇದರಲ್ಲಿ ಕಿಸುಕಾಡು ೭೦, ಕೆಳವಡಿ ೩೦೦ ಮತ್ತು ನರೆಯಂಗಲ್ಲ ೧೨ ವಿಭಾಗಗಳಿದ್ದವು. ಕೆಲವೊಮ್ಮೆ ಕಿರಿವೀದಿ ೩೦, ಕುಂಟಿಗೆ ೭೦ ಮತ್ತು ಕುಕನೂರು ೩೦ ವಿಭಾಗಗಳೂ ಇದರಲ್ಲಿ ಸೇರಿದ್ದವು. ಮೊದಲು ಇವರು ಪಟ್ಟದ ಕಲ್ಲಿನಿಂದ ನಂತರ ಯಲಬುರ್ಗದಿಂದ ಆಳಿದರು. ಈ ಮನೆತನ ಯಲಬುರ್ಗದ ಸಿಂದ ವಂಶವೆಂದೇ ಪ್ರಸಿದ್ಧವಾಯಿತು.[೧]

ಚಾಲುಕ್ಯ ಅರಸ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಹೊಯ್ಸಳ ಅರಸ ಒಂದನೇ ಬಲ್ಲಾಳನು ತುಂಗಭದ್ರವನ್ನು ದಾಟಿ ಚಾಲುಕ್ಯ ರಾಜ್ಯವನ್ನು ವಶಪಡಿಸಿಕೊಂಡನು. ಆಗ ವಿಕ್ರಮಾದಿತ್ಯನ ಸಾಮಂತನಾದ ಸಿಂದ ವಂಶದ ಎರಡನೇ ಆಚುಗಿ (ಕ್ರಿ.ಶ. ೧೧೧೩-೧೧೨೫)ಯು ಬಲ್ಲಾಳನನ್ನು ಸೋಲಿಸಿದನು.[೨] ಬಲ್ಲಾಳನ ನಂತರ ಆಳ್ವಿಕೆಯನ್ನು ಕೈಗೆತ್ತಿಕೊಂಡ ವಿಷ್ಣುವರ್ಧನನು ತುಂಗಭದ್ರವನ್ನು ದಾಟಿ ಕುಮ್ಮಟ ದುರ್ಗವನ್ನು ವಶಪಡಿಸಿಕೊಂಡನು.[೩] ವಿಕ್ರಮಾದಿತ್ಯನ ಆದೇಶದ ಮೇರೆಗೆ ಸಿಂದ ಆಚುಗಿ ಮತ್ತು ಅವನ ಮಗ ಪೆರ್ಮ ಹೊಯ್ಸಳರೊಂದಿಗೆ ಹೋರಾಡಿದರು. ಕ್ರಿ.ಶ. ೧೧೨೨ ಪೆರ್ಮನು ದೋರಸಮುದ್ರವನ್ನು ವಶಪಡಿಸಿಕೊಂಡು ವಿಷ್ಣುವರ್ಧನನ್ನು ಬೇಲೂರುವರೆಗೆ ಅಟ್ಟಿಸಿಕೊಂಡು ಹೋಗಿ, ಅದನ್ನೂ ವಶಪಡಿಸಿಕೊಂಡನು.[೪]

ಹೊಯ್ಸಳ ಅರಸ ಬಲ್ಲಾಳನು ಗೆದ್ದ ಕುರುಗೋಡು, ದೊರವಡಿ, ಬಳ್ಳಾರಿ, ಹಾಲವಿ, ಮಾನವಿ, ಲೊಕ್ಕಿಗುಂಡಿ ಮುಂತಾದ ಕೋಟೆಗಳ ಪಟ್ಟಿಯಲ್ಲಿ ಯಲಬುರ್ಗವೂ ಕಾಣುತ್ತದೆ.[೫] ಆದುದರಿಂದ ಇಲ್ಲಿದ್ದ ಕೋಟೆಯು ಬಲಿಷ್ಠವೂ ಮತ್ತು ಪ್ರಸಿದ್ಧಿ ಪಡೆದದ್ದೂ ಆಗಿದ್ದಿತು. ಈ ಕೋಟೆಯನ್ನು ವಶಪಡಿಸಿಕೊಂಡ ನಂತರ ಕ್ರಿ.ಶ. ೧೧೯೫-೯೬ರಲ್ಲಿ ಬಲ್ಲಾಳನು ಇಲ್ಲಿಂದಲೇ ಆಳುತ್ತಿದ್ದನೆಂದು ಶಾಸನಗಳು ಉಲ್ಲೇಖಿಸುತ್ತವೆ.[೬] ಇಂತಹ ಇತಿಹಾಸ ಪ್ರಸಿದ್ಧವಾದ ಕೋಟೆಯ ಅವಶೇಷಗಳು ಈಗ ಉಳಿದಿಲ್ಲ.

## ಟಿಪ್ಪಣಿಗಳು

೧. ಶಿರೂರ ಬಿ.ವ್ಹಿ., ೧೯೭೭, *ಯಲಬುರ್ಗಿಯ ಸಿಂದರು.* Gopal B.R., 1982, *Minor Dynasties of South India, Karnataka,* pp. 109-116.

೨. Desai P.B., Shrinivas H. Ritti and B.R. Gopal, 1981, *A History of Karnataka,* p. 184.

೩. *ಅದೇ,* ಪು. ೨೬೬.

೪. *ಅದೇ,* ಪು. ೨೬೭.

೫. *EC,* V (Rev), Channarayapatna 179, ii (Rev), S.B. 457; *MAR,* 1937, No. 26, pp. 153-158.

೬. *MAR,*1939, No. 17; *EC,* V, Belur 204, Arasikere 5.

# ೭. ಕುಕನೂರು

ಕುಕನೂರು ಯಲಬುರ್ಗ ತಾಲೂಕಿನಲ್ಲಿ ಯಲಬುರ್ಗದಿಂದ ದಕ್ಷಿಣಕ್ಕೆ ೧೬ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೫° ೨೮' ಉತ್ತರ ಮತ್ತು ರೇಖಾಂಶ ೭೬° ೨' ಪೂರ್ವದಲ್ಲಿದೆ. ಐತಿಹಾಸಿಕ ಪ್ರಸಿದ್ಧವಾದ ಈ ನಗರದಲ್ಲಿ ಕೋಟೆ, ದೇವಾಲಯಗಳು, ಶಿಲ್ಪಗಳು, ಶಾಸನಗಳು, ಮುಂತಾದವು ಇವೆ.

ಕ್ರಿ.ಶ. ಏಳನೇ ಶತಮಾನದಲ್ಲಿ ಬಾದಾಮಿ ಚಾಲುಕ್ಯ ಅರಸ ಒಂದನೇ ವಿಕ್ರಮಾದಿತ್ಯನ ಕಾಲದಲ್ಲಿ ಸಿಂದರಸನು ಕುಕನೂರನ್ನು ಆಳುತ್ತಿದ್ದನು.[೧] ಇಲ್ಲಿಯ ನವಲಿಂಗ ದೇವಾಲಯದ ಕೆಲಭಾಗ ರಾಷ್ಟ್ರಕೂಟರ ಕಾಲದ್ದು. ಉಳಿದ ಭಾಗವನ್ನು ಕಲ್ಯಾಣ ಚಾಲುಕ್ಯ ಇರಿವಬೆಡಂಗನ ಕಾಲದಲ್ಲಿ ಕ್ರಿ.ಶ. ೧೦೦೫ರಲ್ಲಿ ಕಟ್ಟಿದೆ.[೨] ಎರಡನೇ ಜಗದೇಕಮಲ್ಲನ ಆಳ್ವಿಕೆಯ ಕ್ರಿ.ಶ. ೧೧೪೯ರಲ್ಲಿ ಮಮ್ಮರಸ ದಂಡಾಧಿನಾಥನು ಬೆಳ್ವೊಲ ೩೦೦ನ್ನು ಆಳುತ್ತಿದ್ದನು.[೩] ಕಲಚೂರಿ ಅರಸ ಎರಡನೇ ಬಿಜ್ಜಳನ ಆಳ್ವಿಕೆಯಲ್ಲಿ ಕ್ರಿ.ಶ. ೧೧೬೩ರಲ್ಲಿ ಅಮ್ಮಣಯ್ಯ ಬೆಳ್ವೊಲನಾಡನ್ನು ಆಳುತ್ತಿದ್ದ. ಆಗ ಕುಕನೂರು ಪ್ರದೇಶ ಕುಕನೂರು ೩೦ ಆಡಳಿತ ವಿಭಾಗವಾಗಿದ್ದು, ಬೆಳ್ವೊಲನಾಡಿನ ಉಪವಿಭಾಗವಾಗಿತ್ತು.[೪] ಮುಂದೆ ಬೆಳ್ವೊಲನಾಡನ್ನು ಕಳಚೂರಿ ಅರಸ ಎರಡನೇ ಸಂಕಮನ ಕಾಲಕ್ಕೆ ಕ್ರಿ.ಶ. ೧೧೭೮ರಲ್ಲಿ ಧನ್ನುಗಿ ದಂಡನಾಥ ಆಳುತ್ತಿದ್ದನು.[೫]

ಅಗ್ರಹಾರವಾಗಿದ್ದ ಕುಕನೂರು ಹದಿನಾಲ್ಕನೇ ಶತಮಾನದಲ್ಲಿ ಹಾಳಾಗಿತ್ತು. ವಿಜಯನಗರ ಅರಸ ಎರಡನೇ ಹರಿಹರನ್ನು ಕ್ರಿ.ಶ.೧೩೭೮ರಲ್ಲಿ ಊರನ್ನು ಪುನರ್ವಸತಿಗೊಳಿಸಿ, ದೇವಾಲಯಗಳ ಜೀರ್ಣೋದ್ಧಾರ ಮಾಡಿ, ಪೂಜೆ ಪುನಸ್ಕಾರ ನಡೆಯುವಂತೆ ಮಾಡುವ ಉದ್ದೇಶಕ್ಕಾಗಿ ಕುಕನೂರು ನಗರವನ್ನು ಗಂಡಿನ ಭಟ್ಟಿಪಯ್ಯನಿಗೆ ದಾನ ಮಾಡಿದನು.[೬] ತುರುಕರ ದಾಳಿಯಲ್ಲಿ ಇಲ್ಲಿಯ ದೇವಾಲಯಗಳು ಮತ್ತೊಮ್ಮೆ ಹಾಳಾದವು. ಕುಕನೂರು ನಾಡಗೌಡಿಕೆಯನ್ನು ನೋಡಿಕೊಳ್ಳುತ್ತಿದ್ದ ಆ ಊರಿನ ದೇಸಾಯಿ ದೇವರಾಯಗೌಡ ಅಪಾರ ಹಣವನ್ನು ಖರ್ಚುಮಾಡಿ ಮಹಾಮಾಯಿ ದೇವಾಲಯವನ್ನು ಕ್ರಿ.ಶ. ೧೫೬೧ರಲ್ಲಿ ಪುನರ್ ನಿರ್ಮಿಸಿದ .[೭] ಮೊಘಲ ಚಕ್ರವರ್ತಿ ಔರಂಗ್‌ಜೇಬ್‌ನ ಕಾಲದಲ್ಲಿ ಕ್ರಿ.ಶ. ೧೬೯೬ರಲ್ಲಿ ಜಾಮಿ ಮಸೀದಿಯ ನಿರ್ಮಾಣವಾಯಿತು.[೮]

ಈ ನಗರದಲ್ಲಿಯ ಕೋಟೆಯ ಪಶ್ಚಿಮ ಗೋಡೆಯ ಅರ್ಧ ಭಾಗ ಮಾತ್ರ ಸುಸ್ಥಿತಿಯಲ್ಲಿದೆ. ಕೋಟೆಯನ್ನು ದಪ್ಪ ಚೌಕಾಕಾರದ ಮತ್ತು ಕೆಲವು ಅನಿಯಮಿತಾಕಾರದ ಕಲ್ಲುಗಳಿಂದ ಗಾರೆಯನ್ನು ಬಳಸದೆ ಕಟ್ಟಿದೆ (ಚಿತ್ರ೧೮೩).



೧೮೩. ಕುಕನೂರ, ಕೋಟೆ



೧೮೪. ಕುಕನೂರ, ಬುರುಜು

ಕೋಟೆಯಲ್ಲಿ ವೃತ್ತಾಕಾರದ ಕೊತ್ತಳಗಳಿವೆ (ಚಿತ್ರ ೧೬೪). ಪೂರ್ವ ದಿಕ್ಕಿನಲ್ಲಿ ಕೋಟೆಯ ಅವಶೇಷಗಳು ಇವೆ.

ದಪ್ಪ ಕಲ್ಲಿನಿಂದ ಕಟ್ಟಿದ ಈ ಕೋಟೆ ಹದಿನಾರು-ಹದಿನೇಳನೇ ಶತಮಾನಗಳದ್ದಾಗಿದೆ.

## ಟಿಪ್ಪಣಿಗಳು

೧. Patil Channabasappa S. and Vinoda C. Patil (Eds), *Inscriptions of Koppal District,* No. 362; *ARIE,* 1955-56, No. B 212.

೨. ಅದೇ, No. 347; *ARIE*, 1953-54, No. B 261; HAS, 18, No.1; *ಶಾಪ* ಸಂ. ೫೧; ದೇವರಕೊಂಡಾರೆಡ್ಡಿ (ಸಂ), *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ : ೨ ಕೊಪ್ಪಳ ಜಿಲ್ಲೆ,* ಸಂ. ೫೦.

೩. *ಅದೇ,* No. 358; *ARIE,* 1953-54, No. B 264; 1954-55, No. B 165; *HAS*, 18, No. 10; *ಶಾಪ,* ಸಂ. ೪೮; ದೇವರಕೊಂಡಾರೆಡ್ಡಿ (ಸಂ), *ಪೂರ್ವೋಕ್ತ,* ಸಂ. ೩೯.

೪. *ಅದೇ,* No. 360; *ಶಾಪ,* ಸಂ. ೪೯; ದೇವರಕೊಂಡಾರೆಡ್ಡಿ (ಸಂ), *ಪೂರ್ವೋಕ್ತ,* ಸಂ. ೪೦.

೫. *ಅದೇ,* No. 345; *ARIE,* 1953-54, No. B 260; *HAS,* 18, No. 13; *ಶಾಪ,* ಸಂ. ೫೩; ದೇವರಕೊಂಡಾರೆಡ್ಡಿ (ಸಂ), *ಪೂರ್ವೋಕ್ತ,* ಸಂ. ೫೨.

೬. *ಅದೇ,* No. 367; *APGAS,* 9, No. 6; ದೇವರಕೊಂಡಾರೆಡ್ಡಿ (ಸಂ), *ಪೂರ್ವೋಕ್ತ,* ಸಂ. ೪೮.

೭. *ಅದೇ,* No. 346; *APGAS,* 9, No. 7; ದೇವರಕೊಂಡಾರೆಡ್ಡಿ (ಸಂ), *ಪೂರ್ವೋಕ್ತ,* ಸಂ. ೪೯.

೮. *ಅದೇ,* No. 370; *ARIE,* 1989-90, No. C 35.

# ೮. ಚಿಕ್ಕ ಮ್ಯಾಗೇರಿ

ಚಿಕ್ಕ ಮ್ಯಾಗೇರಿ ಯಲಬುರ್ಗ ತಾಲೂಕಿನಲ್ಲಿ ಯಲಬುರ್ಗದಿಂದ ಆಗ್ನೇಯಕ್ಕೆ ೯ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೫° ೩೪' ಉತ್ತರ ಮತ್ತು ರೇಖಾಂಶ ೭೬° ೬' ಪೂರ್ವದಲ್ಲಿರುವ ಚಿಕ್ಕ ಗ್ರಾಮ. ಇಲ್ಲಿ ಒಂದು ಚಿಕ್ಕ ಕೋಟೆ, ದೇವಾಲಯ ಮತ್ತು ಬಾವಿ ಇವೆ.

ಹಿಂದೆ ಊರ ಸುತ್ತ ಒಂದು ಕೋಟೆಯಿತ್ತು. ಅದು ಈಗ ಉಳಿದಿಲ್ಲ. ಈಗಿರುವುದು ದೇಸಾಯಿಯವರ ಮನೆಯ ಸುತ್ತ ಇರುವ ಚಿಕ್ಕ ಕೋಟೆ. ಆಯತಾಕಾರದ ಕೋಟೆಯು ಪೂರ್ವ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಶಿಥಿಲವಾಗಿದೆ. ಕೋಟೆಯ ಮೂಲೆಗಳಲ್ಲಿ ಮತ್ತು ಪಶ್ಚಿಮ ಗೋಡೆಯ ಮಧ್ಯದಲ್ಲಿ ವೃತ್ತಾಕಾರದ ಕೊತ್ತಳಗಳಿವೆ (ಚಿತ್ರಗಳು ೧೮೫, ೧೮೭). ಈ ಕೋಟೆಯ ಕಟ್ಟಡ ವಿಶಿಷ್ಟವಾಗಿದೆ. ಇದನ್ನು ಮಣ್ಣಿನ ಹೆಳ್ಳೆಗಳಿಂದ ಕಟ್ಟಿದೆ. ಕೆಲವೆಡೆ ಗೋಡೆಯ ಕೆಳಭಾಗವನ್ನು ಸೈಜುಗಲ್ಲುಗಳಿಂದ ಕಟ್ಟಿ ಮೇಲ್ಭಾಗವನ್ನು ಮಣ್ಣಿನ ಹೆಳ್ಳೆಗಳಿಂದ ಕಟ್ಟಿದೆ (ಚಿತ್ರ ೧೮೬). ತ್ರಿಕೋನಾಕಾರದ ಹೆಳ್ಳೆಗಳನ್ನು ಕೆಸರಿನಿಂದ ಮಾಡಿ, ಒಣಗಿದ ನಂತರ ಕೆಸರು ಮತ್ತು ಹೆಳ್ಳೆಗಳನ್ನು ಉಪಯೋಗಿಸಿ ಕಟ್ಟಿದೆ. ಗೋಡೆಯಲ್ಲಿ ಯಾವುದೇ ತರಹದ ಬಂದೂಕು ಕಿಂಡಿಗಳಿಲ್ಲ.

ಕೋಟೆಯಲ್ಲಿ ಪೂರ್ವಾಭಿಮುಖವಾಗಿರುವ ಕಮಾನಿನಾಕಾರದ ಬಾಗಿಲನ್ನು ಸೈಜುಗಲ್ಲುಗಳಿಂದ ಕಟ್ಟಿ, ಸಿಮೆಂಟ್ ಮಾಡಿದೆ. ಕೋಟೆಯ ಒಳಗೆ ದೇಸಾಯಿಯವರ ಮನೆಯಿದೆ. ದೇಸಾಯಿ ಮನೆತನದವರು ಇಲ್ಲಿ ವಾಸವಾಗಿದ್ದಾರೆ. ವಾಯುವ್ಯ ಕೊತ್ತಳಕ್ಕೆ ಸೇರಿದಂತೆ ಕಲ್ಲೇಶ್ವರನ ಚಿಕ್ಕ ದೇವಾಲಯವಿದೆ. ಗರ್ಭಗೃಹ ಮಾತ್ರ ಇರುವ ಈ ದೇವಾಲಯದ ಬಾಗಿಲಲ್ಲಿ ಸರಳವಾದ ಶಾಖೆಗಳಿವೆ. ಪಶ್ಚಿಮ ಗೋಡೆಯ ಬದಿಯಲ್ಲಿ ಮೆಟ್ಟಿಲು ಗಳಿಲ್ಲದ ಸೇದುವ ಬಾವಿಯಿದೆ. ಕೋಟೆಯ ಒಳಗೆ ಚಿಕ್ಕ ಮನೆಗಳ ಅವಶೇಷಗಳಿವೆ.

ಸೈಜುಗಲ್ಲು ಮತ್ತು ಮಣ್ಣಿನ ಹೆಳ್ಳೆಗಳಿಂದ ಕಟ್ಟಿದ ಕೋಟೆಯ ಕಾಲ ಹತ್ತೊಂಬತ್ತನೇ ಶತಮಾನದ ಕೊನೆಭಾಗ ಅಥವಾ ಇಪ್ಪತ್ತನೇ ಶತಮಾನದ ಆರಂಭದ ಭಾಗ.




೧೮೫. ಚಿಕ್ಕಮ್ಯಾಗೇರಿ ಕೋಟೆ : ೧. ಬಾಗಿಲು, ೨. ಕಟ್ಟಡ, ೩. ಕಲ್ಲೇಶ್ವರ ಗುಡಿ, ೪. ಬಾವಿ



೧೮೬. ಚಿಕ್ಕಮ್ಯಾಗೇರಿ, ಕೋಟೆ



೧೮೭. ಚಿಕ್ಕಮ್ಯಾಗೇರಿ, ಬುರುಜು

## ೯. ಮುರಡಿ

ಮುರಡಿ ಯಲಬುರ್ಗ ತಾಲೂಕಿನಲ್ಲಿ ಯಲಬುರ್ಗದಿಂದ ಪೂರ್ವಕ್ಕೆ ೨೦ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೫° ೩೫' ಉತ್ತರ ಮತ್ತು ರೇಖಾಂಶ ೭೬° ೧೧' ಪೂರ್ವದಲ್ಲಿರುವ ಚಿಕ್ಕ ಗ್ರಾಮ. ಇಲ್ಲಿ ಒಂದು ಚಿಕ್ಕ ಕೋಟೆಯಿದೆ.

ಶಿಥಿಲಾವಸ್ಥೆಯಲ್ಲಿರುವ ಚೌಕಾಕಾರದ ಕೋಟೆಯ ಸುತ್ತಲು ಕಂದಕವಿದೆ. ಕೋಟೆಯ ಉತ್ತರ ಗೋಡೆಯ ಮಧ್ಯದಲ್ಲಿ ಬಾಗಿಲು ಮತ್ತು ನಾಲ್ಕು ಮೂಲೆಗಳಲ್ಲಿ ವೃತ್ತಾಕಾರದ ಕೊತ್ತಳಗಳು ಇವೆ. ಕೋಟೆಯ ಹೊರಗೆ ವಾಯವ್ಯಕ್ಕೆ ಮತ್ತೊಂದು ಶಿಥಿಲವಾದ ಬಾಗಿಲಿದೆ (ಚಿತ್ರ ೧೮೮). ಈ ಬಾಗಿಲ ನೈರುತ್ಯಕ್ಕೆ ದ್ಯಾಮವ್ವನ ಗುಡಿಯಿದೆ. ಕೋಟೆಯಲ್ಲಿ ಉತ್ತರಾಭಿಮುಖವಾಗಿರುವ ಬಾಗಿಲಿಗೆ ಚೌಕಟ್ಟು ಅಥವಾ ಭಾವಣಿಗಳಿಲ್ಲ. ಕೋಟೆಯನ್ನು ಮಧ್ಯಮ ಮತ್ತು ಚಿಕ್ಕ ಗಾತ್ರದ ಕಲ್ಲುಗಳಿಂದ ಕಟ್ಟಿದೆ. ನೈಸರ್ಗಿಕವಾಗಿ ಸಿಗುವ ಕಪ್ಪು ಮತ್ತು ಇತರ ಚಿಕ್ಕ ಗುಂಡುಕಲ್ಲುಗಳನ್ನು ಹೆಚ್ಚಾಗಿ ಬಳಸಿದೆ. ಕೆಲವು ಕಲ್ಲುಗಳ ಕೆಲವು ಬದಿಗಳನ್ನು ಮಾತ್ರ ಕತ್ತರಿಸಿರುವುದರಿಂದ ಅವು ನಿಯಮಿತ ಆಕಾರ ಹೊಂದಿಲ್ಲ (ಚಿತ್ರಗಳು ೧೮೯-೧೯೦). ಬಾಗಿಲಿನ ದಕ್ಷಿಣಕ್ಕೆ ಲಕ್ಷ್ಮಿನರಸಿಂಹ ದೇವಾಲಯವಿದೆ. ಗ್ರಾಮದ ಹೆಚ್ಚಿನ ಭಾಗ ಕೋಟೆಯೊಳಗಿದೆ.

ಮಧ್ಯಮ ಮತ್ತು ಚಿಕ್ಕ ಗಾತ್ರದ ಕಲ್ಲುಗಳಿಂದ ಕಟ್ಟಿದ ಈ ಕೋಟೆಯ ಕಾಲ ಹದಿನೇಳು-ಹದಿನೆಂಟನೇ ಶತಮಾನಗಳು.




೧೮೮. ಮುರಡಿ ಕೋಟೆ : ೧. ಬಾಗಿಲು, ೨. ದ್ಯಾಮವ್ವನ ಗುಡಿ, ೩. ಸಣ್ಣ ಅಗಸಿ, ೪. ಲಕ್ಷ್ಮೀನರಸಿಂಹನ ಗುಡಿ

# ೧೦. ಗುನ್ನಾಳ

ಗುನ್ನಾಳ ಯಲಬುರ್ಗ ತಾಲೂಕಿನಲ್ಲಿ ಯಲಬುರ್ಗದಿಂದ ಪೂರ್ವಕ್ಕೆ ೨೫ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೫° ೩೭' ಉತ್ತರ ಮತ್ತು ರೇಖಾಂಶ ೭೬°೧೪' ಪೂರ್ವಕ್ಕಿದೆ. ಈ ಚಿಕ್ಕ ಗ್ರಾಮದಲ್ಲಿ ಕೋಟೆ, ದೇವಾಲಯ, ವೀರಗಲ್ಲು, ಬಾವಿ ಮುಂತಾದವು ಇವೆ.

ಸುಮಾರು ಆಯತಾಕಾರದ ಕೋಟೆಯ ಹೊರಗೆ ಕಂದಕವಿದೆ. ಕಂದಕದ ಹೊರಗೆ ಆಗ್ನೇಯ ಭಾಗದಲ್ಲಿ ಪೂರ್ವಾಭಿಮುಖವಾದ ಶಿಥಿಲವಾದ ಬಾಗಿಲಿದೆ. ಆಗ್ನೇಯ ಮೂಲೆಯಲ್ಲಿ ಹುಲಿಗೆಮ್ಮನ ಗುಡಿಯಿದೆ. ಕೋಟೆಯ ಪೂರ್ವ ಗೋಡೆಯ ದಕ್ಷಿಣ ಭಾಗ ಮತ್ತು ದಕ್ಷಿಣ ಗೋಡೆ ಬಿದ್ದು ಹೋಗಿದೆ. ಕೋಟೆಗೆ ಪೂರ್ವ ದಿಕ್ಕಿನಲ್ಲಿ ಒಂದು ಬಾಗಿಲು ಮತ್ತು ಉತ್ತರ ದಿಕ್ಕಿನಲ್ಲಿ ಒಂದು ದಿಡ್ಡಿ ಇವೆ (ಚಿತ್ರ ೧೯೧). ಕೋಟೆಯನ್ನು ಚೌಕಾಕಾರದ ದಪ್ಪ ಕಲ್ಲುಗಳಿಂದ ಕಟ್ಟಿದೆ. ಕೆಲವು ಅನಿಯಮಿತಾಕಾರದ ಕಲ್ಲುಗಳು ಅಲ್ಲಲ್ಲಿ ಕಾಣುತ್ತವೆ (ಚಿತ್ರ ೧೯೩). ಪೂರ್ವಾಭಿಮುಖವಾಗಿರುವ ಬಾಗಿಲಿಗೆ ಅಗಲವಾದ ಚೌಕಟ್ಟಿದೆ. ಚೌಕಟ್ಟಿನ ಉತ್ತರಂಗದ ಮೇಲೆ ಸೂರ್ಯ, ಚಂದ್ರ ಮತ್ತು ಹೂವಿನ ಚಿತ್ರಗಳಿವೆ (ಚಿತ್ರ ೧೯೨). ಪ್ರವೇಶದ ಪಕ್ಕದಲ್ಲಿ ಕಟ್ಟೆಗಳಿವೆ, ಆದರೆ ಮೇಲೆ ಛಾವಣಿಯಿಲ್ಲ. ಕೋಟೆಯ ಹೊರಗೆ ಈ ಬಾಗಿಲಿನ ಈಶಾನ್ಯಕ್ಕೆ ಒಂದು ಬಂಡೆಯ ಮೇಲೆ ಒಬ್ಬ ವೀರನ ಶಿಲ್ಪವಿದೆ. ಕುದುರೆಯ ಮೇಲೆ ಕುಳಿತಿರುವ ವೀರ ಕೈಯಲ್ಲಿ ಖಡ್ಗವನ್ನು ಹಿಡಿದಿದ್ದಾನೆ. ಪಕ್ಕದಲ್ಲಿ ಅಸ್ಪಷ್ಟವಾದ ಶಾಸನವಿದೆ. ಉತ್ತರ ದಿಕ್ಕಿನ ದಿಡ್ಡಿಗೆ ಚಿಕ್ಕ ಚೌಕಟ್ಟಿದೆ. ದಿಡ್ಡಿಯ ಹತ್ತಿರ ಹೊರಭಾಗದಲ್ಲಿ ಒಂದು ಬಾವಿಯಿದೆ. ಕೋಟೆಯ ಒಳಗೆ ಪೂರ್ವ ಬಾಗಿಲಿನ ಹತ್ತಿರ ಹನುಮಂತ ಮತ್ತು ಈಶ್ವರ ಗುಡಿಗಳು ಮತ್ತು ಬಾಗಿಲಿನ ವಾಯವ್ಯಕ್ಕೆ ವೃತ್ತಾಕಾರದ ಒಂದು ಒಂಟಿ ಕೊತ್ತಳ ಇವೆ. ಕೊತ್ತಳದ ಅರ್ಧ ಭಾಗ ಬಿದ್ದಿದೆ. ಈಶ್ವರ ಗುಡಿಯ ಮುಂದೆ ಮೂರು ಪಟ್ಟಿಕೆಗಳ ವೀರಗಲ್ಲಿದೆ. ಕೆಳಗಿನ ಪಟ್ಟಿಕೆಯಲ್ಲಿ ಬಿಲ್ಲು ಬಾಣ ಹಿಡಿದ ವೀರನು ಯುದ್ಧ ನಿರತನಾಗಿದ್ದಾನೆ.

ಕೋಟೆಯ ಒಳಗೆ ಆಯತಾಕಾರದ ಮತ್ತೊಂದು ಚಿಕ್ಕ ಕೋಟೆಯಿದೆ. ಇದರ ಒಳಗೆ ದೇಸಾಯಿಯವರ ಮನೆಯಿದೆ. ಹೊರಗೆ ಬಾಗಿಲ ಹತ್ತಿರ ಹನುಮಂತನ ಗುಡಿಯಿದೆ. ಒಳ ಕೋಟೆಗೆ ಪೂರ್ವಾಭಿಮುಖವಾದ ಬಾಗಿಲಿದೆ. ಬಾಗಿಲ ಮುಂದೆ ಎರಡು ಕಟ್ಟೆಗಳಿವೆ. ಬಾಗಿಲು ಮುಂಭಾಗದಲ್ಲಿ ಆಯತಾಕಾರದಲ್ಲಿ ಮತ್ತು ಒಳಭಾಗದಲ್ಲಿ ಕಮಾನಿನಾಕಾರದಲ್ಲಿ ಇದೆ (ಚಿತ್ರ ೧೯೪). ಈ ಕೋಟೆಯನ್ನು ಚಿಕ್ಕ ಸೈಜುಗಲ್ಲುಗಳಿಂದ

ಕಟ್ಟಿದೆ. ಕೋಟೆಯ ನೈರುತ್ಯ ಮೂಲೆಯಲ್ಲಿ ಬಂಡೆಯ ಮೇಲೆ ಒಂದು ವೃತ್ತಾಕಾರದ ಕೊತ್ತಳವಿದೆ. ಈ ಕೊತ್ತಳವನ್ನು ಸಹ ಚಿಕ್ಕ ಸೈಜುಗಲ್ಲುಗಳಿಂದ ಕಟ್ಟಿದೆ. ಇದಕ್ಕೆ ಚೌಕಟ್ಟಿರುವ ಚಿಕ್ಕ ಬಾಗಿಲಿದೆ. ಗೋಡೆಯಲ್ಲಿ ಉದ್ದವಾದ ಮತ್ತು ಚಿಕ್ಕ ತೋಪು ಕಿಂಡಿಗಳಿವೆ. ಪಿಡಿ ಗೋಡೆಯಲ್ಲಿ ತೆನೆಗಳಿವೆ (ಚಿತ್ರ ೧೯೫). ಕೋಟೆಯ ಈಶಾನ್ಯ ಮೂಲೆಯಲ್ಲಿ ಒಂದು ಬಾವಿಯಿದೆ.

ಹೊರ ಕೋಟೆಯನ್ನು ಹದಿನಾರು-ಹದಿನೇಳನೇ ಶತಮಾನಗಳಲ್ಲಿ ಮತ್ತು ಒಳಕೋಟೆಯನ್ನು ಹದಿನೆಂಟು-ಹತ್ತೊಂಬತ್ತನೇ ಶತಮಾನಗಳಲ್ಲಿ ಕಟ್ಟಿದೆ.




೧೯೧. ಗುನ್ನಾಳ ಕೋಟೆ: ೧. ಬಾಗಿಲು, ೨. ಹುಲಿಗೆಮ್ಮನ ಗುಡಿ, ೩. ಬಾಗಿಲು, ೪. ಹನುಮಂತನ ಗುಡಿ, ೫. ಈಶ್ವರನ ಗುಡಿ, ೬. ಬಾಗಿಲು (ದೇಸಾಯಿ ಮನೆ), ೭. ಬಾವಿ, ೮. ಬಾವಿ



೧೯೨. ಗುನ್ನಾಳ, ಮೊದಲನೇ ಬಾಗಿಲು



೧೯೩. ಗುನ್ನಾಳ, ಹೊರಕೋಟೆ



೧೯೪. ಗುನ್ನಾಳ, ಒಳಕೋಟೆ ಬಾಗಿಲು

೧೯೫. ಗುನ್ನಾಳ. ಒಳಕೋಟೆ ನೈರುತ್ಯ ಬುರುಜು

# ೧೧. ಚಿಲಕಮುಖಿ

ಚಿಲಕಮುಖಿ ಕೊಪ್ಪಳ ತಾಲೂಕಿನಲ್ಲಿ ಕೊಪ್ಪಳದಿಂದ ಉತ್ತರಕ್ಕೆ ೨೭ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೫° ೨೯' ಉತ್ತರ ಮತ್ತು ರೇಖಾಂಶ ೭೬°೧೬' ಪೂರ್ವದಲ್ಲಿರುವ ಚಿಕ್ಕ ಗ್ರಾಮ. ಇಲ್ಲಿ ಕೋಟೆ, ದೇವಾಲಯ ಮತ್ತು ಮಸೀದಿ ಇವೆ.

ಶಿಥಿಲವಾದ ಕೋಟೆಯ ಪಶ್ಚಿಮ ಭಾಗ ಮಾತ್ರ ಉಳಿದಿದೆ. ಈ ಭಾಗದಲ್ಲಿ ಮೂರು ವೃತ್ತಾಕಾರದ ಕೊತ್ತಳಗಳಿವೆ. ಕೋಟೆಯನ್ನು ಆಯತಾಕಾರದ ಸೈಜುಗಲ್ಲುಗಳಿಂದ ಕಟ್ಟಿದೆ. ಬುರುಜಿನ ಮೇಲ್ಭಾಗದಲ್ಲಿ ಮತ್ತು ಕೈಪಿಡಿ ಗೋಡೆಯಲ್ಲಿ ಉದ್ದವಾದ ಮತ್ತು ಚಿಕ್ಕ ಬಂದೂಕು ಕಿಂಡಿಗಳಿವೆ (ಚಿತ್ರ ೧೯೬). ಗೋಡೆಯ ಕೈಪಿಡಿ ಗೋಡೆಯಲ್ಲೂ ಇಂತಹ ಕಿಂಡಿಗಳಿವೆ. ಗೋಡೆಯ ಮಧ್ಯ ಭಾಗದಲ್ಲಿಯ ಕೊತ್ತಳದ ಮೇಲೆ ಹತ್ತಲು ಪೂರ್ವ ದಿಕ್ಕಿನಲ್ಲಿ ಮೆಟ್ಟಿಲುಗಳಿವೆ. ಕೋಟೆಗೆ ಪೂರ್ವಾಭಿಮುಖವಾಗಿರುವ ಬಾಗಿಲಿದೆ. ಶಿಥಿಲವಾದ ಬಾಗಿಲಿಗೆ ಚೌಕಟ್ಟು ಅಥವಾ ಛಾವಣಿಗಳಿಲ್ಲ. ಪ್ರವೇಶದ ಎಡಭಾಗಕ್ಕೆ ಒಂದು ಕಟ್ಟೆಯಿದೆ.

ಊರಿನ ಸುತ್ತಲು ಇದ್ದ ಕೋಟೆ ಈಗ ಪಶ್ಚಿಮ ಭಾಗದಲ್ಲಿ ಮಾತ್ರ ಉಳಿದಿದೆ. ಪಶ್ಚಿಮ ಗೋಡೆಯ ಹತ್ತಿರ ಒಳಭಾಗದಲ್ಲಿ ಬಂಡೆಯ ಮೇಲೆ ಒಂದು ವೃತ್ತಾಕಾರದ ದೊಡ್ಡ ಒಂಟಿ ಕೊತ್ತಳವಿದೆ. ಕೋಟೆಯ ಒಳಗೆ ಸಂಸ್ಥಾನಿಕರ ಮನೆಯ ಅವಶೇಷಗಳು (ಚಿತ್ರ ೧೯೭), ಬಸವಣ್ಣ, ಆಂಜನೇಯ, ದುರ್ಗಮ್ಮ ಮತ್ತು ದ್ಯಾಮವ್ವನ ಗುಡಿಗಳು ಮತ್ತು ಒಂದು ಮಸೀದಿ ಇವೆ.

ಸೈಜುಗಲ್ಲುಗಳಿಂದ ಕಟ್ಟಿದ ಈ ಕೋಟೆ ಹತ್ತೊಂಬತ್ತನೇ ಶತಮಾನದ ಕೊನೆಯ ಭಾಗ ಅಥವಾ ಇಪ್ಪತ್ತನೇ ಶತಮಾನದ ಮೊದಲ ಭಾಗದ್ದಾಗಿದೆ.



೧೯೬. ಚಿಲಕಮುಖಿ, ಕೋಟೆಯ ಪಶ್ಚಿಮ ಭಾಗ



೧೯೭. ಚಿಲಕಮುಖಿ, ಸಂಸ್ಥಾನಿಕರ ಮನೆ

# ೧೨. ಇರಕಲಗಡ

ಇರಕಲಗಡ ಕೊಪ್ಪಳ ತಾಲ್ಲೂಕಿನಲ್ಲಿ ಕೊಪ್ಪಳದ ಉತ್ತರಕ್ಕೆ ೧೫ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೫° ೨೮' ಉತ್ತುರ ಮತ್ತು ರೇಖಾಂಶ ೭೬°೧೫' ಪೂರ್ವದಲ್ಲಿರುವ ಚಿಕ್ಕ ಗ್ರಾಮ. ಗ್ರಾಮದ ಪೂರ್ವಕ್ಕೆ ಬೆಟ್ಟದ ಮೇಲೆ ಸುಸ್ಥಿಯಲ್ಲಿರುವ ಚಿಕ್ಕ ಕೋಟೆಯಿದೆ. ಸಂಪೂರ್ಣವಾಗಿ ಬೆಟ್ಟದ ಮೇಲಿರುವ ಕೋಟೆ ಗಿರಿದುರ್ಗಕ್ಕೆ ಒಳ್ಳೆ ಉದಾಹರಣೆ. ಕೋಟೆ ಯೊಳಗೆ ಕಣಜ, ಬಾವಿ, ಕೊಳ ಮತ್ತು ಇತರ ಕಟ್ಟಡಗಳ ಅವಶೇಷಗಳಿವೆ. ಗ್ರಾಮದಲ್ಲಿ ದೇವಾಲಯಗಳು ಮತ್ತು ವೀರಗಲ್ಲುಗಳಿವೆ.

### ಐತಿಹಾಸಿಕ ಹಿನ್ನೆಲೆ

ಹದಿನಾಲ್ಕನೇ ಶತಮಾನದಲ್ಲಿ ವಿಜಯನಗರದ ನರಸನಾಯಕನು ಈ ಕೋಟೆಯನ್ನು ಕಟ್ಟಿಸಿದನೆಂದು ಸ್ಥಳೀಯವಾಗಿ ಹೇಳಲಾಗುತ್ತದೆ. ತನಗೆ ಆಪತ್ಕಾಲದಲ್ಲಿ ಸಹಾಯ ಮಾಡಿದ ಸುರಪುರದ ಮಂಡಗ್ಗೆ ತಿಮ್ಮಪ್ಪನಾಯಕನಿಗೆ ಕೋಟೆಯನ್ನು ಕೊಡುಗೆಯಾಗಿ ಕೊಟ್ಟನು. ಮುಂದೆ ಕೋಟೆಯನ್ನು ಬಿಜಾಪುರದ ಆದಿಲ್ ಶಾಹಿ ಅರಸರ ಸೈನ್ಯಾಧಿಕಾರಿ ಆಲಮ್‌ಗೀರ್ ಅಹಮ್ಮದ್‌ನು ಗೆದ್ದುಕೊಂಡನು. ಆಲಮ್ ಗೀರ್‌ನು ಕೋಟೆಯ ಪಕ್ಕದಲ್ಲಿ ತನ್ನ ಹೆಸರಿನಲ್ಲಿ ಗ್ರಾಮವನ್ನು ಕಟ್ಟಿಸಿದನು. ಅದು ಇಂದಿಗೂ ಯಲಮಗೇರಿಯಾಗಿ ಉಳಿದಿದೆ. ಹದಿನೇಳನೇ ಶತಮಾನದಲ್ಲಿ ಛತ್ರಪತಿ ಶಿವಾಜಿಯು ಈ ಕೋಟೆಯನ್ನು ವಶಪಡಿಸಿಕೊಂಡನು.[೧]

### ಕೋಟೆ

ಕೋಟೆಯನ್ನು ಬೆಟ್ಟದ ಮೇಲಿನ ಸಮತಟ್ಟಾದ ಸ್ಥಳದಲ್ಲಿ ನಿರ್ಮಿಸಿದೆ. ಇಲ್ಲಿ ಲಭ್ಯವಾದ ಹೆಚ್ಚಿನ ಸ್ಥಳವನ್ನು ಉಪಯೋಗಿಸಿಕೊಳ್ಳುವ ದೃಷ್ಟಿಯಿಂದ ಸಮತಟ್ಟಾದ ಸ್ಥಳದ ಸುತ್ತ ಬೆಟ್ಟದ ಅಂಚಿನಲ್ಲಿ ಕೋಟೆಯನ್ನು ಕಟ್ಟಿರುವುದರಿಂದ ಕೋಟೆಯು ಬೆಟ್ಟದ ಆಕಾರವನ್ನೇ ಹೊಂದಿದೆ (ಚಿತ್ರ ೧೯೮). ಆದುದರಿಂದ ಇದಕ್ಕೆ ಯಾವುದೇ ನಿರ್ದಿಷ್ಟವಾದ ಆಕಾರವಿಲ್ಲ. ಬೆಟ್ಟದ ಅಂಚಿನಲ್ಲಿಯ ಕೆಲವು ದೊಡ್ಡ ಗುಂಡುಕಲ್ಲುಗಳನ್ನು ಸೇರಿಸಿಕೊಂಡು ಕೋಟೆಗೋಡೆಯನ್ನು ಕಟ್ಟಿದೆ. ಕೋಟೆಯನ್ನು ಚೌಕಾಕಾರದ ದಪ್ಪ ಕಲ್ಲು ಮತ್ತು ಆಯತಾಕಾರದ ಚಿಕ್ಕ ಕಲ್ಲುಗಳಿಂದ ಕಟ್ಟಿದೆ. ಕಲ್ಲುಗಳ ಜೋಡಣೆಯಲ್ಲಿ ಗಾರೆಯನ್ನು ಬಳಸದೆ ಸಂದಿಗಳಲ್ಲಿ ಕಲ್ಲಿನ ಚಕ್ಕೆಗಳನ್ನು ಬಳಸಿದೆ. ಕೋಟೆಯ ಮೇಲಿನ ಕೈಪಿಡಿ ಗೋಡೆಯಲ್ಲಿ ತೆನೆಗಳಿಲ್ಲ. ಕೈಪಿಡಿಗೋಡೆಯಲ್ಲಿನ ಬಂದೂಕು ಕಿಂಡಿಗಳು ಆಯತಾಕಾರದಲ್ಲಿ ಬಹಳ ಉದ್ದವಾಗಿವೆ. ಇವುಗಳನ್ನು ಕೋಟೆ ಬದಿಯಲ್ಲಿಯ ವೈರಿಗೆ ಗುರಿಯಿಡಲು




೧೯೮. ಇರಕಲಗಡ ಕೋಟೆ: ೧. ಬಾಗಿಲು, ೨. ಬಾವಿ ೩. ಒಂಟಿಕೊತ್ತಳ, ೪. ಕಟ್ಟಡ, ೫. ಕಾವಲುಗಾರರ ಗೂಡು, ೬. ದಿಡ್ಡಿ ಬಾಗಿಲು ೭. ಕಣಜ, ೮. ಕೊಳ, ೯. ಕಾವಲು ಗೋಪುರ

ಅನುಕೂಲವಾಗುವಂತಹ ತೀಕ್ಷ್ಣ(acute)ವಾದ ಕೋನದಲ್ಲಿ ರಚಿಸಲಾಗಿದೆ. ಗೋಡೆಯ ಮೇಲೆ ಕೈಪಿಡಿಗೋಡೆಯ ಪಕ್ಕದಲ್ಲಿ ನಡೆದಾಡಲು ಅಗಲವಾದ ದಾರಿಯಿದೆ. ಕೋಟೆಯಲ್ಲಿ ಬಾಗಿಲು, ದಿಡ್ಡಿ, ಒಂದು ಚೌಕಾಕಾರದ ಮತ್ತು ಕೆಲವು ವೃತ್ತಾಕಾರದ ಕೊತ್ತಳಗಳಿವೆ.

ಬೆಟ್ಟವು ಉತ್ತರ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಕಡಿದಾಗಿರುವುದರಿಂದ ಪಶ್ಚಿಮ ಮತ್ತು ಪೂರ್ವ ದಿಕ್ಕುಗಳಿಂದ ಮಾತ್ರ ಹತ್ತಲು ಸಾಧ್ಯ. ಪೂರ್ವಕ್ಕೆ ಬಾಗಿಲು ಮತ್ತು ಪಶ್ಚಿಮಕ್ಕೆ ದಿಡ್ಡಿ ಇವೆ (ಚಿತ್ರ ೨೦೨). ಪಶ್ಚಿಮಕ್ಕಿರುವ ಬಾಗಿಲು ಉತ್ತರಾಭಿಮುಖವಾಗಿದೆ. ಬಾಗಿಲು ವೈರಿಗೆ ಕಾಣದಂತೆ ಮುಂದೆ ಭಾಗಶಃ ವೃತ್ತಾಕಾರದ ಗೋಡೆಯನ್ನು ಕಟ್ಟಿ ಮರೆಮಾಡಿದೆ. ಹೊರಭಾಗದಲ್ಲಿಯ ಎರಡು ವೃತ್ತಾಕಾರದ ಕೊತ್ತಳಗಳು ಬಾಗಿಲನ್ನು ರಕ್ಷಿಸುತ್ತವೆ (ಚಿತ್ರ ೨೦೧). ಬಾಗಿಲ ಚೌಕಟ್ಟನ್ನು ಸರಳವಾದ ತೊಲೆ, ಉತ್ತರಂಗ ಮತ್ತು ಬೋದಿಗೆಗಳಿಂದ ನಿರ್ಮಿಸಿದೆ. ಬಾಗಿಲ ಪಕ್ಕದಲ್ಲಿ ಗೋಡೆಯ ಕಲ್ಲಿನ ಮೇಲೆ ಕಾಮಭಂಗಿಯಲ್ಲಿ ಕುಳಿತ ಹೆಂಗಸಿನ ಅಪೂರ್ಣವಾದ ಶಿಲ್ಪವಿದೆ. ಪಶ್ಚಿಮ ಭಾಗದಲ್ಲಿ ಉತ್ತರಾಭಿಮುಖವಾದ ಚಿಕ್ಕ ದಿಡ್ಡಿ ಬಾಗಿಲಿದೆ. ಇದರ ಚೌಕಟ್ಟು ಸರಳವಾಗಿದೆ. ಕೋಟೆಗೋಡೆಯಲ್ಲಿ ಗೋಡೆಯ ಮಧ್ಯದಲ್ಲಿ ಕಾವಲುಗಾರರ ಕೊಠಡಿಗಳಿವೆ (ಚಿತ್ರ ೨೦೩). ಆಳೆತ್ತರದ ಆಯತಾಕಾರದ ಕೊಠಡಿಗಳಿಗೆ ಬಾಗಿಲ ಚೌಕಟ್ಟುಗಳಿಲ್ಲ. ಇಂತಹ ಕೊಠಡಿಗಳು ಉತ್ತರ ದಿಕ್ಕಿನ ಗೋಡೆಯಲ್ಲಿ ಮೂರು ಮತ್ತು ದಕ್ಷಿಣ ದಿಕ್ಕಿನ ಗೋಡೆಯಲ್ಲಿಎರಡು ಇವೆ.

ಕೋಟೆಯೊಳಗೆ ಮಧ್ಯಭಾಗದಲ್ಲಿ ಸ್ವಲ್ಪ ದಕ್ಷಿಣಕ್ಕೆ ಅರಮನೆಯಂತಹ ಕಟ್ಟಡದ ಅವಶೇಷಗಳಿವೆ. ಉತ್ತರಾಭಿಮುಖವಾಗಿರುವ ಕಟ್ಟಡದ ಮುಂದೆ ಎರಡು ಕಟಕಟೆ (balustrade) ಕಲ್ಲುಗಳು ಬಿದ್ದಿವೆ. ಇವು ಸುರುಳಿಯಾಕಾರದಲ್ಲಿದ್ದು, ಒಂದರ ಬದಿಯನ್ನು ಆನೆ ಮತ್ತೊಂದರ ಬದಿಯನ್ನು ಹೂವಿನಿಂದ ಅಲಂಕರಿಸಿದೆ. ಮೆಟ್ಟಿಲುಗಳ ಪಕ್ಕದಲ್ಲಿರಬೇಕಾಗಿದ್ದ ಈ ಕಲ್ಲುಗಳು ಸ್ಥಾನಪಲ್ಲಟವಾಗಿ ಬಿದ್ದಿವೆ. ಕಟ್ಟಡದ ಒಳಭಾಗ ಎರಡು ಮಟ್ಟಗಳಲ್ಲಿದೆ. ಮುಂದಿನ ಕೆಳಮಟ್ಟದ ಭಾಗದ ಮುಂದೆ ನಯವಾಗಿ ಕೆತ್ತಿದ ಮೂರು ಸಾಧಾರಣ ಪಟ್ಟಿಕೆಗಳ ಅಧಿಷ್ಠಾನವಿದೆ. ಇದರ ಮಧ್ಯದ ಪಟ್ಟಿಕೆ ಕಂಠದಂತೆ ಹಿಂದೆ ಸರಿದಿದೆ. ಹಿಂದಿನ ಭಾಗದಲ್ಲಿರುವ ಎತ್ತರ ಮಟ್ಟದ ಭಾಗದ ಮುಂದೆ ಮತ್ತೊಂದು ಅಧಿಷ್ಠಾನವಿದೆ. ಇದರ ಮೇಲಿನ ಪಟ್ಟಿಕೆ ಪದ್ಮಾಕಾರದಲ್ಲಿದ್ದು ಕೆಳಗಿನ ಪಟ್ಟಿಕೆಗಳು ಮಣ್ಣಿನಲ್ಲಿ ಮುಚ್ಚಿವೆ. ಈ ಮಟ್ಟದ ಹಿಂಭಾಗದಲ್ಲಿ ಒಂದು ಆಯತಾಕಾರದ ಕೊಠಡಿಯಿದೆ. ಕೆಳಮಟ್ಟದ ಭಾಗದ ಪಶ್ಚಿಮ ಭಾಗದಲ್ಲಿ ಮತ್ತೊಂದು ಆಯತಾಕಾರದ ಕೊಠಡಿಯಿದೆ. ಎರಡು ಮಟ್ಟಗಳ ಮುಂಭಾಗ ಹಜಾರದಂತೆ ಇದ್ದು, ಕಂಬಗಳಿಂದ ನಿರ್ಮಿತವಾಗಿತ್ತು. ಇಂತಹ ಕಟ್ಟಡಗಳನ್ನು ಹಂಪೆಯಲ್ಲಿ



೧೯೯. ಇರಕಲಗಡ, ಕೋಟೆಯ ಉತ್ತರ ಭಾಗ



೨೦೦. ಇರಕಲಗಡ. ನೈರುತ್ಯ ಭಾಗ



೨೦೧. ಇರಕಲಗಡ. ಬಾಗಿಲು



೨೦೨. ಇರಕಲಗಡ. ದಿಡ್ಡಿ



೨೦೩. ಇರಕಲಗಡ, ಕಾವಲುಗಾರರ ಗೂಡು



೨೦೪. ಇರಕಲಗಡ, ಕಣಜ






೨೦೫. ಇರಕಲಗಡ, ಕಣಜ






೨೦೬. ಇರಕಲಗಡ, ಬಾವಿ

ನೋಡಬಹುದು. ಈ ಕಟ್ಟಡದ ಹತ್ತಿರ ಗುಂಡುಕಲ್ಲುಗಳು ಬಿದ್ದಿವೆ. ಗೋಲಾಕಾರದ ಈ ಕಲ್ಲುಗಳನ್ನು ಕವಣೆಗಲ್ಲು ಅಥವಾ ತೋಪುಗಳಿಂದ ಸಿಡಿಸುವ ಗುಂಡುಗಳಾಗಿ ಉಪಯೋಗಿಸುತ್ತಿದ್ದರು.

ಉತ್ತರ ಗೋಡೆಯ ಪಕ್ಕದಲ್ಲಿ ಬಂಡೆಯ ಮೇಲೆ ಸುಮಾರಾಗಿ ಆಯತಾಕಾರದ ಕಟ್ಟಡವಿದೆ (ಚಿತ್ರ ೨೦೫). ಕಲ್ಲುಗಳಿಂದ ಕಟ್ಟಿ, ಗಾರೆ ಮಾಡಿದ ಸುಮಾರು ಮೂರು ಮೀ. ಎತ್ತರದ ಗೋಡೆಗಳ ಮೇಲ್ಭಾಗದಲ್ಲಿ ನಯಗೊಳಿಸಿದ, ಗೋಡೆಗಿಂತ ಸ್ವಲ್ಪ ಅಗಲವಾದ, ಚಪ್ಪಡಿಗಳನ್ನು ಹಾಕಲಾಗಿದೆ. ಚಪ್ಪಡಿಗಳ ಮೇಲೆ ನಿರ್ದಿಷ್ಟ ಅಂತರದಲ್ಲಿ ಕಂಬಗಳನ್ನು ನಿಲ್ಲಿಸಲು ಮಾಡಿದ ಗುರುತುಗಳಿವೆ. ಬಾಗಿಲಿಲ್ಲದ ಈ ಕಟ್ಟಡದ ಗೋಡೆಯ ಮೇಲೆ ಹತ್ತಲು ಪೂರ್ವ ಗೋಡೆಯಿಂದ ಮುಂದೆ ಚಾಚಿದ ಮೆಟ್ಟಿಲುಗಳಿವೆ. ಕಂಬ ಮತ್ತು ಚಿಕ್ಕ ಕಲ್ಲುಗಳ ಗೋಡೆಯ ಮೇಲ್ಕಟ್ಟಡವನ್ನು ಹೊಂದಿದ್ದ ಈ ಕಟ್ಟಡವನ್ನು ಧಾನ್ಯವನ್ನು ಸಂಗ್ರಹಿಸಲು ಉಪಯೋಗಿಸುತ್ತಿದ್ದರು (ಚಿತ್ರ ೨೦೪). ಮೇಲಿನ ಕಟ್ಟಡ ಈಗ ಉಳಿದಿಲ್ಲ. ಕೋಟೆಯ ಮಧ್ಯದಲ್ಲಿ ಬಂಡೆಯ ಮೇಲೆ ಕಟ್ಟಿದ ವೃತ್ತಾಕಾರದ ಕಾವಲು ಗೋಪುರವಿದೆ. ಕಣಜದ ದಕ್ಷಿಣಕ್ಕೆ ಒಂದು ನೀರಿನ ಕೊಳವಿದೆ. ನೈಸರ್ಗಿಕವಾಗಿ ಆಳವಾದ ಗುಂಡಿಗೆ ಅಲ್ಲಲ್ಲಿ ಕಲ್ಲು ಮತ್ತು ಗಾರೆಯಿಂದ ಕಟ್ಟಿ ಒಳಭಾಗಕ್ಕೆ ಗಾರೆ ಮಾಡಲಾಗಿದೆ. ಕೊಳದ ಆಗ್ನೇಯ ಮೂಲೆಯಲ್ಲಿ ಬಂಡೆಯ ಮೇಲೆ ಒಂದು ಅಸ್ಪಷ್ಟವಾದ ಶಾಸನವಿದೆ. ಕೊಳ ಮತ್ತು ಕಣಜಗಳ ಮಧ್ಯದಲ್ಲಿ ಒಂದು ಚಿಕ್ಕ ನೀರಿನ ತೊಟ್ಟಿಯಿದೆ. ತೊಟ್ಟಿಯ ಉತ್ತರ ಬದಿಯ ಬಂಡೆಯ ಮೇಲೆ ಆಂಜನೇಯನ ಚಿಕ್ಕ ಉಬ್ಬು ಶಿಲ್ಪವಿದೆ.

ಪಶ್ಚಿಮ ದಿಕ್ಕಿನಿಂದ ಕೋಟೆಯೊಳಗೆ ಬಂದಾಗ ಎದುರಿಗೆ ದೊಡ್ಡದಾದ ಮತ್ತು ಆಳವಾದ ಬಾವಿಯಿದೆ. ಬಾವಿಯ ಕೆಳಭಾಗವನ್ನು ಚೆನ್ನಾಗಿ ನಯಗೊಳಿಸಿದ ದೊಡ್ಡ ಕಲ್ಲಿನಿಂದ ಕಟ್ಟಿದೆ (ಚಿತ್ರ ೨೦೬). ಕಲ್ಲುಗಳ ಬದಿಗಳನ್ನು ಒಂದಕ್ಕೊಂದು ಅಚ್ಚುಕಟ್ಟಾಗಿ ಸೇರುವಂತೆ ಕಟ್ಟಿರುವುದರಿಂದ ಮಧ್ಯದಲ್ಲಿ ಸಂದಿಗಳಿಲ್ಲ. ಆದರೆ ಮೇಲಿನ ಭಾಗವನ್ನು ನಯಗೊಳಿಸಿದ ಕಲ್ಲುಗಳಿಂದ ಕಟ್ಟಿದೆ. ಬಾವಿಯೊಳಗೆ ಇಳಿಯಲು ಪೂರ್ವ ಗೋಡೆಯಬಳಿ ಉತ್ತರದಿಂದ ದಕ್ಷಿಣಕ್ಕೆ ಅಗಲವಾದ ಮೆಟ್ಟಿಲುಗಳಿವೆ. ಬಾವಿಯ ವಾಯವ್ಯ ಮೂಲೆಯ ಬಳಿಯಿರುವ ಬಂಡೆಯ ಮೇಲೆ ಆಂಜನೇಯನ ರೇಖಾಚಿತ್ರವಿದೆ. ಆಂಜನೆಯ ಚಿತ್ರ ಬಾವಿಯ ಕಡೆ ಪೂರ್ವಕ್ಕೆ ಮುಖಮಾಡಿದೆ. ಇವಲ್ಲದೆ ಇನ್ನೂ ಕೆಲವು ಕಟ್ಟಡಗಳ ಅವಶೇಷಗಳಿವೆ. ಕೋಟೆಯ ಹೊರಗೆ ನೈರುತ್ಯಕ್ಕೆ ಬಂಡೆಯ ಮೇಲೆ ಒಂದು ಒಂಟಿ ಕೊತ್ತಳವಿದೆ.

ಕೋಟೆಯ ಹೊರಗೆ ಪಶ್ಚಿಮಕ್ಕೆ ಕಲ್ಲಾಸರೆಯಲ್ಲಿ ಎರಡು ಶಿಲ್ಪಗಳನ್ನು ಪ್ರತಿಷ್ಠಾಪಿಸಿ ಪೂಜಿಸಲಾಗುತ್ತಿದೆ. ಅವುಗಳಲ್ಲಿ ಒಂದು ಕೈಯಲ್ಲಿ ಖಡ್ಗ ಮತ್ತು ಕಪಾಲ ಹಿಡಿದು ಕುಳಿತ ದೇವಿಯ ದುಂಡು ಶಿಲ್ಪ. ಈ ದೇವಿಯನ್ನು

ಚೌಡಿಮಲ್ಲಮ್ಮನೆಂದು ಪೂಜಿಸುತ್ತಾರೆ. ಮತ್ತೊಂಬು ಶಂಕುವಿನಾಕಾರದ ಎತ್ತರದ ಕಿರೀಟವನ್ನು ತೊಟ್ಟು ಕೈಯಲ್ಲಿ ಖಡ್ಗವನ್ನು ಹಿಡಿದು ನಿಂತಿರುವ ವೀರನ ಉಬ್ಬು ಶಿಲ್ಪ. ಇದೊಂದು ವೀರಗಲ್ಲು. ಇದನ್ನು ಸೋಮ ಲಿಂಗೇಶ್ವರನೆಂದು ಪೂಜಿಸುತ್ತಾರೆ. ಕೆಳಗೆ ಊರಿನ ಮಧ್ಯದಲ್ಲಿ ರಾಯಪ್ಪ ದೇಸಾಯಿ ಗುಡಿಯಿದೆ. ಗುಡಿಯಲ್ಲಿ ಈಟಿ ಮತ್ತು ಗುರಾಣಿ ಹಿಡಿದು ಕುದುರೆ ಮೇಲೆ ಕುಳಿತ ವ್ಯಕ್ತಿಯನ್ನು ದೇಸಾಯಿ ಮನೆತನದವರು ಪೂಜಿಸುತ್ತಾರೆ. ಇದೊಂದು ವೀರಗಲ್ಲು. ವೀರನ ಹಿಂದೆ ನಿಂತ ವ್ಯಕ್ತಿ ಕೊಡೆಯನ್ನು ಹಿಡಿದಿದ್ದಾನೆ.

ಕೋಟೆಗೋಡೆಯ ದಪ್ಪ ಕಲ್ಲಿನ ರಚನೆ ಮತ್ತು ಬಂದೂಕು ಕಿಂಡಿಗಳನ್ನು ಗಮನಿಸಿದರೆ ಕೋಟೆಯನ್ನು ಹದಿನಾರು-ಹದಿನೇಳನೇ ಶತಮಾನಗಳಲ್ಲಿ ಕಟ್ಟಿಸಲಾಗಿದೆ.

### ಟಿಪ್ಪಣಿಗಳು

೧. ಪಾಟೀಲ ಕಲ್ಲನಗೌಡ ತಿಪ್ಪನಗೌಡ, ೧೯೯೪, "ಇರಕಲ್ ಗಡ ಕೋಟೆ," *ಇತಿಹಾಸ ದರ್ಶನ*, ಸಂ. ೯, ಪು. ೧೮೩-೧೮೪; ಮೂಲಿಮನಿ ಬಸವರಾಜ ವಿ., "ಇರಕಲ್ಲಗಡ ಕೋಟೆಯ ನೋವು ನಿಟ್ಟುಸಿರಿನ ಕಥೆ," *ಸಂಯುಕ್ತ ಕರ್ನಾಟಕ*, ದಿನಾಂಕ ೧೦-೫-೧೯೯೮.

# ೧೩. ಮಾದಿನೂರು

ಮಾದಿನೂರು ಕೊಪ್ಪಳ ತಾಲೂಕಿನಲ್ಲಿ ಕೊಪ್ಪಳದ ಉತ್ತರಕ್ಕೆ ಹತ್ತು ಕಿ.ಮೀ. ದೂರದಲ್ಲಿ ಅಕ್ಷಾಂಶ ೧೫° ೮' ಉತ್ತರ ಮತ್ತು ರೇಖಾಂಶ ೭೬° ೬' ಪೂರ್ವದಲ್ಲಿದೆ. ಹತ್ತರಿಂದ ಹನ್ನೆರಡನೇ ಶತಮಾನದವರೆಗೆ ವಿದ್ಯಾಕೇಂದ್ರ ಮತ್ತು ಆಡಳಿತ ಕೇಂದ್ರವಾಗಿದ್ದ ಈ ಊರು ಈಗ ತನ್ನ ಮಹತ್ವವನ್ನು ಕಳೆದುಕೊಂಡಿದೆ.

ಶಾಸನಗಳಲ್ಲಿ ಈ ಊರಿನ ಹೆಸರು ಮೊದೆಯನೂರು, ಮೊದೆಗನೂರು ಮತ್ತು ಮುದಗನೂರು ಎಂದು ಉಲ್ಲೇಖಗೊಂಡಿದೆ. ಕಲ್ಯಾಣಚಾಲುಕ್ಯ ಅರಸ ಎರಡನೇ ತೈಲ ಬ್ರಹ್ಮಾಂಡಕ್ರತು ಆಚರಿಸುವ ಸಂದರ್ಭದಲ್ಲಿ ಕ್ರಿ.ಶ. ೯೭೩ರಲ್ಲಿ ಮೊದೆಯನೂರನ್ನು ರೇವಯ್ಯ ದ್ವೇದಿ ಚಟ್ಟೋಪಾಧ್ಯಾಯ ಸೋಮಯಾಜಿಗೆ ದಾನವಾಗಿ ಕೊಟ್ಟನು. ರೇವಯ್ಯ ಇದನ್ನು ಅಗ್ರಹಾರವನ್ನಾಗಿ ಮಾಡಿ ತ್ರೈಪುರುಷ ದೇವಾಲಯವನ್ನು ಕಟ್ಟಿಸಿದನು.[೧] ವಿದ್ಯಾಕೇಂದ್ರವಾಗಿದ್ದ ಊರು ಮುಂದೆ ಕಲಚೂರಿ ಅರಸರ ರಾಜಧಾನಿಯಾಗಿ ಬೆಳೆಯಿತು. ಕಲಚೂರಿ ಅರಸ ಬಿಜ್ಜಳನ ಕಾಲದಲ್ಲಿ ಕಲ್ಯಾಣದಲ್ಲಿ ಕ್ರಾಂತಿಯಾದ ನಂತರ ರಾಜಧಾನಿಯನ್ನು ಮಾದಿನೂರಿಗೆ ಸ್ಥಳಾಂತರಿಸಿದಂತೆ ತೋರುತ್ತದೆ.[೨] ಕಲಚೂರಿ ಅರಸ ಎರಡನೆಯ ಸಂಕಮದೇವನು ಕ್ರಿ.ಶ. ೧೧೭೭ ರಿಂದ ೧೧೮೦ರ ವರೆಗೆ ಮೊದೆಗನೂರಿನಿಂದ ಆಳುತ್ತಿದ್ದನು.[೩]

ಮಾದಿನೂರಿನಲ್ಲಿ ಬಲಿಷ್ಠವಾದ ಕೋಟೆ ಇದ್ದುದು ಹೊಯ್ಸಳರ ಶಾಸನಗಳಿಂದ ಸ್ಪಷ್ಟವಾಗುತ್ತದೆ. ಹೊಯ್ಸಳ ವಿಷ್ಣುವರ್ಧನ ಗೆದ್ದ ಬಳ್ಳಾರಿ, ಉಚ್ಚಂಗಿ, ರಾಯಚೂರು ಮುಂತಾದ ಕೋಟೆಗಳ ಪಟ್ಟಿಯಲ್ಲಿ ಇದು ಸೇರಿದೆ. ಆದುದರಿಂದ ಹನ್ನೆರಡನೇ ಶತಮಾನದಲ್ಲಿ ಇದು ಪ್ರಸಿದ್ಧವಾದ ಕೋಟೆಯಾಗಿತ್ತು.[೪] ಆದರೆ ಈ ಕೋಟೆಯ ಅವಶೇಷಗಳು ಈಗ ಉಳಿದಿಲ್ಲ.

## ಟಿಪ್ಪಣಿಗಳು

೧. Patil Channabasappa S. and Vinoda C. Patil (Eds), 1998, *Inscriptions of Koppal District,* No. 242; ARIE, 1953-54, No. B 235; *HAS,* 18, No.11; *ಶಾಪ* ಸಂ. ೬, ದೇವರ ಕೊಂಡಾರೆಡ್ಡಿ (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨, ಕೊಪ್ಪಳ ಜಿಲ್ಲೆ,* ಕೊಪ್ಪಳ ೨೬

೨. *HAS,* 18, p. 10.

೩. Patil Channabasappa S. and Vinoda C. Patil, Nos. 119-122; *ARIE,* 1964-65, Nos. B 430-433; *ಶಾಪ* ಸಂ. ೨೨, देवरकोंडारेड्डि, *ಪೂರ್ವೋಕ್ತ,* ಕೊಪ್ಪಳ ತಾಲೂಕ ಸಂ. ೩.

೪. *EC,* IV, Nagamangala 70; V, Belur 137.

# ೧೪. ಕೊಪ್ಪಳ

ಜಿಲ್ಲಾ ಕೇಂದ್ರವಾದ ಕೊಪ್ಪಳ ಅಕ್ಷಾಂಶ ೧೫° ೧೯' ಉತ್ತರ ಮತ್ತು ೭೬° ೧೧' ಪೂರ್ವದಲ್ಲಿದೆ. ಪ್ರಾಗೈತಿಹಾಸಿಕ ಕಾಲದಿಂದ ಇಂದಿನವರೆಗೆ ನಿರಂತರವಾಗಿ ಮಾನವನ ಬೀಡಾದ ಈ ಸ್ಥಳ ಮೌರ್ಯ ಮತ್ತು ಕರ್ನಾಟಕದ ವಿವಿಧ ಅರಸು ಮನೆತನಗಳೊಂದಿಗೆ ನಿಕಟ ಸಂಬಂಧ ಹೊಂದಿ, ಸುದೀರ್ಘವಾದ ಇತಿಹಾಸವನ್ನು ಹೊಂದಿದೆ. ಪ್ರಾರಂಭದಲ್ಲಿ ಬೌದ್ಧ ಧರ್ಮದ ನೆಲೆಯಾಗಿದ್ದು, ನಂತರ ಜೈನ ಧರ್ಮದ ಪ್ರಸಿದ್ಧ ಕೇಂದ್ರವಾಗಿ ಬೆಳೆಯಿತು. ಶೈವ, ವೈಷ್ಣವ ದೇವಾಲಯಗಳೊಂದಿಗೆ ವೀರಶೈವ ಮಠವನ್ನೂ ಇಲ್ಲಿ ಕಟ್ಟಲಾಯಿತು. ಮುಂದೆ ಮುಸ್ಲಿಮರ ಆಳ್ವಿಕೆಯಲ್ಲಿ ಇಸ್ಲಾಮ ಧರ್ಮವೂ ಇಲ್ಲಿಗೆ ಹಬ್ಬಿತು. ಈ ಎಲ್ಲ ಧರ್ಮಗಳ ಕುರುಹುಗಳನ್ನು ದೇವಾಲಯ, ಬಸದಿ, ಮಠ, ಮಸೀದಿ, ಶಾಸನ ಮುಂತಾದ ರೂಪಗಳಲ್ಲಿ ಈಗಲೂ ಇಲ್ಲಿ ನೋಡಬಹುದು. ಮೊದಲು ಚಿಕ್ಕ ಪ್ರದೇಶದ ಆಡಳಿತ ಕೇಂದ್ರವಾಗಿದ್ದು, ನಂತರ ದೊಡ್ಡ ಪ್ರದೇಶದ ಕೇಂದ್ರವಾಗಿ ಬೆಳೆದು ಕೋಟೆ, ಕೆರೆ ಬಾವಿಗಳ ನಿರ್ಮಾಣಕ್ಕೆ ಕಾರಣವಾಯಿತು.

### ಐತಿಹಾಸಿಕ ಹಿನ್ನೆಲೆ

ಕೊಪ್ಪಳ ಸುತ್ತಮುತ್ತ ಇತಿಹಾಸ ಪೂರ್ವ ಕಾಲದ ಕೆಂಪು, ಕಪ್ಪು ಮತ್ತು ಬಣ್ಣದ ಮಡಕೆ ಚೂರುಗಳು ಮತ್ತು ಇಲ್ಲಿಯ ಬೆಟ್ಟದ ಗವಿಗಳಲ್ಲಿ ಇತಿಹಾಸ ಪೂರ್ವದ ವರ್ಣಚಿತ್ರಗಳಿವೆ.[೧] ಇತಿಹಾಸ ಕಾಲ ಪ್ರಾರಂಭವಾದಾಗ ಕೊಪ್ಪಳ ಮೌರ್ಯ ಚಕ್ರವರ್ತಿ ಅಶೋಕನ ಸಾಮ್ರಾಜ್ಯದಲ್ಲಿತ್ತು. ಅಶೋಕನ ಎರಡು ಶಿಲಾಶಾಸನಗಳು ಕೊಪ್ಪಳದಲ್ಲಿವೆ.[೨] ಆಗ ಇಲ್ಲಿ ಬೌದ್ಧ ಧರ್ಮ ಪ್ರಚಲಿತದಲ್ಲಿತ್ತು. ನಂತರದಲ್ಲಿ ಇದು ಶಾತವಾನರ ಆಳ್ವಿಕೆಗೆ ಒಳಪಟ್ಟಿತ್ತು. ಈ ಕಾಲದ ಶಾಸನವುಳ್ಳ ತಾಮ್ರದ ಪಾತ್ರೆಯಲ್ಲಿ ಬೆಳ್ಳಿಯ ಮುದ್ರಾಂಕಿತ (Punchmarked) ನಾಣ್ಯಗಳು ಕೊಪ್ಪಳ ತಾಲೂಕಿನ ಚಿಕ್ಕ ಸಿಂದೋಗಿಯಲ್ಲಿ ದೊರೆತಿವೆ.[೩]

ಕದಂಬರ ಕಾಲದಲ್ಲಿಯೂ ಕೊಪ್ಪಳ ಪ್ರಾಮುಖ್ಯತೆ ಪಡೆದಿತ್ತು. ಕದಂಬ ಮಯೂರವರ್ಮನ ಚಂದ್ರವಳ್ಳಿಯ ಶಾಸನವನ್ನು ಕೊಪ್ಪಳದ ಲಿಪಿಕಾರ ಚಮ ಬರೆದಿದ್ದಾನೆ. ಕೊಪ್ಪಳವನ್ನು ಈ ಶಾಸನದಲ್ಲಿ ಕುಪಣ ಎಂದು ಉಲ್ಲೇಖಿಸಿದೆ.[೪] ಬಾದಾಮಿ ಚಾಲುಕ್ಯ ಅರಸ ವಿಜಯಾದಿತ್ಯನ ಕಾಲದ ಶಾಸನದಲ್ಲೂ ಕೊಪಣದ ಉಲ್ಲೇಖವಾಗಿದೆ.[೫] ಗಂಗ ಮತ್ತು ರಾಷ್ಟ್ರಕೂಟರ ಕಾಲದಲ್ಲಿ ಪ್ರಸಿದ್ಧ ಜೈನ ಕೇಂದ್ರವಾಗಿ ಬೆಳೆಯಿತು. ಇದನ್ನು ಶಾಸನಗಳಲ್ಲಿ ಆದಿತೀರ್ಥ, ಕುಪಣತೀರ್ಥ ಮತ್ತು ಕೊಪಣತೀರ್ಥವೆಂದು ಉಲ್ಲೇಖಿಸಿದೆ. ಇಲ್ಲಿ ಅನೇಕ ಬಸದಿಗಳನ್ನು ಮತ್ತು ನಿಸಿದಿಗಳನ್ನು ಕಟ್ಟಿಸಲಾಯಿತು. ಗಂಗ ವಂಶದವರಿಗೆ ಸಂಬಂಧಿಸಿದ ಹಲವು ನಿಸಿದಿಗಳು

ಇಲ್ಲಿವೆ.[೬] ರಾಷ್ಟ್ರಕೂಟ ಅರಸ ನೃಪತುಂಗನ ಕಾಲದ ಕವಿರಾಜಮಾರ್ಗದಲ್ಲಿಯೂ ಕೊಪಣ ನಗರದ ವರ್ಣನೆ ಇದೆ.[೭]

ಕಲ್ಯಾಣ ಚಾಲುಕ್ಯ ಸೋಮೇಶ್ವರನ ಕಾಲದಲ್ಲಿ ಕ್ರಿ.ಶ. ೧೦೫೪ರಲ್ಲಿ ಚಾಲುಕ್ಯ ಮತ್ತು ಚೋಳರ ನಡುವೆ ಇಲ್ಲಿ ಯುದ್ಧ ನಡೆಯಿತು. ಇತಿಹಾಸದಲ್ಲಿ ಇದು ಕೊಪ್ಪಂ ಯುದ್ಧವೆಂದು ಪ್ರಸಿದ್ಧವಾಗಿದೆ. ಚೋಳ ಅರಸ ರಾಜಾಧಿರಾಜನು ತನ್ನ ತಮ್ಮ ಇಮ್ಮಡಿ ರಾಜೇಂದ್ರನೊಂದಿಗೆ ಕೊಪ್ಪಳವನ್ನು ಮುತ್ತಿದನು. ಸೋಮೇಶ್ವರನ ನೇತೃತ್ವದ ಚಾಲುಕ್ಯ ಸೈನ್ಯವು ತನ್ನ ಗಮನವನ್ನೆಲ್ಲ ಆನೆಯ ಮೇಲೆ ಕುಳಿತು ಯುದ್ಧ ಮಾಡುತ್ತಿದ್ದ ಚೋಳ ಅರಸನ ಮೇಲೆ ಕೇಂದ್ರೀಕರಿಸಿತು. ಮೊದಲು ಆನೆಯನ್ನು ಬಾಣಗಳಿಂದ ಘಾಸಿಗೊಳಿಸಿ ನಂತರ ಅರಸರ ಮೇಲೆ ಬಾಣಗಳನ್ನು ಬಿಟ್ಟು ಹತ್ಯೆ ಮಾಡಲಾಯಿತು.[೮] ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕೊಪ್ಪಳವು ಕೊಪಣ-೧೨ ಪ್ರದೇಶದ ಕೇಂದ್ರವಾಗಿತ್ತು. ಚಾಲುಕ್ಯ ಜಗದೇಕಮಲ್ಲನ ಮಹಾಮಂಡಲೇಶ್ವರ ಇದರ ಆಡಳಿತವನ್ನು ನೋಡಿಕೊಳ್ಳುತ್ತಿದ್ದನು.[೯] ಹನ್ನೆರಡನೇ ಶತಮಾನದಲ್ಲಿ ಅಕ್ಕಲಕೋಟೆ, ಖೇಡ, ಪೌಳಗೆ, ಉಮರಾಣಿ ಮುಂತಾದ ಭಾಗಗಳನ್ನು ಆಳುತ್ತಿದ್ದ ಶಿಲಾಹಾರರು ತಮ್ಮನ್ನು ಕೊಪಣಪುರವರೇಶ್ವರರೆಂದು ಕರೆದುಕೊಂಡಿದ್ದಾರೆ. ಇದರಿಂದ ಇವರು ಕೊಪ್ಪಳದೊಂದಿಗೆ ಸಂಬಂಧ ಹೊಂದಿದ್ದರೆಂಬುದು ತಿಳಿಯುತ್ತದೆ.[೧೦] ಬಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಸಾಲೋಟಗಿ ಗ್ರಾಮದ ಶಾಸನವು ಶಿಲಾಹಾರರ ಕುಲತಿಲಕನಂತಿರುವ ಕಂಚಿಗನು ಕೊಪಣಪುರದವನೆಂದು ತಿಳಿಸುತ್ತದೆ.[೧೧] ಕಲಚೂರಿ ಅರಸರು ಕೊಪ್ಪಳದ ಹತ್ತಿರದ ಮಾದಿನೂರಿನಿಂದ ಆಳ್ವಿಕೆ ನಡೆಸುತ್ತಿದ್ದನು.[೧೨] ಹೊಯ್ಸಳ ಅರಸ ವಿಷ್ಣುವರ್ಧನ ತುಂಗಭದ್ರವನ್ನು ದಾಟಿ ಕೊಪ್ಪಳದ ಹತ್ತಿರವಿರುವ ಕುಮ್ಮಟದುರ್ಗವನ್ನು ವಶಪಡಿಸಿ ಕೊಂಡನು.[೧೩] ಇವನ ರಾಣಿ ಶಾಂತಲದೇವಿಯ ಹೆಸರಿನಲ್ಲಿ ಕಟ್ಟಿಸಿದ ಒಂದು ಬಸದಿ ಕೊಪ್ಪಳ ದಲ್ಲಿತ್ತು.[೧೪] ಹದಿನಾಲ್ಕನೇ ಶತಮಾನದ ಪ್ರಾರಂಭದಲ್ಲಿ ಕಂಪಿಲರಾಯನು ಹೊಸಮಲೆದುರ್ಗ ಮತ್ತು ಕುಮ್ಮಟದುರ್ಗಗಳಿಂದ ಆಳುತ್ತಿದ್ದಾಗ ತಿಮ್ಮರಾಜನು ಕೊಪ್ಪಳವನ್ನು ಆಳುತ್ತಿದ್ದನು. ಕಂಪಿಲರಾಯನು ಕುಮ್ಮಟದಲ್ಲಿ ಆಚರಿಸಿದ ಶೂಲಹಬ್ಬಕ್ಕೆ ತಿಮ್ಮರಾಜನ ಮಗನು ಬಂದಿದ್ದನು.[೧೫]

ಹದಿನಾಲ್ಕನೇ ಶತಮಾನದಲ್ಲಿ ವಿಜಯನಗರ ಮತ್ತು ಬಹಮನಿ ರಾಜ್ಯಗಳ ಸ್ಥಾಪನೆಯಾಗಿ, ಮುಂದೆ ಬಹಮನಿ ಅರಸರ ನಂತರ ಆದಿಲ್‌ಶಾಹಿಗಳ ಆಳ್ವಿಕೆ ಪ್ರಾರಂಭವಾಯಿತು. ಕೃಷ್ಣ ಮತ್ತು ತುಂಗಭದ್ರ ನದಿಗಳ ಮಧ್ಯದ ಪ್ರದೇಶವು ವಿಜಯನಗರ ಮತ್ತು ಮುಸ್ಲಿಮ್ ಅರಸರ ನಡುವೆ ಸಂಭವಿಸಿದ ಯುದ್ಧಗಳ ಫಲಿತಾಂಶಕ್ಕೆ ಅನುಗುಣವಾಗಿ ವಿಜಯೀ ಅರಸರ ವಶವಾಗುತ್ತಿತ್ತು. ಪ್ರಾರಂಭದಲ್ಲಿ ಇದು ಬಹಮನಿ ಅರಸರ ವಶದಲ್ಲಿತ್ತು.

ಬಹಮನಿ ಅರಸ ಒಂದನೇ ಮಹಮ್ಮದ್ ಶಾಹನ (ಕ್ರಿ.ಶ.೧೩೫೮-೭೫) ಕಾಲದಲ್ಲಿ ಒಂದು ಬಾವಿಯನ್ನು ಕಟ್ಟಲಾಯಿತು.[೧೬] ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರದ ಆಳ್ವಿಕೆಗೆ ಒಳಪಟ್ಟು,[೧೭] ಕೊಪಣ ಸೀಮೆ ಮತ್ತು ಕೊಪಣವೇಂಠೆ ಎಂಬ ಆಡಳಿತ ವಿಭಾಗವಾಯಿತು.[೧೮] ಕ್ರಿ.ಶ. ೧೫೨೧ರಲ್ಲಿ ಕೊಪಣ ಸೀಮೆಯು ಭಂಡಾರದ ಅಪ್ಪರಸಯ್ಯನ ಮಗ ಭಂಡಾರದ ತಿಮ್ಮಪ್ಪಯ್ಯನ ನಾಯಕತನಕ್ಕೆ ಒಳಪಟ್ಟಿತ್ತು.[೧೯] ಹದಿನೇಳನೇ ಶತಮಾನದ ಪ್ರಾರಂಭದಲ್ಲಿ ಎರಡನೇ ಇಬ್ರಾಹಿಮ್ ಆದಿಲ್ ಶಾಹನ ಆಳ್ವಿಕೆಯಲ್ಲಿತ್ತು. ಈತನ ಕಾಲದಲ್ಲಿ ಕೋಟೆ, ಬಾಗಿಲು, ಬಾವಿ ಮತ್ತು ಮಸೀದಿಗಳ ನಿರ್ಮಾಣವಾಯಿತು. ಕ್ರಿ.ಶ. ೧೬೦೩ರಲ್ಲಿ ಈತ ಅಧಿಕಾರಿಯಾದ ಸುಲ್ತಾನ ಅಲಿ ಕೋಟೆಗೋಡೆಯನ್ನು (ಹಿಸಾರ್), ಬುರುಜುಗಳನ್ನು ಮತ್ತು ಬಾಬ್-ಇ-ಅಲಿ ಎಂಬಬಾಗಿಲನ್ನು ಕಟ್ಟಿಸಿದನು.[೨೦] ಯಾಖುತ್‌ಖಾನನ ಮಗನಾದ ಖಾನ್‌ಮುರಾದ್ ಶಾನನ ಅಧಿಕಾರಾವಧಿಯಲ್ಲಿ ಕಾಲುದಳ ಮತ್ತು ಫಿರಂಗಿ ಪಡೆಯ ಅಧಿಕಾರಿಯಾಗಿದ್ದ ಶೇಕ್ ಮ[illegible]ಯು ಕ್ರಿ.ಶ. ೧೬೦೬-೦೭ರಲ್ಲಿ ಖಾದರ್ ಬಾವಿಯನ್ನು ಕಟ್ಟಿಸಿದನು.[೨೧] ಘಾಜಿಖಾನನು ಕೊಪ್ಪಳ ಕೋಟೆಯ ಅಧಿಕಾರಿಯಾಗಿದ್ದನು. ಇತನು ಕ್ರಿ.ಶ. ೧೬೦೯-೧೦ರಲ್ಲಿ ಒಂದು ಮಸೀದಿಯನ್ನು ಕಟ್ಟಿಸಿದನು. [೨೨]ಆದಿಲ್‌ಶಾಹಿ ಅರಸರ ಕಾಲದಲ್ಲಿ ಕೊಪ್ಪಳವನ್ನು ಮುಜಾಫರ ನಗರ ಎಂದು ಕರೆಯುತ್ತಿದ್ದರು.

ಕ್ರಿ.ಶ. ೧೭೨೪ರಲ್ಲಿ ಮರಾಠ ಅರಸ ಛತ್ರಪತಿ ಶಿವಾಜಿಯ ಆಳ್ವಿಕೆಗೆ ಒಳಪಟ್ಟಿತ್ತು. ಆಗ ಕೊಪಳ ಸೀಮೆ ಪಡವಣ ನಾಡಿನ ಕಾತರಿಕೆವೇಂಠೆಯಲ್ಲಿತ್ತು. ತಿರಕಪ್ಪ ಮತ್ತು ಪಾಂಡುರಂಗಪ್ಪ ಕೊಪಳ ಸೀಮೆಯ ದೇಶಕುಲಕರಣಿಯರಾಗಿದ್ದರು. ಮತ್ತು ಸುಭಾನಜೀರಾಯ ಮೋರೆ ಕೊಪಳ ವಿಭಾಗದ ಸುಬೇದಾರನಾಗಿದ್ದನು.[೨೩] ಕ್ರಿ.ಶ. ೧೭೭೬ರಲ್ಲಿ ಕೋಟೆಯು ಮೈಸೂರಿನ ಹೈದರಾಲಿಯ ವಶವಾಯಿತು. ಹೈದರಾಲಿಯ ಆದೇಶದ ಮೇರೆಗೆ ಕೋಲಾರದ ನಿವಾಸಿಯಾದ ಮಹಮ್ಮದ್ ಉಸ್ಮಾಸನು ಕ್ರಿ.ಶ. ೧೭೭೮ರಲ್ಲಿ ಕೊಪ್ಪಳ ಕೋಟೆಯನ್ನು ಬಲಪಡಿಸಿ, ಕೋಟೆಯ ಬತೇರಿಗಳನ್ನು ಐರೋಪ್ಯ ಶೈಲಿಯಲ್ಲಿ ಕಟ್ಟಿಸಿದನು. ಇವನು ಕಂದಕ, ಕೆರೆ, ಕಾಲುವೆ ಮುಂತಾದವುಗಳನ್ನೂ ಕಟ್ಟಿಸಿದನು.[೨೪] ಈತನು ಕ್ರಿ.ಶ.೧೭೭೯ರಲ್ಲಿ ಫತ್‌ದರ್ವಾಜ, ಪಾನೀಮಹಲ್, ಟವಾನ್ ಇ-ಖಾಸ್-ಮುಂಚಾದುವುಗಳನ್ನು ಕಟ್ಟಿಸಿದನು.[೨೫] ಮತ್ತು ಕೆರೆಯ ನೀರನ್ನು ಕೋಟೆಯೊಳಗಿನ ಬಾವಿಗೆ ತರಲು ಕಾಲುವೆಯನ್ನು ತೋಡಿಸಿದನು.[೨೬] ಇದೇ ವರ್ಷದಲ್ಲಿ ಮಕ್ಕಾ ದರ್ವಾಜದ ನಿರ್ಮಾಣವೂ ಆಯಿತು.[೨೭] ಕ್ರಿ.ಸ. ೧೭೮೦-೮೧ರಲ್ಲಿ ಸ್ವತಃ ಹೈದರಾಲಿಯೇ ಕೊಪ್ಪಳದಲ್ಲಿ ಅಸಾಮಾನ್ಯ ಕಟ್ಟಡಗಳನ್ನು, ಮಣ್ಣು ಮತ್ತು ಗಾರೆಯ ಕೋಟೆಯನ್ನು ಕಟ್ಟಿಸಿದನು ಮತ್ತು ಕೊಪ್ಪಳ ಕೋಟೆಯನ್ನು ಕಟ್ಟಿಸಿದನು ಮತ್ತು ಕೊಪ್ಪಳ ಕೋಟೆಯ ಕಿಲ್ಲೇದಾರನಾಗಿದ್ದ

ಮಹಮ್ಮದ್‌ಖಾನ್ ಬಹ್ಲಮೀ ಜೋಗಿ ಬಂಡೆಯ ಹತ್ತಿರ ಚಾಂದ್‌ಕಂಟ ಎಂಬ ಕೊಳವನ್ನು ನಿರ್ಮಿಸಿದನು.[೨೮] ಅಧಿಕಾರಿಯಾದ ಮಹಮ್ಮದ್‌ಖಾನ ದೈಲಮಿಯು ಮುಂದೆ ಟೀಪು ಸುಲ್ತಾನನ ಕಾಲದಲ್ಲಿ ಕ್ರಿ.ಶ. ೧೭೮೩ರಲ್ಲಿ ಸುಲ್ತಾನ್ ಬಾಗಿಲನ್ನು ಕಟ್ಟಿಸಿದನು.[೨೯] ಮುಂದೆ ಕ್ರಿ.ಶ. ೧೭೮೫-೮೬ರಲ್ಲಿ ಮಹಮ್ಮದ್ ಬುರುಜಿನ ನಿರ್ಮಾಣವಾಯಿತು.[೩೦] ಕ್ರಿ.ಶ. ೧೭೯೧ರಲ್ಲಿ ಕೋಟೆಯು ಬ್ರಿಟಿಷರ ಮತ್ತು ಹೈದರಾಬಾದಿನ ನಿಜಾಮನ ವಶವಾಯಿತು. ಆರು ತಿಂಗಳ ಕಾಲ ಅವರು ಕೋಟೆಗೆ ಮುತ್ತಿಗೆ ಹಾಕಿದ್ದರೂ ಇದನ್ನು ಗೆಲ್ಲಲಾಗಿರಲಿಲ್ಲ. ಬೆಂಗಳೂರು ಬ್ರಿಟಿಷರ ವಶವಾದ ಸುದ್ದಿಯನ್ನು ಕೇಳಿದ ಮೇಲೆ ಕೋಟೆಯ ಅಧಿಕಾರಿ ಶರಣಾದನು. ಭೀಮರಾವ ನಾಡಗೌಡನು ಕ್ರಿ.ಶ. ೧೮೫೮ರಲ್ಲಿ ಇದನ್ನು ವಶಪಡಿಸಿಕೊಂಡನು.[೩೧] ಸ್ವಾತಂತ್ರ್ಯ ದೊರೆಯುವವರೆಗೆ ಇದು ನವಾಬ ಸಾಲಾರ್ ಜಂಗ್‌ನ ಅಧಿಪತ್ಯದಲ್ಲಿತ್ತು.[೩೨]

## ಕೋಟೆ

ಕೊಪ್ಪಳ ಕೋಟೆಯನ್ನು[೩೩] ಸೈನಿಕ ಕಾರ್ಯಾಚರಣೆಯ ದೃಷ್ಟಿಯಿಂದ ಆಯಕಟ್ಟಿನ ಸ್ಥಳದಲ್ಲಿ ಕಟ್ಟಿದೆ. ಇದು ಬೆಟ್ಟದ ಮೇಲೆ ಕಟ್ಟಿದ ಗಿರಿದುರ್ಗ (ಚಿತ್ರ ೨೦೮). ಬೆಟ್ಟದ ಪಶ್ಚಿಮಕ್ಕೆ ಹುಲಿಕೆರೆ ಮತ್ತು ಉತ್ತರಕ್ಕೆ ಮೋತಿ ತಲಾಬ್ ಕೆರೆಗಳಿವೆ. ಈ ದೊಡ್ಡ ಕೆರೆಗಳು ಊರಿಗೆ ಅವಶ್ಯಕವಾದ ನೀರನ್ನು ಪೂರೈಸುವುದರೊಂದಿಗೆ ಕಂದಕಗಳಂತೆ ನೈಸರ್ಗಿಕ ರಕ್ಷಣೆಯನ್ನು ನೀಡುತ್ತವೆ. ಬೆಟ್ಟವು ಪಶ್ಚಿಮ ದಿಕ್ಕಿನಲ್ಲಿ ಕಡಿದಾಗಿರುವುದರಿಂದ ಅಲ್ಲಿ ಕೋಟೆಯ ಕೆಳಗಿನ ಸುತ್ತುಗಳನ್ನು ಕಟ್ಟಿಲ್ಲ. ಈ ದಿಕ್ಕಿನಲ್ಲಿ ಬೆಟ್ಟ ಹತ್ತುವುದು ಅಸಾಧ್ಯ. ಇದು ಏಳುಸುತ್ತಿನ ಕೋಟೆಯಾದರೂ ಈ ಸುತ್ತುಗಳನ್ನು ಎಲ್ಲ ದಿಕ್ಕುಗಳಲ್ಲಿ ಕಟ್ಟಿಲ್ಲ. ಪ್ರತಿ ಸುತ್ತಿನ ಕೋಟೆ ಬೆಟ್ಟದ ಕಡಿದಾದ ಭಾಗವನ್ನು ಸೇರಿ ಅಂತ್ಯಗೊಳ್ಳುತ್ತದೆ. ಒಳ ಸುತ್ತುಗಳು ಬೆಟ್ಟದ ಮೇಲೆ ಮತ್ತು ಹೊರಗಿನ ಎರಡು ಸುತ್ತುಗಳು ಬೆಟ್ಟದ ಕೆಳಗೆ ಇವೆ.

ಹೊರ ಅಥವಾ ಮೊದಲನೆಯ ಸುತ್ತು ಬೆಟ್ಟಕ್ಕಿಂತ ಅಗಲವಾಗಿದ್ದು, ಬೆಟ್ಟದಿಂದ ಪ್ರಾರಂಭವಾಗಿ ಪೂರ್ವ ಮತ್ತು ಉತ್ತರ ದಿಕ್ಕಿನಲ್ಲಿ ನೆಲದ ಮೇಲೆ ಚಾಚಿಕೊಂಡಿದೆ. ಈ ಸುತ್ತಿನ ಒಳಗೆ ಮತ್ತು ಹೊರಗೆ ಜನವಾಸವಿದೆ. ಹೊರಭಾಗದಲ್ಲಿ ಪೂರ್ವಕ್ಕೆ ಬಾಗಿಲಿನ ಹತ್ತಿರ ಸೈಲಾನಿಪಾಶ ದರ್ಗಾ ಮತ್ತು ಉತ್ತರಕ್ಕೆ ಚಾಂದ್‌ಕುಂಟ ಎಂಬ ಕೊಳ ಇದೆ. ಸೈಲಾನಿಪಾಶ ದರ್ಗಾದಲ್ಲಿ ಎರಡು ಪರ್ಶಿಯನ್ ಶಾಸನಗಳಿವೆ ಚಾಂದ್ ಕುಂಟವು ಒಂದು ದೊಡ್ಡ ಕೊಳ. ಇದರ ಮೂರು ಬದಿಗೆ ಕೆಳಗಿಳಿಯಲು ಮೆಟ್ಟಿಲುಗಳಿವೆ. ದಂಡೆಯ ಮೇಲೆ ಎರಡು ಕಂಬಗಳಂತಹ ಚಿಕ್ಕ ಮಿನಾರ್‌ಗಳ ಮಧ್ಯದಲ್ಲಿ ಪರ್ಶಿಯನ್ ಶಾಸನ ಕಲ್ಲನ್ನು ನಿಲ್ಲಿಸಿದೆ. ಹೈದರಾಲಿಯ




೨೦೭. ಕೊಪ್ಪಳ ಕೋಟೆ: ೧. ಸಿದ್ದಿಬುರುಜು ಬಾಗಿಲು, ೨. ಬಂದಿಖಾನೆ, ೩. ಜೋಗಿಬಂಡೆ ಬಾವಿ, ೪. ದಿಡ್ಡಿ, ೫. ಚಾಂದ್‌ಕುಂಟಾ, ೬. ದಿಡ್ಡಿ, ೭. [illegible] ಬಾವಿ, ೮. ದಿಡ್ಡಿ, ೯. ಎರಡನೇ ಬಾಗಿಲು, ೧೦. ಕಾವಲುಗಾರರ ಕೊಠಡಿ, ೧೧. ಬಾಗಿಲು, ೧೨. [illegible] ೧೩. ಹಾಲಬಾವಿ, ೧೪. ಮೂರನೇ ಬಾಗಿಲು, ೧೫. ನಾಲ್ಕನೇ ಬಾಗಿಲು, ೧೬. ದಿಡ್ಡಿ, ೧೭. ತೊಟ್ಟಿ. ೧೮. [illegible]ಾವಿ. ೧೯. ಕಾವಲುಗಾರರ ಮಂಟಪ, ೨೦. ಐದನೇ ಬಾಗಿಲು, ೨೧. ಕಣಜ, ೨೨. ಆರನೇ ಬಾಗಿಲು ೨೩. [illegible]ೊಳ, ೨೪. ಏಳನೇ ಬಾಗಿಲು. ೨೫. ಎಂಟನೇ ಬಾಗಿಲು, ೨೬. ಶೈವ ದೇವಾಲಯ, ೨೭. ಕಟ್ಟಡ, [illegible] ದುರ್ಗಾ ದೇವಾಲಯ, [illegible]೯. ದಿಡ್ಡಿ. ೩೦. ಕಟ್ಟಡ, ೩೧. ಒಂಬತ್ತನೇ ಬಾಗಿಲು, ೩೨. ಕಟ್ಟಡ, ೩೩. ಬತೇ[illegible], ೩೪. ಬತೇರಿ, ೩೫. ಒಂಟಿಕೊತ್ತಳ, ೩೬. ದಣಕನ ಬಾವಿ, ೩೭. ಶಂಬುಲಿಂಗನ ದೇವಾಲಯ, ೩೮. [illegible]ಡ್ಡಿಬಾಗಿಲು, ೩೯. ದಿಡ್ಡಿಬಾಗಿ[illegible]



೨೦೮. ಕೊಪ್ಪಳ, ಆಗ್ನೇಯದಿಂದ



೨೦೯. ಕೊಪ್ಪಳ, ಅಷ್ಟಭುಜಾಕೃತಿಯ ಬುರುಜು

ಕಾಲದಲ್ಲಿ ಕ್ರಿ.ಶ. ೧೭೮೦-೮೧ರಲ್ಲಿ ಕೊಪ್ಪಳದ ಕಿಲ್ಲೇದಾರನಾದ ಮಹಮ್ಮದ್ ಖಾನನು ಕೊಪ್ಪಳದಲ್ಲಿ ಜೋಗಿ ಬಂಡೆಯ ಬಳಿ ಚಾಂದ್‌ಕುಂಟವನ್ನು ಕಟ್ಟಿಸಿದನೆಂದು ಇದು ತಿಳಿಸುತ್ತದೆ.[೩೪] ಶಾಸನದ ಮಧ್ಯದಲ್ಲಿ ಬಿದಿಗೆ ಚಂದ್ರನ ದೊಡ್ಡ ಚಿತ್ರವಿದೆ. ಚಾಂದ್‌ಕುಂಟೆಂದರೆ ಚಂದ್ರನ ಕೊಳ.

ಹೊರಕೋಟೆಯಲ್ಲಿ ಪೂರ್ವ ದಿಕ್ಕಿಗೆ ಎರಡು ದಿಡ್ಡಿಗಳು (ಚಿಕ್ಕ ಬಾಗಿಲುಗಳು), ಸಿದ್ದಿಬುರುಜು ಬಾಗಿಲು ಮತ್ತು ಉತ್ತರ ದಿಕ್ಕಿಗೆ ಎರಡು ದಿಡ್ಡಿಗಳಿವೆ. ದಪ್ಪ ಕಲ್ಲುಗಳಿಂದ ಕಟ್ಟಿದ ಈ ಕೋಟೆಯಲ್ಲಿ ಎರಡು ಅಷ್ಟಭುಜಾಕೃತಿಯ ಬುರುಜುಗಳು ಮತ್ತು ಅನೇಕ ವೃತ್ತಾಕಾರದ ಬುರುಜುಗಳಿವೆ. ೧೯೯೨ರಲ್ಲಿ ಮಳೆಯಿಂದಾಗಿ ಆಗ್ನೇಯ ಮೂಲೆಯ ಹತ್ತಿರದ ವೃತ್ತಾಕಾರದ ಬುರುಜು ಮತ್ತು ಪಕ್ಕದ ಭಾಗ ಬಿದ್ದಾಗ ಹತ್ತರಿಂದ ಹನ್ನೆರಡನೇ ಶತಮಾನದ ಶಾಸನಗಳಿರುವ ಅನೇಕ ನಿಸಿದಿಕಲ್ಲುಗಳು ಹೊರಗೆ ಬಂದವು.[೩೫] ಹದಿನಾರನೇ ಶತಮಾನದಲ್ಲಿ ಕೋಟೆಯನ್ನು ಕಟ್ಟುವಾಗ ಈ ನಿಸಿದಿಕಲ್ಲುಗಳನ್ನು ತುಂಡರಿಸಿ ಸಾಧಾರಣ ಕಲ್ಲುಗಳಂತೆ ಉಪಯೋಗಿಸಿದೆ. ಕೋಟೆಗೋಡೆಯ ಮತ್ತು ಬುರುಜುಗಳ ಮೇಲೆ ಕೈಪಿಡಿ ಗೋಡೆಯಲ್ಲಿ ಎತ್ತರವಾದತೆನೆಗಳಿವೆ. ಗೋಡೆಯಲ್ಲಿ ಮತ್ತು ತೆನೆಗಳಲ್ಲಿ ಬಂದೂಕು ಕಿಂಡಿಗಳಿವೆ. ಬುರುಜುಗಳ ಮೇಲೆ ತೋಪುಗಳಿಗಾಗಿ ಮಾಡಿದ ಅಗಲವಾದ ಕಿಂಡಿಗಳಿವೆ. ಗೋಡೆಯ ಮೇಲೆ ಚಿಕ್ಕ ಮತ್ತು ಬುರುಜುಗಳ ಮೇಲೆ ದೊಡ್ಡ ಮುಂಚಾಚು (projecting balcony window) ಇವೆ. ಆಗ್ನೇಯ ಮೂಲೆಯ ಹತ್ತಿರದ ಬುರುಜಿನ ಉತ್ತರಕ್ಕೆ ದಿಡ್ಡಿಯಿದೆ. ತೋಳು ತೊಲೆಗಳ ಈ ಬಾಗಿಲಿನ ಮೇಲಿನ ಕಮಾನನ್ನು ಕಲ್ಲುಗಳಿಂದ ಮುಚ್ಚಿದೆ. ಪ್ರವೇಶದ ಎಡಭಾಗದಲ್ಲಿ ಕಾವಲುಗಾರನ ಕೊಠಡಿಯಿದೆ. ದಿಡ್ಡಿಯ ಉತ್ತರಕ್ಕಿರುವ ಬುರುಜು ಅಷ್ಟಭುಜಾಕೃತಿಯಲ್ಲಿದೆ. ಬುರುಜಿನ ಮೇಲೆ ಎತ್ತರವಾದ ತೆನೆಗಳಿವೆ. ತೆನೆಗಳ ಮಧ್ಯ ಇರಬೇಕಾದ ತೆರೆದ ಭಾಗವನ್ನು ನಂತರದಲ್ಲಿ ಗೋಡೆ ಕಟ್ಟಿ ಮುಚ್ಚಲಾಗಿದೆ. ತೆನೆಗಳಲ್ಲಿ ಬಂದೂಕು ಕಿಂಡಿಗಳಿವೆ. ತೆನೆಗಳಿಗಿಂತ ಕೆಳಗಿನ ಭಾಗದಲ್ಲಿ ದೊಡ್ಡ ಮುಂಚಾಚುಗಳಿವೆ. ಪ್ರತಿಯೊಂದು ಮುಂಚಾಚನ್ನು ಮೂರು ಬೋದಿಗೆಗಳು ಹೊತ್ತಿವೆ. ಬೋದಿಗೆಗಳನ್ನು ಸುಂದರವಾಗಿಕೆತ್ತಿದ ಸಿಂಹ, ಆನೆ, ಕುದುರೆ ಸವಾರರು, ನೃತ್ಯ ಮತ್ತು ಸಂಗೀತಗಾರರ ಶಿಲ್ಪಗಳಿಂದ ಅಲಂಕರಿಸಿದೆ (ಚಿತ್ರ ೨೦೯). ಒಂದು ಸಿಂಹದ ತಲೆಯು ದೊಡ್ಡದಾಗಿದ್ದು, ಬಾಯಿಯನ್ನು ಅಗಲವಾಗಿ ತೆರೆದಿದೆ. ಮುಂಚಾಚುಗಳ ಗೋಡೆಯಲ್ಲಿ ಬಂದೂಕು ಕಿಂಡಿಗಳುಮತ್ತು ಮುಂಚಾಚುಗಳ ಪಕ್ಕದಲ್ಲಿ ಆಯತಾಕಾರ ಮತ್ತು ವೃತ್ತಾಕಾರರದಲ್ಲಿರುವ ದೊಡ್ಡ ತೋಪು ಕಿಂಡಿಗಳಿವೆ. ಈ ಬುರುಜಿನ ಉತ್ತರಕ್ಕೆ ಮತ್ತೊಂದು ದಿಡ್ಡಿ, ಅದರ ಪಕ್ಕದಲ್ಲಿ ಮತ್ತೊಂದು ಅಷ್ಟಭುಜಾಕೃತಿಯ ಬುರುಜು ಇವೆ. ಎರಡನೆಯ ಅಷ್ಟಭುಜಾಕೃತಿಯ ಬುರುಬು ಮೊದಲಿನ ಬುರುಜಿನಂತೆಯೇ ಇದೆ, ಆದರೆ ಇದರ ಬೋದಿಗೆಗಳಿಗೆ ಅಲಂಕಾರಮಯವಾದ ಬೋದಿಗೆಗಳಿಲ್ಲ.



೨೧೩. ಕೊಪ್ಪಳ, ಜೋಗಿಬಂಡೆ ಬಾವಿ, ಕೈಪಿಡಿಗೋಡೆ



೨೧೪. ಕೊಪ್ಪಳ, ಜೋಗಿಬಂಡೆಯ ಬುರುಜಿನ ಮೇಲಿನ ತೋಪು

ಹೊರಕೋಟೆಯ ಪೂರ್ವ ಗೋಡೆಯ ಮಧ್ಯದಲ್ಲಿ ಒಂದು ದೊಡ್ಡ ಬಾಗಿಲಿದೆ. ಇದರ ಹೆಸರು ಸಿದ್ದಿ ಬುರುಜು ಬಾಗಿಲು. ಇದು ಎರಡು ವೃತ್ತಾಕಾರದ ಬುರುಜುಗಳ ಮಧ್ಯದಲ್ಲಿದೆ (ಚಿತ್ರ ೨೧೦). ಬಾಗಿಲಿನ ಕಟ್ಟಡ ಈಗ ಉಳಿದಿಲ್ಲ. ಬಾಗಿಲಿನ ದಕ್ಷಿಣಕ್ಕಿರುವ ಬುರುಜನ್ನು ಮಹಮ್ಮದ್ ಬುರುಜು ಎಂದು ಕರೆಯುತ್ತಾರೆ. ಈ ಬುರಿಜಿನ ಮೇಲೆ ಕೈಪಿಡಿ ಗೋಡೆಯಿಲ್ಲ. ಮೇಲಿನಿಂದ ಎರಡನೇ ಸಾಲಿನ ಕಲ್ಲುಗಳು ಗೋಡೆಯಿಂದ ಸ್ವಲ್ಪ ಮುಂದೆ ಚಾಚಿವೆ. ಬಾಗಿಲಿನುತ್ತರಕ್ಕಿರುವ ಸಿದ್ದಿ ಬುರುಜಿನಗೋಡೆಯಲ್ಲಿ, ಮೇಲಿನ ತೆನೆಗಳಲ್ಲಿ, ಮತ್ತು ಚಿಕ್ಕಮುಂಚಾಚುಗಳಲ್ಲಿ ಬಂದೂಕು ಕಿಂಡಿಗಳುಮತ್ತು ಕೆಲವು ತೆನೆಗಳಲ್ಲಿ ತೋಪಿನ ದೊಡ್ಡ ಕಿಂಡಿಗಳಿವೆ. ಮುಂಚಾಚುಗಳು ಚಿಕ್ಕವಾಗಿವೆ. ಪ್ರತಿಯೊಂದು ಮುಂಚಾಚು ಎರಡು ಬೋದಿಗೆಗಳ ಮೇಲೆ ನಿಂತಿದೆ. ಈ ಬಾಗಿಲ ಹೊರಗೆ ಪೂರ್ವಕ್ಕಿರುವ ಸೈಲಾನಿ ಪಾಶದರ್ಗಾದಲ್ಲಿಯ ಶಾಸನವು ಎರಡನೇ ಇಬ್ರಾಹಿಮ್ ಆದಿಲ್‌ಶಾಹನ ಅಧಿಕಾರಿ ಸುಲ್ತಾನ್‌ಅಲಿ ಕ್ರಿ.ಶ. ೧೬೦೩ರಲ್ಲಿ ಕೋಟೆಯನ್ನು (ಹಿಸಾರ್) ಮತ್ತು ಬಾಬ್-ಇ-ಅಲಿಬಾಗಿಲನ್ನು ಕಟ್ಟಿಸಿದನೆಂದು ತಿಳಿಸುತ್ತದೆ.[೬೬] ಅದೇ ಸ್ಥಳದಲ್ಲಿಯ ಮತ್ತೊಂದು ಶಾಸನವು ಕ್ರಿ.ಶ. ೧೭೮೫-೮೬ರಲ್ಲಿ ಮಹಮ್ಮದ್ ಬುರುಜನ್ನು ಕಟ್ಟಲಾಯಿತು. ಮತ್ತು ಕೊಪ್ಪಳದ ನಿರ್ಮಾಣಕಾರ್ಯವು ಪೂರ್ಣಗೊಂಡಿತು ಎಂದು ತಿಳಿಸುತ್ತದೆ.[೬೭] ಮೊದಲನೇ ಶಾಸನವು ಹೊರಕೋಟೆ ಮತ್ತು ಸಿದ್ದಿ ಬುರುಜು ಬಾಗಿಲಿನ ನಿರ್ಮಾಣವನ್ನು ಉಲ್ಲೇಖಿಸಿದೆ. ಎರಡನೇ ಶಾಸನದಕಾಲ ಟೀಪು ಸುಲ್ತಾನನ ಆಳ್ವಿಕೆಯ ಕಾಲದಲ್ಲಿರುವುದರಿಂದ ಇದು ಮಹಮ್ಮದ್ ಬುರುಜಿನ ನಿರ್ಮಾಣವನ್ನು ಉಲ್ಲೇಖಿಸುತ್ತದೆ. ಕೋಟೆಯ ಒಳಗೆ ಸಿದ್ದಿ ಬುರುಜು ಬಾಗಿಲಿನ ಪಕ್ಕದಲ್ಲಿ ದಕ್ಷಿಣಕ್ಕೆ ಒಂದು ಮಸೀದಿಯಿದೆ. ಇದನ್ನು ಅರಬೋಂಕಿ ಮಸ್ಜಿದ್ (ಅರಬರ ಮಸೀದಿ) ಎಂದು ಕರೆಯುವರು. ಇದನ್ನು ಎರಡನೇ ಇಬ್ರಾಹಿಮ್ ಆದಿಲ್‌ಶಾಹನ ಕಾಲದಲ್ಲಿ ಕೊಪ್ಪಳ ಕೋಟೆಯ ಅಧಿಕಾರಿಯಾಗಿದ್ದ ಘಾಜೀಖಾನನು ಕ್ರಿ.ಶ.೧೬೦೯-೧೦ರಲ್ಲಿ ಕಟ್ಟಿಸಿದನೆಂದು ಇಲ್ಲಿರುವ ಶಾಸನದಿಂದತಿಳಿಯುತ್ತದೆ.[೬೮] ಕೋಟೆ ಬಾಗಿಲಿನ ಮತ್ತೊಂದು ಪಕ್ಕದಲ್ಲಿ ಆಯತಾಕಾರದ ಆವರಣವಿದೆ. ಇದನ್ನು ಹಿಂದೆ ಬಂದಿಖಾನೆಯಾಗಿ ಬಳಸಲಾಗುತ್ತಿತ್ತು.

ಹೊರಕೋಟೆಯ ಈಶಾನ್ಯ ದಿಕ್ಕಿನಲ್ಲಿ ಜೋಗಿ ಬಂಡೆಯಿದೆ. ಈ ಬಂಡೆಯ ಮೇಲೆ ಐದು ವೃತ್ತಾಕಾರದ ಬುರುಜುಗಳ ಸಮೂಹವಿದೆ (ಚಿತ್ರ ೨೧೧). ಈ ಬುರುಜುಗಳ ಮೇಲ್ಭಾಗ ಎರಡು ವಿಧವಾಗಿದೆ. ಮೊದಲನೆಯದು ಆರು ಬೋದಿಗೆಗಳ ಮೇಲೆ ಎತ್ತರವಾದ ಮುಂಚಾಚುಗಳನ್ನು ಹೊಂದಿದೆ. ಮುಂಚಾಚುಗಳ ಮುಂಭಾಗವನ್ನು ಮತ್ತು ಅವುಗಳ ಪಕ್ಕದ ಗೋಡೆಯ ಭಾಗವನ್ನು ಗೋಡೆ ಕಟ್ಟಿ ಮುಚ್ಚಿದೆ. ಇದು ಹದಿನಾರು-ಹದಿನೇಳನೇ ಶತಮಾನದ್ದು. ಮತ್ತೊಂದು ವಿಧದ ಮೇಲ್ಭಾಗದಲ್ಲಿ ಅಗಲವಾದ ತೋಪು ಕಿಂಡಿಗಳಿವೆ. ಕಿಂಡಿಗಳ ಮೇಲ್ಭಾಗದಲ್ಲಿ




೨೧೪. ಕೊಪ್ಪಳ, ಜೋಗಿಬಂಡೆ ಬಾವಿ

N

೨೧೫. ಕೊಪ್ಪಳ, ಬಾಂಗ್‌ಕುಂಟಾ ಬಾವಿ




೨೧೮. ಕೊಪ್ಪಳ, ಹಾಲಬಾವಿ




೨೧೯. ಕೊಪ್ಪಳ, ಡಣಕನ ಬಾವಿ

ಗೋಡೆ ಅಥವಾ ಛಾವಣಿಯಿಲ್ಲ. ಈ ತರಹದ ಕೈಪಿಡಿ ಗೋಡೆಯು ಹೊರಭಾಗಕ್ಕೆ ಇಳಿಜಾರಾಗಿದೆ. ಕಿಂಡಿಗಳು ಒಳಭಾಗದಲ್ಲಿ ಕಿರಿದಾಗಿದ್ದು, ಹೊರಭಾಗದಲ್ಲಿ ಅಗಲವಾಗಿವೆ. ಇಂತಹ ಕೈಪಿಡಿ ಗೋಡೆಗಳನ್ನು ಟೀಪು ಸುಲ್ತಾನನ ಕಾಲದ ಕೋಟೆಗಳಲ್ಲಿ ನೋಡಬಹುದು. ಈ ಬುರುಜುಗಳ ಕಾಲ ಹದಿನೆಂಟನೇ ಶತಮಾನದ ಕೊನೆಯಭಾಗ. ಕೋಟೆಯ ಒಳಗೆ ಬಂದು ಜೋಗಿ ಬಂಡೆಯ ಮೇಲಿನ ಈ ಬುರುಜುಗಳ ಸಮೂಹವನ್ನು ಹತ್ತಿದಾಗ ಕಾಣುವ ಕೈಪಿಡಿಗೋಡೆಯ ಎತ್ತರವಾದ ತೆನೆಗಳಲ್ಲಿ ದೊಡ್ಡ ಗೂಡುಗಳಿವೆ. ಇವು ಕಾವಲುಗಾರರ ಕೊಠಡಿಯಷ್ಟು ದೊಡ್ಡವಾಗಿವೆ. ಒಂದು ಗೂಡಿನ ಗೋಡೆಯ ಮೇಲೆ ಆಂಜನೇಯನ ರೇಖಾಚಿತ್ರವಿದೆ. ಕೈಪಿಡಿ ಗೋಡೆಯ ಪ್ರಾರಂಭದಲ್ಲಿ ಮಂಟಪದಂತಹ ಕಾವಲುಗಾರರ ದೊಡ್ಡ ಮನೆಯಿದೆ. ಈ ಸಂಕೀರ್ಣದ ಮಧ್ಯದಲ್ಲಿ ಒಂದು ದೊಡ್ಡ ಬಾವಿಯಿದೆ. ಬಾವಿಯ ಮೆಟ್ಟಿಲುಗಳ ಪಕ್ಕದಲ್ಲಿ ನೆಲ ಮಟ್ಟಕ್ಕಿಂತ ಕೆಳಗಿರುವ ಎರಡು ಕಂಬಗಳ ವಿಶ್ರಾಂತಿ ಮಂಟಪವಿದೆ (ಚಿತ್ರ ೨೧೨). ಮದ್ದು ಸಂಗ್ರಹಣೆಗಾಗಿ ನೆಲಮಟ್ಟಕ್ಕಿಂತ ಕೆಳಗೆ ಕಟ್ಟಿದ ಎರಡು ಮದ್ದಿನ ಮನೆಗಳಿವೆ. ಇಲ್ಲಿಯ ಒಂದು ಬುರುಜಿನ ಮೇಲೆ ಒಂದು ತೋಪಿದೆ. ಎತ್ತರವಾದ ಸ್ಥಳದಲ್ಲಿರುವ ಬತೇರಿಯ ಮೇಲೆ ಮತ್ತೊಂದು ತೋಪಿದೆ. ಕಬ್ಬಿಣದ ತೋಪುಗಳನ್ನು ಎರಕಹೊಯ್ದು ತಯಾರಿಸಿದೆ (ಚಿತ್ರ ೨೧೩).

ಜೋಗಿಬಂಡೆಯ ಪಶ್ಚಿಮಕ್ಕೆ ಹೊರಕೋಟೆಯಲ್ಲಿ ಮೂರು ದಿಡ್ಡಿಗಳಿವೆ. ಮೊದಲ ಎರಡು ದಿಡ್ಡಿಗಳ ಮಧ್ಯದ ಕೋಟೆಗೋಡೆ ಬಿದ್ದ ಸ್ಥಳದಲ್ಲಿ ಈಗಿನ ರಸ್ತೆಯಿದೆ. ಮೊದಲನೆಯ ದಿಡ್ಡಿಯ ಮುಂಭಾಗದಲ್ಲಿ ಅಗಲವಾದ ಚೌಕಟ್ಟಿದೆ. ಒಳಗೆ ಪ್ರವೇಶಿಸಿದ ಮೇಲೆ ಬಾಗಿಲ ಎತ್ತರ ಹೆಚ್ಚಾಗಿದೆ. ಈ ಭಾಗದ ಛಾವಣಿಯನ್ನು ಪಕ್ಕದ ಕಲ್ಲುಗಳನ್ನು ಕ್ರಮೇಣವಾಗಿ ಮುಂದೆ ಚಾಚುತ್ತ (corbelling) ನಿರ್ಮಿಸಿದೆ. ಎರಡನೆಯ ದಿಡ್ಡಿ ಬಹಳ ಕಿರಿದಾಗಿದೆ. ಇದರ ಮೇಲ್ಭಾಗದಲ್ಲಿ ಜೈನ ಬಸದಿಯ ಕಲ್ಲನ್ನು ಸೇರಿಸಿ ಕಟ್ಟಿದೆ. ಈಕಲ್ಲಿನ ಮೇಲೆ ಕುಳಿತಿರುವ ತೀರ್ಥಂಕರನ ಶಿಲ್ಪವಿದೆ. ಶಿಲ್ಪದ ಸುತ್ತ ಕೂಡು ಮತ್ತು ಮೇಲೆ ಕೀರ್ತಿಮುಖ ಇವೆ. ಉತ್ತರ ದಿಕ್ಕಿನ ಕೋಟೆ ಗೋಡೆಯಲ್ಲಿ ಕಾವಲುಗಾರರ ಎರಡು ಮನೆಗಳಿವೆ. ಒಂದರ ಮುಂಭಾಗದಲ್ಲಿ ಮೂರು ಕಮಾನುಗಳಿವೆ, ಮತ್ತೊಂದರ ಮುಂಭಾಗದಲ್ಲಿ ಗೋಡೆಯನ್ನು ಕಟ್ಟಿದೆ.

ಹೊರಕೋಟೆ ಅಥವಾ ಮೊದಲನೇ ಕೋಟೆಯೊಳಗೆ ಆಗ್ನೇಯ ಭಾಗದಲ್ಲಿ ಡಣಕನ ಬಾವಿಯಿದೆ. ಬಾವಿಗೆ ಪೂರ್ವದಿಂದ ಪಶ್ಚಿಮಕ್ಕೆ ನಂತರ ದಕ್ಷಿಣಕ್ಕೆ ಮೆಟ್ಟಿಲುಗಳಿವೆ. ಬಾವಿಯನ್ನು ಕಟ್ಟಿದ ಕಲ್ಲುಗಳಲ್ಲಿ ಬಸದಿಯ ಅವಶೇಷಗಳಿವೆ. ಅವುಗಳಲ್ಲಿ ಎರಡರ ಮೇಲೆ ಕೂಡು ಕೀರ್ತಿಮುಖಗಳಿದ್ದು, ಕೂಡಿನಲ್ಲಿ ಕುಳಿತ

ತೀರ್ಥಂಕರನ ಶಿಲ್ಪಗಳಿವೆ. ಬಾವಿಯ ಮೇಲೆ ಒಂದು ಮಂಟಪವಿದೆ. ಮಂಟಪದಲ್ಲಿ ನರ್ತನ ಭಂಗಿಯಲ್ಲಿರುವ ದೇವಿಯ ಶಿಲ್ಪ ಮತ್ತು ಮುಂಭಾಗದಲ್ಲಿ ಆರು ಕಂಬಗಳು ಇವೆ. ಬಾವಿಯ ವಾಯವ್ಯಕ್ಕೆ ಶಂಭುಲಿಂಗನ ದೇವಾಲಯವಿದೆ. ದೇವಾಲಯದ ಮಂಟಪದಲ್ಲಿ ಹನ್ನೆರಡನೇ ಶತಮಾನದ ಎರಡು ಕಂಬಗಳಿವೆ. ಗೋಡೆಯ ಮೇಲೆ ಲಿಂಗ, ನಂದಿ ಮತ್ತು ಹಾವಿನ ಶಿಲ್ಪಗಳಿವೆ. ಈ ದೇವಾಲಯದ ಪಕ್ಕದಲ್ಲಿ ಬಂಡೆಯ ಮೇಲೆ ಗಣೇಶನ ಗುಡಿಯಿದೆ. ಇಲ್ಲಿಂದ ಪಶ್ಚಿಮಕ್ಕೆ ಚಂದ್ರ ಬಂಡೆಯಿದೆ. ಈ ಬಂಡೆಯ ಮೇಲೆ ತೀರ್ಥಂಕರ ಮತ್ತು ಶ್ರಾವಕ ಶ್ರಾವಕಿಯರ ನಿಸಿದಿ ಶಿಲ್ಪಗಳು ಮತ್ತು ಶಾಸನಗಳು ಇವೆ. ಚಂದ್ರ ಬಂಡೆಯ ಹತ್ತಿರ ಹದಿಮೂರನೆ ಶತಮಾನದ ಪಾರ್ಶ್ವನಾಥ ಬಸದಿಯಿದೆ.

ಎರಡನೇ ಕೋಟೆ ಒಂದನೇ ಕೋಟೆಯ ಪಶ್ಚಿಮಕ್ಕೆ ಉತ್ತರ ಭಾಗದಲ್ಲಿದೆ. ಉತ್ತರ-ದಕ್ಷಿಣ ದಿಕ್ಕಿನಲ್ಲಿರುವ ಪೂರ್ವ ಕೋಟೆಗೋಡೆಯ ಮಧ್ಯದಲ್ಲಿ ಎರಡು ವೃತ್ತಾಕಾರದ ಬುರುಜುಗಳ ಮಧ್ಯದಲ್ಲಿ ಪೂರ್ವಾಭಿಮುಖ ವಾಗಿರುವ ಎರಡನೇ ಬಾಗಿಲಿದೆ. ಬಾಗಿಲು ಬಿದ್ದಿರುವುದರಿಂದ ವಿವರಗಳು ಲಭ್ಯವಿಲ್ಲ. ಬಾಗಿಲಿನಿಂದ ಮುಂದೆ ಪಶ್ಚಿಮಕ್ಕೆ ಹೋಗಿ, ನಂತರ ಉತ್ತರಕ್ಕೆ ಹೋದರೆ ಚೌಕಾಕಾರದ ಕಣಜವಿದೆ. ಬಾಗಿಲಿಲ್ಲದ ಈ ಕಟ್ಟಡದ ಮಾಳಿಗೆಯನ್ನು ಕಲ್ಲು ಚಪ್ಪಡಿಗಳಿಂದ ಮಾಡಿದೆ. ಕಣಜದ ಹತ್ತಿರ ಒಂದು ತೋಪು ಬಿದ್ದಿದೆ. ಈ ಕೋಟೆಯ ಈಶಾನ್ಯ ಮೂಲೆಯಲ್ಲಿ ಹಾಲು ಬಾವಿಯಿದೆ. ಇಲ್ಲಿರುವ ಅರ್ಧ ವೃತ್ತಾಕಾರದ ದೊಡ್ಡ ಬುರುಜಿನ ಒಳಭಾಗವನ್ನು ಇದು ಆವರಿಸಿದೆ (ಚಿತ್ರ ೨೧೮). ದೊಡ್ಡದಾದ ಈ ಬಾವಿಗೆ ದಕ್ಷಿಣ ದಿಕ್ಕಿನಲ್ಲಿ ಮೆಟ್ಟಿಲುಗಳಿವೆ. ಬಾವಿಯ ಪಶ್ಚಿಮ ಗೋಡೆಯಲ್ಲಿ ಮುಂದೆ ಚಾಚಿದ ಐದು ಬೋದಿಗೆಗಳಿವೆ. ಒಂದು ಬೋದಿಗೆಯನ್ನು ಮನುಷ್ಯನ ಶಿಲ್ಪದಿಂದ ಅಲಂಕರಿಸಿದೆ. ಬಾವಿಯ ದಕ್ಷಿಣ ಗೋಡೆಯಲ್ಲಿನೀರುಬೀಳುವ ಮೋರಿಯಿದೆ. ಇದು ನೆಲದಡಿಯಲ್ಲಿರುವ ಕಾಲುವೆಯ ಬಾಯಿ,ಇದರ ಕೆಳಭಾಗದ ಕಲ್ಲನ್ನು u ಆಕಾರದಲ್ಲಿ ಮತ್ತು ಮೇಲ್ಭಾಗದ ಕಲ್ಲನ್ನು n ಆಕಾರದಲ್ಲಿ ಕತ್ತರಿಸಿ ನಿರ್ಮಿಸಲಾಗಿದೆ. ಈ ಕಾಲುವೆ ಪಶ್ಚಿಮ ದಿಕ್ಕಿನಲ್ಲಿ ದೂರದಲ್ಲಿ ಕೋಟೆಯ ಹೊರಭಾಗದಲ್ಲಿ ಕಂದಕದಲ್ಲಿರುವ ತೊಟ್ಟಿಯಿಂದ ಬಾವಿಗೆ ನೀರನ್ನು ತರುತ್ತಿತ್ತು. ಮತ್ತೊಂದು ನೆಲದಡಿಯಲ್ಲಿರುವ ಕಾಲುವೆ ಪಶ್ಚಿಮಕ್ಕಿರುವ ಹುಲಿಕೆರೆಯಿಂದ ನೀರನ್ನು ಈ ತೊಟ್ಟಿಗೆ ತರುತ್ತಿತ್ತು. ಇಟ್ಟಿಗೆ ಮತ್ತು ಗಾರೆಯಿಂದ ಮಾಡಿದ ತೊಟ್ಟಿ ಸುಸ್ಥಿತಿಯಲ್ಲಿದೆ (ಚಿತ್ರ ೨೧೯). ಇದರ ಪಕ್ಕದಲ್ಲಿ ನೆಲದಡಿಯಲ್ಲಿಯ ಕಾಲುವೆಯನ್ನು ಈಗಲೂ ನೋಡಬಹುದು. ಕಾಲುವೆಯ ಮೇಲ್ಭಾಗವನ್ನು ಚಪ್ಪಡಿಗಳಿಂದ ಮುಚ್ಚಿದೆ. ತೊಟ್ಟಿಯ ಪಕ್ಕದಲ್ಲಿ ಕಾಲುವೆಯಲ್ಲಿ ಮತ್ತೊಂದು ಚಿಕ್ಕ ತೊಟ್ಟಿಯಿದೆ. ನೀರಿನಲ್ಲಿ ಬರುವ ಕಸಕಡ್ಡಿ, ಹುಳು ಮುಂತಾದುವುಗಳನ್ನು ಇಲ್ಲಿ ಸಂಗ್ರಹಿಸಿ



೨೧೮. ಕೊಪ್ಪಳ. ಹಾಲಬಾವಿ



೨೧೯. ಕೊಪ್ಪಳ, ನೀರಿನ ಕಾಲುವೆ ಮತ್ತು ತೊಟ್ಟಿ

ಹೊರ ತೆಗೆಯುವ ವ್ಯವಸ್ಥೆಗಾಗಿ ಇದನ್ನು ಕಟ್ಟಲಾಗಿದೆ. ಕೆರೆಯಿಂದ ಕೋಟೆಯೊಳಕ್ಕೆ ನೀರನ್ನು ಕಾಲುವೆಯ ಮೂಲಕ ಒಯ್ಯುವ ವ್ಯವಸ್ಥೆಯನ್ನು ಹೈದರಾಲಿಯ ಕಾಲಕ್ಕೆ ಮಾಡಲಾಯಿತು. ಅರಬೋಂಕಿ ಮಸ್ಜಿದ್‌ನಲ್ಲಿರುವ ಕ್ರಿ.ಶ. ೧೭೭೯ರ ಶಾಸನವು ಕೊಪ್ಪಳ ಕೆರೆಯಿಂದ ನೀರನ್ನು ತಂದು ಬಾವಿಗೆ ಹಾಕುವ ಕಾಲುವೆಯ ನಿರ್ಮಾಣವನ್ನು ಉಸ್ಮಾನನು ಮಾಡಿದನೆಂದು ತಿಳಿಸುತ್ತದೆ.[೩೯]

ಎರಡನೇ ಕೋಟೆಯ ದಕ್ಷಿಣ ಭಾಗದಲ್ಲಿ ಪೂರ್ವ ಪಶ್ಚಿಮ ದಿಕ್ಕಿಗಿರುವ ಕೋಟೆಗೋಡೆಯಿದೆ. ಗೋಡೆಯ ಮಧ್ಯದಲ್ಲಿ ಉತ್ತರಾಭಿಮುಖವಾಗಿರುವ ಬಾಗಿಲಿದೆ. ಬಾಗಿಲಿನ ಚೌಕಟ್ಟಿನ ಮೇಲ್ಭಾಗದಲ್ಲಿ ಹೂವಿನ ಚಿತ್ರವಿದೆ. ಬಾಗಿಲನ್ನು ದಾಟಿ ಹೋದಾಗ ವಿಶಾಲವಾದ ಪ್ರದೇಶ ಎದುರಾಗುತ್ತದೆ. ಈ ಭಾಗದ ಪೂರ್ವ ಗೋಡೆಯಲ್ಲಿ ಕಾವಲುಗಾರರ  ಎರಡು ಮನೆಗಳಿವೆ. ಪ್ರತಿಯೊಂದು ಮನೆಯ ಮುಂಭಾಗದಲ್ಲಿ ಮೂರು ಕಮಾನುಗಳಿವೆ (ಚಿತ್ರ ೨೨೮). ಈಶಾನ್ಯ ಮೂಲೆಯಲ್ಲಿ ಒಂದು ಅಗಲವಾದ ಇಳಿಜಾರು (ramp) ಇದೆ ತೋಪುಗಳನ್ನು ಕೋಟೆ ಗೋಡೆಯ ಮೇಲೆ ಒಯ್ಯುವುದಕ್ಕಾಗಿ ಇದನ್ನು ನಿರ್ಮಿಸಿದೆ. ಒಳಗೆ ಹೋದ ಬಾಗಿಲಿನಿಂದ ಹೊರಗೆ ಮರಳಿ ಬಂದು, ಮೊದಲು ಉತ್ತರಕ್ಕೆ, ನಂತರ ಪಶ್ಚಿಮಕ್ಕೆ ಹೋದಾಗ ಪೂರ್ವಾಭಿಮುಖವಾಗಿರುವ ಮೂರನೇ ಬಾಗಿಲಿದೆ. ಬಾಗಿಲಿನ ದಕ್ಷಿಣ ಬದಿಯಲ್ಲಿ ವೃತ್ತಾಕಾರದ ಬುರುಜಿದೆ. ಸುಸ್ಥಿತಿಯಲ್ಲಿರುವ ಬಾಗಿಲ ಚೌಕಟ್ಟಿನ ಮೇಲೆ ಕುರುಡು ಕಮಾನಿದೆ. ಮೇಲಿನ ಕೈಪಿಡಿ ಗೋಡೆಯಲ್ಲಿ ಐದು ತೆನೆಗಳಿವೆ. ಬಾಗಿಲ ಪ್ರವೇಶದ ಛಾವಣಿ ಕಮಾನಿನಾಕಾರದಲ್ಲಿದೆ. ಒಳಗೆ ಕಟ್ಟೆ ಅಥವಾ ಕಂಬಗಳು ಇಲ್ಲ. ಈ ಬಾಗಿಲಿನ ಪಕ್ಕದ ಕೋಟೆಗೋಡೆ ಉಳಿದಿಲ್ಲ. ಇಲ್ಲಿಂದ ಮುಂದೆ ನೈರುತ್ಯಕ್ಕೆ ಮೂರನೇ ಕೋಟೆಯಿದೆ.

ಮೂರನೇ ಕೋಟೆಯಲ್ಲಿ ಪೂರ್ವಾಭಿಮುಖವಾಗಿರುವ ನಾಲ್ಕನೇ ಬಾಗಿಲಿದೆ. ಸುಸ್ಥಿತಿಯಲ್ಲಿರುವ ಈ ದೊಡ್ಡ ಬಾಗಿಲನ್ನು ಸುಲ್ತಾನ ಬಾಗಿಲೆಂದು ಕರೆಯುತ್ತಾರೆ (ಚಿತ್ರ ೨೨೨). ಅಲಂಕಾರವಿಲ್ಲದ ಬಾಗಿಲಿನ ಮೇಲ್ಭಾಗದ ಗೂಡಿನಲ್ಲಿ ಶಾಸನವಿದೆ. ಟೀಪು ಸುಲ್ತಾನನ ಕಾಲದಲ್ಲಿ ಕೋಟೆಯ ಅಧಿಕಾರಿಯಾಗಿದ್ದ ಮಹಮ್ಮದ್‌ಖಾನ್ ದೈಲಮಿಯು ಕ್ರಿ.ಶ. ೧೭೮೩ರಲ್ಲಿ ಈ ಬಾಗಿಲನ್ನು ಕಟ್ಟಿಸಿ ಸುಲ್ತಾನ್‌ಬಾಬ್ (ಸುಲ್ತಾನ ಬಾಗಿಲು) ಎಂದು ಹೆಸರಿಟ್ಟನೆಂದು ಈ ಶಾಸನದಿಂದ ತಿಳಿಯುತ್ತದೆ.[೪೦] ಪ್ರವೇಶದ ಪಾರ್ಶ್ವಗಳಲ್ಲಿಯ ಕಟ್ಟೆಯ ಅದಿಷ್ಠಾನದ ಮೇಲೆ ಆನೆಯ ಉಬ್ಬು ಶಿಲ್ಪಗಳು ಮತ್ತು ಪ್ರತಿ ಕಟ್ಟೆಯ ಮೇಲೆ ಎರಡು ಕಂಬಗಳ ಮೂರು ಅಂಕಣಗಳು ಮತ್ತು ಗೋಡೆಗಳಲ್ಲಿ ಕಮಾನಿನಾಕಾರದ ದೊಡ್ಡ ಗೂಡುಗಳು ಇವೆ. ಈ ಬಾಗಿಲನ್ನು ದಾಟಿ ಮುಂದೆ ಹೋದಾಗ ಎಡಕ್ಕೆ ಶಿಥಿಲವಾದ ಚೌಕಾಕಾರದ ಕಟ್ಟಡವಿದೆ. ಬಾಗಿಲಿನ ಪಶ್ಚಿಮಕ್ಕೆ ಸ್ವಲ್ಪ ದೂರದಲ್ಲಿ




೨೨೦. ಕೊಪ್ಪಳ, ಸುಲ್ತಾನ ಬಾಗಿಲು.




೨೨೧. ಕೊಪ್ಪಳ, ಬೆಟ್ಟದ ತುದಿಯಲ್ಲಿಯ ಬತೇರಿ

ಉತ್ತರ-ದಕ್ಷಿಣ ದಿಕ್ಕಿನಲ್ಲಿರುವ ಗೋಡೆಯಿದೆ. ಇವರ ಮಧ್ಯದಲ್ಲಿ ಪಶ್ಚಿಮಾಭಿಮುಖವಾಗಿರುವ ಬಾಗಿಲಿದೆ. ಬಾಗಿಲ ಚೌಕಟ್ಟಿನ ಮೇಲ್ಭಾಗದಲ್ಲಿ ಹೂವಿನ ಶಿಲ್ಪವಿದೆ. ಬಾಗಿಲ ಮೇಲೆ ಕುರುಡು ಕಮಾನಿದೆ. ಈ ಗೋಡೆಯ ಪಶ್ಚಿಮಕ್ಕಿರುವ ಆವರಣದಲ್ಲಿ ನಾಲ್ಕು ಕಂಬ ಮತ್ತು ಒಂಬತ್ತು ಅಂಕಣಗಳ ಒಂದು ದೊಡ್ಡ ಕಟ್ಟಡ ಮತ್ತೊಂದು ಚಿಕ್ಕ ಕಟ್ಟಡ ಇವೆ.

ಸುಲ್ತಾನ ಬಾಗಿಲಿನಿಂದ ಮುಂದೆ ಹೋದಾಗ ಬಂಡೆಯ ಪಕ್ಕದಲ್ಲಿ ಒಂದು ಬಾವಿಯಿದೆ. ಬಾವಿಯ ಮುಂದಿನ ಗೋಡೆಯಲ್ಲಿ ಬಾಗಿಲ ಚೌಕಟ್ಟಿದೆ (ಚಿತ್ರ ೨೨೩). ಇಲ್ಲಿಂದಮುಂದೆ ಹೋದಾಗ ಒಂದು ಗವಿಯಿದೆ. ಈ ಗವಿಯ ಮುಂಭಾಗವನ್ನು ನಾಲ್ಕು ಕಂಬಗಳ ಕಾವಲುಗಾರರ ಮಂಟಪವನ್ನಾಗಿ ಮಾಡಲಾಗಿದೆ (ಚಿತ್ರ ೨೨೪). ಅದರ ಪಕ್ಕದಲ್ಲಿ ಒಂದು ಕೊಠಡಿಯಿದೆ. ಮುಂದೆ ಕಡಿದಾದ ಮೆಟ್ಟಿಲುಗಳನ್ನು ಹತ್ತಿದಾಗ ಪೂರ್ವಾಭಿಮುಖವಾದ ಚೌಕಟ್ಟಿಲ್ಲದ, ಸರಳವಾದ ಕಮಾನಿನ ಐದನೇ ಬಾಗಿಲಿದೆ. ಈ ಬಾಗಿಲಿನಿಂದ ಪಶ್ಚಿಮಕ್ಕೆ ಹೋಗಿ, ದಕ್ಷಿಣಕ್ಕೆ ಸಾಗಿದಾಗ ಚೌಕಾಕಾರದ ದೊಡ್ಡ ಕಣಜವಿದೆ. ಕಣಜದ ಗೋಡೆಯಲ್ಲ ಮೇಲ್ಭಾಗದಲ್ಲಿ ಎರಡು ಚಿಕ್ಕ ಬಾಗಿಲುಗಳಿವೆ (ಚಿತ್ರ ೨೨೫). ಇದರ ಛಾವಣಿಯನ್ನು ಕಲ್ಲಿನ ತೊಲೆ ಮತ್ತು ಚಪ್ಪಡಿಗಳಿಂದ ನಿರ್ಮಿಸಿದೆ. ಈ ಕಟ್ಟಡದ ಪಶ್ಚಿಮಕ್ಕಿರುವ ದೊಡ್ಡ ಬುರುಜಿನ ಕೈಪಿಡಿ ಗೋಡೆಯಲ್ಲಿ ತೋಪುಗಳಿಗಾಗಿ ಮಾಡಿದ ಸಂದಿಗಳಿವೆ. ಮುಂದೆ ಮೆಟ್ಟಿಲುಗಳನ್ನು ಹತ್ತುತ್ತ ಹೋದಾಗ ಪಶ್ಚಿಮಾಭಿಮುಖವಾದ ಮತ್ತೊಂದು ಬಾಗಿಲಿದೆ. ಇದು ಆರನೆಯ ಬಾಗಿಲು. ಈ ಬಾಗಿಲಲ್ಲಿ ಅಲಂಕಾರವಿಲ್ಲದ ಚೌಕಟ್ಟಿದೆ (ಚಿತ್ರ ೨೨೬). ಬಾಗಿಲ ಪ್ರವೇಶದ ಬಲಭಾಗದ ಗೋಡೆಯಲ್ಲಿ ಒಂದು ಪರ್ಶಿಯನ್ ಶಾಸನವಿದೆ. ಕ್ರಿ.ಶ. ೧೭೭೯ರ ಶಾಸನದಲ್ಲಿ ಬಾಗಿಲನ್ನು ಮಕ್ಕ ದರ್ವಾಜವೆಂದು ಉಲ್ಲೇಖಿಸಿದೆ.[೧೦] ಇದನ್ನು ದಾಟಿದ ಮೇಲೆ ನಾಲ್ಕನೆಯ ಕೋಟೆಯ ಒಳಗಿರುತ್ತೇವೆ. ಈ ಕೋಟೆಯೊಳಗೆ ಸುಸ್ಥಿತಿಯಲ್ಲಿರುವ ಒಂದು ದೊಡ್ಡ ಕೊಳವಿದೆ. ಕೊಳದ ಬದಿಗಳಿಗೆ ಮತ್ತು ಅದರ ಸುತ್ತಲಿನ ನೆಲಕ್ಕೆ ಗಾರೆಯನ್ನು ಮಾಡಿದೆ. ಕೊಳದ ನೈರುತ್ಯಕ್ಕಿರುವ ಚಿಕ್ಕ ತೊಟ್ಟಿಯಲ್ಲಿ ಕಸ ಕಡ್ಡಿ ಸಂಗ್ರಹವವಾದ ಮೇಲೆ ನೀರು ಈ ಕೊಳಕ್ಕೆ ಬರುತ್ತದೆ. ಕೊಳದ ಪಶ್ಚಿಮಕ್ಕೆ ಮತ್ತೊಂದು ಬಾಗಿಲಿದೆ. ಐದನೇ ಕೋಟೆಯಲ್ಲಿ ಉತ್ತರಾಭಿಮುಖವಾಗಿರುವ ಈ ಬಾಗಿಲು ಏಳನೆಯದು. ಈ ಬಾಗಿಲಿನ ಅಲಂಕಾರ ರಹಿತ ಚೌಕಟ್ಟಿನ ಮೇಲ್ಭಾಗದಲ್ಲಿ ಕುರುಡು ಕಮಾನಿದೆ (ಚಿತ್ರ ೨೨೭). ಈ ಬಾಗಿಲ ಪಕ್ಕದಲ್ಲಿರುವ ದಿಡ್ಡಿಯ ಮೂಲಕ ಕೊಳಕ್ಕೆ ಹೋಗಬಹುದು. ಮುಂದೆ ದಾರಿಯ ಎರಡೂ ಬದಿಗೆ ಒಂದೊಂದು ದೊಡ್ಡ ಕಟ್ಟಡವಿದೆ. ಪ್ರತಿ ಕಟ್ಟಡದ ಮುಂಭಾಗದಲ್ಲಿ ಬಾಗಿಲಿದೆ. ಶಿಥಿಲಾವಸ್ಥೆಯ ಕಟ್ಟಡಗಳಿಗೆ ಛಾವಣಿಯಿಲ್ಲ.

ಆರನೇ ಕೋಟೆಯಲ್ಲಿಯ ಬಾಗಿಲು ಎಂಟನೆಯದು. ಇದು ಪಶ್ಚಿಮಾಭಿಮುಖವಾಗಿದೆ. ಬಾಗಿಲ ಪಕ್ಕದಲ್ಲಿ ಹದಿನೆಂಟನೇ ಶತಮಾನದ ಒಂದು ಶೈವ ದೇವಾಲಯವಿದೆ. ಪೂರ್ವಾಭಿಮುಖವಾಗಿರುವ ದೇವಾಲಯದ ಹೊರ ಬಾಗಿಲ ಚೌಕಟ್ಟಿನ ಕೆಳಗೆ ಶೈವ ದ್ವಾರಪಾಲರ ಮತ್ತು ಮೇಲೆ ಗಣೇಶನ ಶಿಲ್ಪ ಇವೆ (ಚಿತ್ರ ೨೭೯). ಬಾಗಿಲ ಪಕ್ಕದ ಗೋಡೆಯಲ್ಲಿ ಒಂದೊಂದು ಬದಿಯಲ್ಲಿ ಒಂದೊಂದು ಚೌಕಾಕಾರದ ಗೂಡುಗಳಿವೆ. ಗರ್ಭಗುಡಿಯ ಬಾಗಿಲ ಕೆಳಗೆ ಹೂ ಮತ್ತು ಮೇಲೆ ಗಣೇಶನ ಶಿಲ್ಪಗಳಿವೆ. ಗರ್ಭಗುಡಿಯ ಛಾವಣಿ ಅಲಂಕಾರಮಯ ವಾಗಿದೆ. ದೇವಾಲಯದಲ್ಲಿ ಯಾವುದೇ ದೇವರ ವಿಗ್ರಹವಿಲ್ಲ. ದೇವಾಲಯದ ಹೊರಗೋಡೆಯ ಮೇಲೆ ಕಾಳಿಂಗಮರ್ದನ ಕೃಷ್ಣ, ಆಂಜನೇಯ, ಗಣೇಶ, ಕೈಯೂರಿ ಕುಳಿತ ಮನುಷ್ಯ, ಸಿಂಹ, ಹಾವು, ಮೀನು ಮುಂತಾದ ಶಿಲ್ಪಗಳಿವೆ. ಈ ಕೋಟೆಯೊಳಗೆ ಒಂದು ಆಳವಾದ ಕೊಳ, ಅದರ ಎರಡು ಬದಿಗೆ ಇಟ್ಟಿಗೆ ಮತ್ತು ಗಾರೆಯ ಎರಡು ದೊಡ್ಡ ಕಟ್ಟಡಗಳು, ದುರ್ಗಾ ದೇವಾಲಯ ಮತ್ತು ಇತರ ಕಟ್ಟಡಗಳಿವೆ.

ಬಾಗಿಲನ್ನು ದಾಟಿ ಮುಂದೆ ಬಂದಾಗ ಮೊದಲು ಸಿಗುವುದು ಒಂದು ದೊಡ್ಡ ಆಯತಾಕಾರದ ಕಟ್ಟಡ. ಇಟ್ಟಿಗೆ ಮತ್ತು ಗಾರೆಯನ್ನು ಬಳಸಿ ಇದನ್ನು ಚೆನ್ನಾಗಿ ಕಟ್ಟಿದೆ. ಉತ್ತರಾಭಿಮುಖವಾಗಿರುವ ಈ ಕಟ್ಟಡದ ಮುಂಭಾಗದಲ್ಲಿ ಎರಡು ದುಂಡನೆಯ ಕಂಬಗಳಿವೆ. ಈ ಕಟ್ಟಡದ ಪೂರ್ವಕ್ಕೆ ಮತ್ತೊಂದು ಆಯತಾಕಾರದ ಕಟ್ಟಡವಿದೆ. ಇವೆರಡರ ಮಧ್ಯದಲ್ಲಿ ದಕ್ಷಿಣಕ್ಕೆ ಮುಂದೆ ಹೋದಾಗ ಆಳವಾದ ನೀರಿನ ಕೊಳವಿದೆ. ಈ ಕಟ್ಟಡಗಳ ಪೂರ್ವಕ್ಕೆ ದುರ್ಗಾ ದೇವಾಲಯವಿದೆ. ಚಿಕ್ಕದಾದ ಈ ದೇವಾಲಯದಲ್ಲಿ ಗರ್ಭ ಗುಡಿ ಮತ್ತು ಎರಡು ಕಂಬಗಳ ಮುಖ ಮಂಟಪ ಇವೆ. ದೇವಾಲಯದ ಉತ್ತರಕ್ಕೆ ಒಂದು ಕಟ್ಟಡದ ಅವಶೇಷಗಳಿವೆ. ದೇವಾಲಯದ ದಕ್ಷಿಣಕ್ಕೆ ದೊಡ್ಡ ಕಟ್ಟಡದ ಅವಶೇಷಗಳಿವೆ. ಈ ಕಟ್ಟಡದೊಳಗೆ ಗಾರೆ ಅರೆಯುವ ಎರಡು ವೃತ್ತಾಕಾರದ ಕಲ್ಲುಗಳಿವೆ. ಬೀಸುವ ಕಲ್ಲಿನಂತಿರುವ ಈ ಕಲ್ಲುಗಳಿಗೆ ಗಾರೆ ಮೆತ್ತಿಕೊಂಡಿದೆ. ನೀರಿನ ಕೊಳದ ಪಕ್ಕದಲ್ಲಿರುವ ದೊಡ್ಡ ಕಟ್ಟಡವು ನೀರಿನ ಪಕ್ಕದಲ್ಲಿರುವುದರಿಂದ ಇದನ್ನು ಪಾನೀ ಮಹಲ್ (ಜಲ ಭವನ water palace) ಎಂದು ಕರೆದಿರುವ ಸಾಧ್ಯತೆ ಇದೆ. ಹೈದರಾಲಿಯ ಅಧಿಕಾರಿ ಉಸ್ಮಾನನು ಕ್ರಿ.ಶ. ೧೭೭೭ರಲ್ಲಿ ಪಾನೀಮಹಲ್, ದೀವಾನ್ -ಇ-ಖಾಸ್ (ಖಾಸಗಿ ದರ್ಬಾರ್ ಸಭಾಂಗಣ) ಮುಂತಾದವುಗಳನ್ನು ಕಟ್ಟಿಸಿದನೆಂದು ಶಾಸನದಿಂದ ತಿಳಿಯುತ್ತದೆ.೪೨ ಈ ಕೋಟೆಯ ಪೂರ್ವಕ್ಕೆ ಒಂದು ದಿಡ್ಡಿಯಿದೆ.

ಏಳನೆಯ ಅಥವಾ ಕೊನೆಯ ಸುತ್ತಿನ ಕೋಟೆಯ ಬಾಗಿಲು ಒಂಬತ್ತನೆಯದು. ಇದು ಪೂರ್ವಾಭಿಮುಖವಾಗಿದೆ. ಸಾಧಾರಣವಾದ ಬಾಗಿಲ ಚೌಕಟ್ಟಿನ ಮೇಲೆ ಇಟ್ಟಿಗೆ ಗಾರೆಯ ಕುರುಡು ಕಮಾನಿದೆ. ಬಾಗಿಲನ್ನು



೨೨ಳ. ಕೊಪ್ಪಳ, ಮೂರನೇ ಸುತ್ತಿನಲ್ಲಿಯ ಕಾವಲುಗಾರರ ಮಂಟಪ ಮತ್ತು ಕೊಠಡಿ



೨೨ೞ. ಕೊಪ್ಪಳ, ಕಣಜ

೨೨೮. ಕೊಪ್ಪಳ. ಎರಡನೇ ಸುತ್ತಿನಲ್ಲಿಯ ಕಾವಲುಗಾರರ ಕೊಠಡಿ



೨೨೯. ಕೊಪ್ಪಳ, ಶೈವ ದೇವಾಲಯ



೨೩೦. ಕೊಪ್ಪಳ, ಒಂಬತ್ತನೇ ಬಾಗಿಲಿನ ಶಾಸನ



೨೩೧. ಕೊಪ್ಪಳ, ಏಳನೇ ಸುತ್ತಿನಲ್ಲಿಯ ಬತೇರಿ



೨೩೨. ಕೊಪ್ಪಳ, ದಕ್ಷಿಣ ಭಾಗದಲ್ಲಿಯ ಬತೇರಿ



೨೩೩. ಕೊಪ್ಪಳ, ಬುರುಜಿನ ಮೇಲಿನ ಕೈಪಿಡಿ ಗೋಡೆ

ದಾಟಿದ ಮೇಲೆ ಬಾಗಿಲ ಪಕ್ಕದಲ್ಲಿ ದಕ್ಷಿಣಕ್ಕಿರುವ ಗೋಡೆಯಲ್ಲಿ ಒಂದು ಶಾಸನವಿದೆ (ಚಿತ್ರ ೨೩೦). ಹೈದರಾಲಿಯ ಆಳ್ವಿಕೆಯ ಕ್ರಿ.ಶ. ೧೭೭೭ರ ಶಾಸನವು ಮಹಮ್ಮದ್ ಉಸ್ಮಾನನು ಕೊಪ್ಪಳ ಕೋಟೆಯನ್ನು ಭದ್ರಪಡಿಸಿ, ಅನೇಕ ಸ್ಥಳಗಳಲ್ಲಿ ಐರೋಪ್ಯ ಶೈಲಿಯ ಬತೇರಿಗಳನ್ನು ಕಟ್ಟಿಸಿ, ಕೆರೆ, ಕಾಲುವೆ, ಕಂದಕ ಮುಂತಾದುವುಗಳನ್ನು ತೋಡಿಸಿದನೆಂದು ತಿಳಿಸುತ್ತದೆ.[೪೩] ಬಾಗಿಲನ್ನು ದಾಟಿದ ಮೇಲೆ ಎದುರಿಗೆ ಆಯತಾಕಾರದ ಕಟ್ಟಡವಿದೆ. ಇದರ ಹಿಂದೆ ಮೂರು ಕಣಜಗಳಿವೆ. ಕೋಟೆಯೊಳಗೆ ಮಧ್ಯದಲ್ಲಿ ಎತ್ತರವಾದ ಅರ್ಧ ವೃತ್ತಾಕಾರದ ದೊಡ್ಡ ಬತೇರಿಯಿದೆ. ಇದರ ಪಕ್ಕದಲ್ಲಿ ಪಶ್ಚಿಮಕ್ಕೆ ಎರಡು ಕೊಠಡಿಗಳ ಒಂದು ಕಟ್ಟಡವಿದೆ (ಚಿತ್ರ ೨೩೧). ಈ ಬತೇರಿಯ ನೈರುತ್ಯಕ್ಕೆ ಮತ್ತೊಂದು ಬತೇರಿಯಿದೆ. ಇದರ ಪಶ್ಚಿಮಕ್ಕೆ ಎರಡು ಕೊಠಡಿಗಳ ಒಂದು ಚಿಕ್ಕ ಕಟ್ಟಡ ಮತ್ತು ಬತೇರಿಯ ಮೆಟ್ಟಿಲುಗಳ ಪೂರ್ವಕ್ಕೆ ಒಂದು ಚಿಕ್ಕ ಕೊಠಡಿ ಇವೆ. ಈ ಪ್ರದೇಶದ ಪಶ್ಚಿಮಕ್ಕಿರುವ ಕೋಟೆ ಗೋಡೆಯ ಪಕ್ಕದಲ್ಲಿ ಅಂದವಾಗಿ ಕಟ್ಟಿ ಗಾರೆ ಮಾಡಿದ ಚಿಕ್ಕ ತೊಟ್ಟಿಯಿದೆ. ಇದರ ಪಕ್ಕದಲ್ಲಿ ಕೋಟೆಗೋಡೆಗೆ ತಾಗಿದಂತೆ ಒಂದು ಚಿಕ್ಕ ಕೊಠಡಿಯಿದೆ. ಪೂರ್ವಾಭಿಮುಖವಾದ ಕೊಠಡಿಯ ಮುಂದಿನ ಬಂಡೆಯ ಮೇಲೆ ಒಂದು ಅಸ್ಪಷ್ಟವಾದ ಪರ್ಶಿಯನ್ ಶಾಸನವಿದೆ. ಮಧ್ಯದಲ್ಲಿರುವ ಬತೇರಿಯ ಕೆಳಗಿನ ಬಂಡೆಯ ಮೇಲೆ ಎರಡು ಪರ್ಶಿಯನ್ ಶಾಸನಗಳಿವೆ. ಅವುಗಳಲ್ಲಿ ಒಂದರಲ್ಲಿ ಉಸ್ಮಾನನ ಹೆಸರು ಮಾತ್ರವಿದ್ದು ಮತ್ತೊಂದರಲ್ಲಿ ಹಿಜರಿ ೧೧೯೩ (ಕ್ರಿ.ಶ. ೧೭೭೯) ಮತ್ತು ಉಸ್ಮಾನನ ಹೆಸರು ಇವೆ. ಈ ಮೂರೂ ಶಾಸನಗಳು ಅಪ್ರಕಟಿತ. ಬೆಟ್ಟದ ತುದಿಯಲ್ಲಿರುವ ಕೋಟೆಯೊಳಗೆ ನೀರಿನ ವ್ಯವಸ್ಥೆ ಬಹಳ ಚೆನ್ನಾಗಿದೆ. ಇಲ್ಲಿ ಆರು ನೀರಿನ ಕೊಳಗಳಿವೆ. ಇವುಗಳಲ್ಲಿ ಕೆಲವು ನೈಸರ್ಗಿಕವಾಗಿದ್ದರೆ ಕೆಲವಕ್ಕೆ ಒಂದು ಬದಿಗೆ ಗೋಡೆ ಕಟ್ಟಿ ನಿರ್ಮಿಸಲಾಗಿದೆ. ಈ ಭಾಗದಲ್ಲಿ ಬಿದ್ದ ಮಳೆಯ ನೀರು ಹೊರಗೆ ಹರಿದು ಹೋಗದೆ ಈ ಕೊಳಗಳಲ್ಲಿ ಸಂಗ್ರಹವಾಗುತ್ತದೆ. ಕಣಜಗಳ ಪಕ್ಕದ ಆಳವಾದ ಕೊಳದಲ್ಲಿ ಒಂದು ತೋಪು ಬಿದ್ದಿದೆ.

ಏಳನೇ ಕೋಟೆ ಆಗ್ನೇಯಕ್ಕೆ ಬೆಟ್ಟದ ಮೇಲೆ ವರ್ತುಲಾಕಾರದ ಒಂದು ಬತೇರಿಯಿದೆ. ಇದರ ಕೈಪಿಡಿಗೋಡೆ ಹೊರ ಭಾಗಕ್ಕೆ ಇಳಿಜಾರಾಗಿದೆ (ಚಿತ್ರ ೨೩೩). ಗೋಡೆಯಲ್ಲಿ ತೋಪಿನ ಐದು ಸಂದಿಗಳಿವೆ. ಇವುಗಳ ಒಳಭಾಗ ಕಿರಿದಾಗಿದ್ದು ಹೊರಭಾಗ ಅಗಲವಾಗಿದೆ. ಇಂತಹ ಕೈಪಿಡಿಗೋಡೆ ಬೆಟ್ಟದ ತುದಿಯಲ್ಲಿ ಮತ್ತು ಇತರ ಭಾಗಗಳಲ್ಲಿರುವ ಬತೇರಿಗಳ ಮೇಲೆ, ಕೆಲವು ಬುರುಜುಗಳ ಮೇಲೆ ಮತ್ತು ಕೆಲವು ಕಡೆ ಕೋಟೆಗೋಡೆಯ ಮೇಲಿದೆ. ಹೊರಭಾಗಕ್ಕೆ ಇಳಿಜಾರಾಗಿ ಕೈಪಿಡಿ ಗೋಡೆಯನ್ನು ಕಟ್ಟುವುದರಿಂದ ವೈರಿ ಸಿಡಿಸಿದ ತೋಪಿನ ಗುಂಡು ಬಂದು ತಾಗಿದಾಗ, ಗೋಡೆಗೆ ಹೆಚ್ಚು ಪೆಟ್ಟಾಗದೆ ಗುಂಡು ಹಿಂದೆ ಜಾರಿ ಬೀಳುವುದು. ಇಂತಹ

೧೧. *EI*, I, No. 6, p. 57.

೧೨. Patil Channabasappa S. and Vinoda C. Patil, *ಪೂರ್ವೋಕ್ತ*, No.119-122; *ARIE*- 65, No. B 430-433; ಶಾಪ. ಸಂ. ೨೨. ದೇವರಕೊಂಡಾರೆಡ್ಡಿ, *ಪೂರ್ವೋಕ್ತ*, ಕೊಪ್ಪಳ ತಾಲೂಕ ಸಂ. ೩.

೧೩. Desai P. B. etal, *ಪೂರ್ವೋಕ್ತ*, p. 266.

೧೪. Patil Channabasappa S. and Vinoda C. Patil, *ಪೂರ್ವೋಕ್ತ*, No. 173; *ARIE*, 1963-64, No. B 381.

೧೫. ದೇವೀರಪ್ಪ ಎಚ್. ೧೯೬೪ *ನಂಜುಂಡ ಕವಿ ವಿರಚಿತ ರಾಮನಾಥ ಚರಿತ*, ಸಂಪುಟ ೩. ಸಂಧಿ ೨೧, ಪದ್ಯ ೮೦.

೧೬. Patil Channabasappa S. and Vinoda C. Patil, *ಪೂರ್ವೋಕ್ತ*, No.152; *ARIE*, 1962-63, No. D 171; *EIAPS*, 1964, pp. 27-28, pl. ix (a)

೧೭. *ಅದೇ*, Nos. 174, 186.

೧೮. *ಅದೇ*, No. 126.

೧೯. *ಅದೇ*, No. 174.

೨೦. *ಅದೇ*, No.163; *EIM*, 1929-30, pp. 15-16, pl. x; *ARIE*, 1984-85, No. C 144.

೨೧. *ಅದೇ*, No.153; *ARIE*, 1962-63, No. D 172.

೨೨. *ಅದೇ*, No. 161; *EIM*, 1929-30, p. pl. ix (a); *ARIE*, 1984-85, No. 14 C 142.

೨೩. *ಅದೇ*, No. 184-186.

೨೪. *ಅದೇ*, No. 157; *JHAS*, 1916, p. 97, pl. xxxii.

೨೫. *ಅದೇ*, No. 154; *JHAS*, 1916, p. 96, pl. xxx; *ARIE*, 1962-63, No. D 173.

೨೬. *ಅದೇ*, No. 162; *EIM*, 1929-30, p.15, pl. ix (b); *ARIE*, 1984-85, No. C 141.

೨೭. *ಅದೇ*, No. 156; *JHAS*, 1916, p. 97, pl. xxxi.

೨೮. *ಅದೇ*, No. 159; *EIM*, 1929-30, p. 17, pl. xi (a); *ARIE*, 1962-63, No. D 175.

೨೯. *ಅದೇ*, No. 155; *JHAS*, 1916, pp. 96-97, pl. xxxi.

೩೦. *ಅದೇ*, No. 158; *EIM*, 1929-30, p. 16, pl. ix (c); *ARIE*, 1962, No. D 174.

೩೧. *Raichur District Gazetteer*, 1970, p. 81.

೩೨. *ಅದೇ*, p. 80.

೩೩. ಪಾಟೀಲ ಬಿ. ಸಿ., ೧೯೯೮, *ಕೊಪ್ಪಳ ಸಾಂಸ್ಕೃತಿಕ ಪರಂಪರೆ,* ಪು. ೫೨-೭೮; ಪಾಟೀಲ ಚನ್ನಬಸಪ್ಪ ಎಸ್. ೧೯೯೯, *ಕರ್ನಾಟಕ ಕೋಟೆಗಳು,* ಸಂಪುಟ ೧, ಪು. ೭೯-೮೪.

೩೪. Patil Channabasappa S. and Vinoda C. Patil, *ಪೂರ್ವೋಕ್ತ,* No.159; EIM, 1929-30, p. 17, pl. xi (a); *ARIE,* 1962-63, No. D 175.

೩೫. ನಾಗರಾಜಯ್ಯಹಂಪ, ೧೯೯೮, *ಕೊಪ್ಪಳ ಶಾಸನಗಳು* Patil Channabasapp S and Vinoda C. Patil, *ಪೂರ್ವೋಕ್ತ,* No.188-240; ದೇವರಕೊಂಡಾರೆಡ್ಡಿ, *ಪೂರ್ವೋಕ್ತ,* ಕೊಪ್ಪಳ ತಾಲೂಕ ಸಂ.೭೯-೧೨೭.

೩೬. Patil Channabasappas. and Vinoda C. Patil, *ಪೂರ್ವೋಕ್ತ,* No. 163; *EIM,* 1929-30, pp. 15-16, pl. x; *ARIE,* 1984-85, No. C.144.

೩೭. *ಅದೇ,* No. 158; *EIM,* 1929-30, p. 16, pl. ix (c); *ARIE,* 1962-63, No. D 174.

೩೮. *ಅದೇ,* No. 161; *EIM,*1929-30, p.14, pl. ix (a); *ARIE,* 1984-85, No.C 142.

೩೯. *ಅದೇ,* No. 162; *EIM,* 1929-30, p. 15, pl. ix (b); *ARIE,*1984-85, No. C 141.

೪೦. *ಅದೇ,* No.155; *JHAS,* 1916, pp. 96-97,pl. xxi(2).

೪೧. *ಅದೇ,* No. 156; *JHAS,* 1916,p. 97, pl.xxxi.

೪೨. *ಅದೇ,* No. 154; *JHAS,* 1916, p. 96, pl.xxx.

೪೩. *ಅದೇ,* No. 157; *JHAS,* 1916, p. 97, pl. xxxii.

# ೧೫. ಬಹಾದ್ದೂರಬಂಡ

ಬಹಾದ್ದೂರಬಂಡ ಕೊಪ್ಪಳ ತಾಲೂಕಿನಲ್ಲಿ ಕೊಪ್ಪಳದ ದಕ್ಷಿಣಕ್ಕೆ ನಾಲ್ಕು ಕಿ.ಮೀ. ದೂರದಲ್ಲಿ ಅಕ್ಷಾಂಶ ೧೫° ೧೭' ಉತ್ತರ ಮತ್ತು ರೇಖಾಂಶ ೭೬° ೧೧' ಪೂರ್ವದಲ್ಲಿರುವ ಒಂದು ಚಿಕ್ಕ ಗ್ರಾಮ. ಗ್ರಾಮದ ಪಕ್ಕದಲ್ಲಿ ದಕ್ಷಿಣಕ್ಕಿರುವ ಬೆಟ್ಟದ ಮೇಲೆ ಸುಸ್ಥಿತಿಯಲ್ಲಿರುವ ಎರಡು ಸುತ್ತಿನ ಚಿಕ್ಕ ಕೋಟೆಯಿದೆ. ಈ ಕೋಟೆಗೆ ಸಂಬಂಧಿಸಿದ ಐದು ಶಾಸನಗಳು ಇಲ್ಲಿವೆ.

### ಐತಿಹಾಸಿಕ ಹಿನ್ನೆಲೆ

ಮೈಸೂರಿನಿಂದ ಆಳುತ್ತಿದ್ದ ಹೈದರಾಲಿಯು ಉತ್ತರ ಕರ್ನಾಟಕಕ್ಕೆ ತನ್ನ ರಾಜ್ಯವನ್ನು ವಿಸ್ತರಿಸಿ, ಕೊಪ್ಪಳ ಕೋಟೆಯನ್ನು ಗೆದ್ದು ನಂತರ ಇಲ್ಲಿಯ ಕೋಟೆಯನ್ನು ಕಟ್ಟಿಸಿದನು. ಹೈದರಾಲಿಯ ಹೆಸರು ಹೈದರ್ ಅಲಿಖಾನ್ ಬಹದೂರ್, ನವಾಬ್ ಬಹದೂರ್ ಮತ್ತು ನವಾಬ್ ಫತ್ ಬಹದೂರ್ ಎಂದು ಕೊಪ್ಪಳ ಮತ್ತು ಬಹಾದ್ದೂರ್ ಬಂಡ ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಬಹಾದ್ದೂರ್ ಎನ್ನುವುದು ಹೈದರಾಲಿಯ ಹೆಸರು. ಬಂಡ ಎಂದರೆ ಬಂಡೆ ಅಥವಾ ಕಲ್ಲು ಎಂದರ್ಥ. ಹೈದರಾಲಿಯ ಕಾಲದಲ್ಲಿ ಕೋಟೆಯನ್ನು ಬಂಡೆಯ ಮೇಲೆ ಕಟ್ಟಿಸಿರುವುದರಿಂದ ಇದಕ್ಕೆ ಬಹಾದ್ದೂರ್‌ಬಂಡ ಎಂಬ ಹೆಸರು ಬಂದಿದೆ.

ಹೈದರಾಲಿಯ ಆಳ್ವಿಕೆಯಲ್ಲಿ ಕ್ರಿ.ಶ. ೧೭೮೧-೮೨ರಲ್ಲಿ ಕೊಪ್ಪಳ ಕೋಟೆಯ ಕಿಲ್ಲೇದಾರನಾದ ಶೇಖ್‌ಮಹಮ್ಮದ್‌ನು ಈ ಕೋಟೆಯನ್ನು ಕಟ್ಟಿಸಿದನು. ಕೋಟೆ ಕಟ್ಟಿಸಿದವನು ಹಲ್‌ಚಲ್. ಕೋಟೆಯ ಒಂದು ಬಾಗಿಲನ್ನು ಮಘ್‌ರಿಬೀ (ಪಶ್ಚಿಮ) ಮತ್ತೊಂದನ್ನು ಶಿಮಾಲೀ (ಉತ್ತರ) ಎಂದು ಹೆಸರಿಡಲಾಯಿತು.[೧] ಮುಂದೆ ಕ್ರಿ.ಶ. ೧೭೮೩-೮೪ರಲ್ಲಿ ಟಿಪ್ಪುಸುಲ್ತಾನನ ಕಿಲ್ಲೆದಾರ ಶೇಖ್ ಮಹಮ್ಮದನ ಪ್ರಯತ್ನದಿಂದ ಸಾವಿರಾರು ರೂಪಾಯಿಗಳನ್ನು ಖರ್ಚು ಮಾಡಿ ಕೋಟೆಗೋಡೆ ಮತ್ತು ಬಾಗಿಲುಗಳನ್ನು ಪುನರನಿರ್ಮಿಸಿದನು.[೨] ನಾಲ್ಕನೇ ಬಾಗಿಲಿನ ಅಡಿಪಾಯವನ್ನು ಶುಭಕೃತ ಸಂಪತ್ಸರ ಜ್ಯೇಷ್ಠ ಬಹುಳ ಗುರುವಾರ ದಂದು ಕ್ರಿ.ಶ.೧೭೮೨ ಮೇ - ಜೂನ್ ಕ್ರಿ.ಶ. ೧೭೮೪ ಜುಲೈ-ಆಗಸ್ಟ್ ಹಾಕಲಾಯಿತು. ಮತ್ತು ನಿರ್ಮಾಣ ಕಾರ್ಯವು ಕ್ರೋಧಿ ಸಂವತ್ಸರ ಶ್ರಾವಣ ಬಹುಳ ೧೦ ಗುರುವಾರದಂದು ಮುಗಿಯಿತು. ಇದನ್ನು ಕಟ್ಟಿದವರು ರುದ್ರಣ್ಣ, ಬಸಣ್ಣ, ಮತ್ತು ಚೆನ್ನಣ್ಣ.[೩]

ಕ್ರಿ.ಶ. ೧೭೮೬ರಲ್ಲಿ ಮರಾಠರು ಮತ್ತು ಹೈದರಾಬಾದಿನ ನಿಜಾಮ ತಮ್ಮ ಸೈನ್ಯದೊಂದಿಗೆ ಕೊಪ್ಪಳ ಮತ್ತು ಬಹಾದ್ದೂರಬಂಡ ಕೋಟೆಗಳ ಮೇಲೆ ದಾಳಿಮಾಡಿ ಎರಡು ತಿಂಗಳ ಕಾಲ ಹೋರಾಡಿದ ನಂತರ ವಶಪಡಿಸಿಕೊಂಡರು.[೪] ೧೭೮೬ರ ಡಿಸೆಂಬರ್‌ನಲ್ಲಿ ಜೊತೆಗೂಡಿದ ಕೂಟವು ಬಹಾದ್ದೂರಬಂಡವನ್ನು ಬಿಟ್ಟು ಗಜೇಂದ್ರಗಡದ ಕಡೆಗೆ ಹಿಂತಿರುಗಿ ಹೊರಟಿತು. ಆಗ ಟೀಪು ಸುಲ್ತಾನನುಬಹಾದೂರ ಬಂಡೆಯ ವಿರುದ್ಧ ಕಾರ್ಯಾಚರಣೆ ನಡೆಸಿ ಅದನ್ನು ವಶಪಡಿಸಿಕೊಂಡನು. ಚದುರಿದ ಸೈನ್ಯವನ್ನು ಒಟ್ಟುಗೂಡಿಸಿ ಕೋಟೆಯನ್ನು ಸಮರ್ಥ ರೀತಿಯಲ್ಲಿ ಬಲಪಡಿಸಿದನು. ೧೭೯೧ರಲ್ಲಿ ಬ್ರಿಟಿಷ್ ಕ್ಯಾಪ್ಟನ್ ಆಂಡ್ರೂ ರೀಡ್‌ನ ವಶವಾಯಿತು.[೫]

### ಕೋಟೆ

ಇದು ಬೆಟ್ಟದ ಮೇಲಿರುವ ಗಿರಿದುರ್ಗ (ಚಿತ್ರ ೨೩೫). ಕೆಳಗಿರುವ ಊರಿನ ಸುತ್ತಲು ಹಿಂದೆ ಕೋಟೆ ಇದ್ದಂತೆ ಕಾಣುತ್ತದೆ. ಊರಿನ ಪಶ್ಚಿಮ ದಿಕ್ಕಿನಲ್ಲಿರುವ ಉದ್ದವಾದ ಕೋಟೆ ಗೋಡೆಯಿಂದ ಇದು ಸ್ಪಷ್ಟವಾಗುತ್ತದೆ. ಈ ಕೋಟೆಯಲ್ಲಿ ಪಶ್ಚಿಮಾಭಿಮುಖವಾದ ಬಾಗಿಲಿದೆ. ಕೋಟೆಯಿರುವ ಬೆಟ್ಟವು ಮೂರು ದಿಕ್ಕಿನಲ್ಲಿ ಕಡಿದಾಗಿದ್ದು, ಮೇಲೆ ಹತ್ತುವುದು ಅಸಾಧ್ಯ. ಉತ್ತರ ದಿಕ್ಕಿನಿಂದ ಮಾತ್ರ ಅಂಕುಡೊಂಕಾದ ಬಂಡೆಗಳ ಮಧ್ಯದ ದಾರಿಯಿಂದ ಮೇಲೆ ಹತ್ತಲು ಸಾಧ್ಯ. ಬೆಟ್ಟದ ಮೇಲೆ ಒಳಸುತ್ತಿನ ಕೋಟೆಯಿದೆ. ಹೊರಸುತ್ತು ಇದರ ಉತ್ತರ, ಪಶ್ಚಿಮ ಮತ್ತು ದಕ್ಷಿಣ ಭಾಗಗಳಲ್ಲಿದೆ. ಉತ್ತರ ಭಾಗದಲ್ಲಿ ಬೆಟ್ಟದ ವಿವಿಧ ಎತ್ತರಗಳಲ್ಲಿ ಕಟ್ಟಿದ ನಾಲ್ಕು ಕೋಟೆ ಗೋಡೆಗಳು ಒಳ ಮತ್ತು ಹೊರಕೋಟೆಗಳನ್ನು ಬಂಧಿಸುತ್ತವೆ. ಇವುಗಳಲ್ಲಿ ನಾಲ್ಕು ಬಾಗಿಲುಗಳಿವೆ. ಕೆಳಗಿನಿಂದ ಮೇಲೆ ಬರಲು ಇರುವ ದಾರಿಯನ್ನು ರಕ್ಷಿಸಲು ಈ ಕೋಟೆಗೋಡೆಗಳನ್ನು ಕಟ್ಟಿದೆ. ಕೆಳಗಿನಿಂದ ಪ್ರಾರಂಭಿಸಿ ಒಳಕೋಟೆಯೊಳಗೆ ಪ್ರವೇಶ ಮಾಡುವವರೆಗೆ ಐದು ಬಾಗಿಲುಗಳ ಮೂಲಕ ಹೋಗಬೇಕಾಗುತ್ತದೆ. ಕೋಟೆಯಲ್ಲಿ ಅನೇಕ ವೃತ್ತಾಕಾರದ ಬುರುಜುಗಳಿವೆ. ಕೋಟೆಯನ್ನು ಚೌಕಾಕಾರದ ದಪ್ಪ ಕಲ್ಲುಗಳಿಂದ ಕಟ್ಟಿದೆ. ಕಲ್ಲುಗಳ ಮಧ್ಯದಲ್ಲಿ ಕೆಲವು ಕಡೆ ಗಾರೆಯನ್ನು ಉಪಯೋಗಿಸಿದೆ. ಬಾಗಿಲು ಮತ್ತು ಕೈಪಿಡಿ ಗೋಡೆಗೆ ಇಟ್ಟಿಗೆ ಮತ್ತು ಗಾರೆಯನ್ನು ಬಳಸಿದೆ. ಕೈಪಿಡಿಗೋಡೆಯಲ್ಲಿ ಬಂದೂಕುಕಿಂಡಿಗಳು ಮತ್ತು ಕೆಲವೆಡೆ ತೋಪು ಸಂದಿಗಳು ಇವೆ. ಬಂಡೆಯ ಮೇಲೆ ಕೋಟೆಯನ್ನು ಕಟ್ಟುವಾಗ ವಿಶೇಷ ಮುಂಜಾಗ್ರತೆಯನ್ನು ವಹಿಸಲಾಗಿದೆ. ಬಂಡೆಯ ಮೇಲಿನ ಗೋಡೆಯ ಕಲ್ಲುಗಳು ಇಳಿಜಾರಾದ ಬದಿಗೆ ಸರಿಯದ ಹಾಗೆ ಕಲ್ಲುಗಳ ಬದಿಯಲ್ಲಿ ಸಾಲಾಗಿ ಚಿಕ್ಕ ಕುಳಿಗಳನ್ನು ಮಾಡಿ ಅವುಗಳಲ್ಲಿ ಕಪ್ಪು ಬಣ್ಣದ ಗಟ್ಟಿ ಕಲ್ಲಿನ ಬೆಣೆಗಳನ್ನು ಹೊಡೆಯಲಾಗಿದೆ (ಚಿತ್ರ ೨೩೬).




೨೩೪. ಬಹಾದ್ದೂರಬಂಡ ಕೋಟೆ: ೧. ಒಂದನೇ ಬಾಗಿಲು, ೨. ಎರಡನೆ ಬಾಗಿಲು, ೩. ಮೂರನೇ ಬಾಗಿಲು, ೪. ಹನುಮಂತನ ಗುಡಿ, ೫. ಕೊಳ, ೬. ಗುಪ್ತ ಬಾಗಿಲು, ೭. ನಾಲ್ಕನೇ ಬಾಗಿಲು, ೮. ಐದನೇ ಬಾಗಿಲು, ೯. ಚೌಡೇಶ್ವರಿ ಗುಡಿ, ೧೦. ಈಶ್ವರನ ಗುಡಿ, ೧೧. ಕಟ್ಟಡ, ೧೨. ದಿಡ್ಡಿಬಾಗಿಲು, ೧೩. ಧ್ವಜ ಸ್ತಂಭ, ೧೪. ಕಟ್ಟಡ, ೧೫. ಕೊಳ, ೧೬. ಕೊಳ, ೧೭. ದಿಡ್ಡಿಬಾಗಿಲು, ೧೮. ದಿಡ್ಡಿಬಾಗಿಲು, ೧೯. ದಿಡ್ಡಿಬಾಗಿಲು, ೨೦. ದಿಡ್ಡಿಬಾಗಿಲು



೨೩೫. ಬಹಾದ್ದೂರಬಂಡ, ಉತ್ತರ ದಿಕ್ಕಿನಿಂದ



೨೩೬. ಬಹಾದ್ದೂರಬಂಡ, ವಾಯುವ್ಯ ದಿಕ್ಕಿನ ಕೋಟೆಗೋಡೆ

ಬೆಟ್ಟದ ಬುಡದಲ್ಲಿ ಈಶಾನ್ಯದಿಂದ ಪ್ರಾರಂಭವಾಗುವ ಮೆಟ್ಟಿಲು ನೈರುತ್ಯಕ್ಕೆ ಸಾಗಿ ಮೊದಲನೇ ಬಾಗಿಲನ್ನು ತಲುಪುತ್ತವೆ. ಬಂಡೆಗಳ ಮಧ್ಯದ ಆಸರೆಯಲ್ಲಿರುವ ಈ ಬಾಗಿಲು ದೂರದಿಂದ ಕಾಣುವುದಿಲ್ಲ. ತೀವ್ರವಾದ ವಕ್ರಾಕಾರದ ದಾರಿಯು ಬಾಗಿಲ ಹತ್ತಿರ ಕೊಂಡೊಯ್ಯುತ್ತದೆ. ಉತ್ತರಾಭಿಮುಖವಾಗಿರುವ ಬಾಗಿಲಿಗೆ ಸರಳವಾದ ಚೌಕಟ್ಟು ಇದೆ (ಚಿತ್ರ ೨೩೭). ಬಂಡೆಗಳ ಆಸರೆಯ ಮೇಲೆ ವೃತ್ತಾಕಾರದ ಬುರುಜಿದೆ. ಇಲ್ಲಿಂದ ಅಂಕುಡೊಂಕಾಗಿ ದಿಕ್ಕುಗಳನ್ನು ಬದಲಿಸುತ್ತ ಮೇಲೆ ಹೋಗುವ ದಾರಿ ಪೂರ್ವಾಭಿಮುಖವಾಗಿರುವ ಎರಡನೇ ಬಾಗಿಲನ್ನು ಸೇರುತ್ತದೆ. ಬಂಡೆಯ ಪಕ್ಕದಲ್ಲಿರುವ ಈ ಬಾಗಿಲು ಕಮಾನಿನಾಕಾರದಲ್ಲಿದೆ. ಇದರಲ್ಲಿ ಸರಳವಾದ ಬಾಗಿಲ ಚೌಕಟ್ಟಿದೆ. ಕಮಾನಿನ ಮೇಲಿನ ಭಾಗದಲ್ಲಿ ಆಯತಾಕಾರದ ಚಿಕ್ಕಗೂಡು ಇದೆ (ಚಿತ್ರ ೨೩೮). ಗೂಡಿನ ಬದಿಗಳಲ್ಲಿ ಮುಂಗಾಲನ್ನು ಎತ್ತಿ ಎದುರು ಬದುರಾಗಿ ನಿಂತಿರುವ ಸಿಂಹಗಳ ಎರಡು ಉಬ್ಬು ಶಿಲ್ಪಗಳಿವೆ. ಇಲ್ಲಿಂದ ಪಶ್ಚಿಮ, ದಕ್ಷಿಣ ಮತ್ತು ಪೂರ್ವಕ್ಕೆ ಹೋದಾಗ ಪಶ್ಚಿಮಾಭಿಮುಖವಾಗಿರುವ ಮೂರನೇ ಬಾಗಿಲಿದೆ. ಬಾಗಿಲ ಚೌಕಟ್ಟಿನ ಮೇಲೆ ಚೌಕಾಕಾರದ ಹೂವಿದೆ. ಮೇಲ್ಭಾಗದಲ್ಲಿ ಗುರುಡು ಕಮಾನಿದೆ (ಚಿತ್ರ ೨೪೦). ಚೌಕಟ್ಟಿನ ಸುತ್ತಲು ಒಂದರೊಳಗೊಂದು ಜೋಡಿ ಕಮಾನುಗಳಿವೆ. ಇಲ್ಲಿಗೆ ಗಾರೆಯ ಕೈಪಿಡಿ ಗೋಡೆಯಲ್ಲಿ ತೆನೆಗಳ ಉಬ್ಬು ಅಲಂಕಾರ, ಅವುಗಳ ಮಧ್ಯದಲ್ಲಿ ಬಂದೂಕು ಕಿಂಡಿಗಳು ಇವೆ. ಕೆಳಭಾಗದಲ್ಲಿ ಭಾಗಶಃ ಮಣ್ಣಿನಲ್ಲಿ ಮುಚ್ಚಿರುವ ಅಧಿಷ್ಠಾನವಿದೆ. ಮೇಲೆ ಕಾಣುವ ಅಧಿಷ್ಠಾನದ ಭಾಗದಲ್ಲಿ ಪದ್ಮ ಮತ್ತು ಅದರ ಕೆಳಗೆ ಕಂಠ ಪಟ್ಟಿಕೆಗಳಿವೆ. ಬಾಗಿಲಿನ ಪಕ್ಕದಲ್ಲಿ ದಕ್ಷಿಣಕ್ಕೆ ದಕ್ಷಿಣಾಭಿಮುಖವಾಗಿರುವ ಚಿಕ್ಕ ದೇವಾಲಯವಿದೆ. ದೇವಾಲಯದ ಒಳಗೆ ಆಂಜನೇಯನ ಶಿಲ್ಪ ಮತ್ತು ಮುಂದೆ ದೀಪ ಸ್ತಂಭ ಇವೆ. ಇಲ್ಲಿಯ ಬಯಲು ಪ್ರದೇಶದಲ್ಲಿ ನೈಸರ್ಗಿಕವಾದ ನೀರಿನ ಕೊಳವಿದೆ.

ಮೂರನೇ ಬಾಗಿಲಿನಿಂದ ಅನುಕ್ರಮವಾಗಿ ಪೂರ್ವ, ದಕ್ಷಿಣ, ಪಶ್ಚಿಮ, ದಕ್ಷಿಣ, ಪೂರ್ವ ದಿಕ್ಕುಗಳಿಗೆ ಹೋದಾಗ ನಾಲ್ಕನೇ ಬಾಗಿಲಿದೆ. ನಾಲ್ಕನೇ ಬಾಗಿಲಿಗಿಂತ ಮೊದಲು ದಾರಿಯ ಬಲಭಾಗದ ಕೋಟೆಗೋಡೆಯಲ್ಲಿ ಕಾವಲುಗಾರನ ಕೊಠಡಿ ಮತ್ತು ಎಡಭಾಗದಲ್ಲಿ ಒಂದು ಬಂಡೆ ಇವೆ. ಬಂಡೆಯ ಹಿಂದಿರುವ ಗುಪ್ತ ಮಾರ್ಗವು ನಾಲ್ಕನೇ ಬಾಗಿಲ ಪಕ್ಕದಲ್ಲಿ ಹೋಗಿ ಒಳ ಸೇರುತ್ತದೆ. ಬಂಡೆಯ ಮೇಲೆ ಸುಂದರವಾಗಿ ಬರೆದ ಪರ್ಶಿಯನ್ ಶಾಸನವಿದೆ. ಈಗಾಗಲೇ ತಿಳಿಸಿರುವಂತೆ ಟೀಪು ಸುಲ್ತಾನನು ಕೋಟೆಯನ್ನು ಪುನರ್ನಿರ್ಮಿಸಿರುವುದು ಈ ಶಾಸನದಿಂದ ತಿಳಿಯುತ್ತದೆ. ನಾಲ್ಕನೇ ಬಾಗಿಲಿನ ಪಶ್ಚಿಮಕ್ಕೆ ಕೋಟೆಗೋಡೆಯ ಮೇಲೆ ಒಂದು ಕನ್ನಡ ಶಾಸನವಿದೆ. ಇದು ಬಾಗಿಲನ್ನು ಕಟ್ಟಿದ ಕಾಲ ಮತ್ತು ಕಟ್ಟಿದವರ ಹೆಸರುಗಳನ್ನು ತಿಳಿಸುತ್ತದೆ. ಬಾಗಿಲಿನ



೨೩೭. ಬಹಾದ್ದೂರಬಂಡ, ಒಂದನೇ ಬಾಗಿಲು



೨೩೮. ಬಹಾದ್ದೂರಬಂಡ, ಐದನೇ ಬಾಗಿಲು

ಎದುರಿಗೆ ಕೋಟೆಗೋಡೆಯಲ್ಲಿ ಕಾವಲುಗಾರನ ಕೊಠಡಿಯಿದೆ. ಪಶ್ಚಿಮಾಭಿಮುಖವಾಗಿರುವ ನಾಲ್ಕನೇ ಬಾಗಿಲಿನ ತೋಳುಗಳ ಕೆಳಭಾಗದಲ್ಲಿ ಹೂವಿನ ಚಿತ್ರವಿದೆ. ಮೇಲೆ ಎರಡು ಬೋದಿಗೆಗಳಿವೆ. ಕೆಳಗಿನ ಬೋದಿಗೆ ಜೋಡಿ ಸುರುಳಿಯಾಕಾರದಲ್ಲಿ ಮತ್ತು ಮೇಲಿನ ಬೋದಿಗೆ ಪುಷ್ಪಾಕಾರದಲ್ಲಿ ಇವೆ. ಉತ್ತರಂಗದ (lintel) ಮಧ್ಯದಲ್ಲಿ ಚೌಕಾಕಾರದ ಪುಷ್ಪವಿದೆ. ಚೌಕಟ್ಟಿನ ಮೇಲ್ಭಾಗದಲ್ಲಿ ಹೊರಚಾಚಿದ ತೊಲೆ ಮತ್ತು ಕುರುಡು ಕಮಾನು ಇವೆ. ಕಮಾನಿನ ಮಧ್ಯದಲ್ಲಿ ಕಮಾನಿನಾಕಾರದ ಚಿಕ್ಕ ಗೂಡಿದೆ. ಉತ್ತರಂಗ ಮತ್ತು ಕಮಾನು ಗೂಡಿನ ಸುತ್ತ ಪರ್ಶಿಯನ್ ಶಾಸನವಿದೆ. ಕೈಪಿಡಿ ಗೋಡೆಯ ಮೇಲ್ಭಾಗದಲ್ಲಿ ಉದ್ದವಾದ ಕಲ್ಲಿನ ಅಲಂಕಾರಿಕ ಪಟ್ಟಿಕೆಯಿದೆ. ಇದರಲ್ಲಿ ಹೂವಿನ ವಿನ್ಯಾಸದ ಅಲಂಕಾರವಿದೆ. ಬಾಗಿಲ ಪ್ರವೇಶದ ಬದಿಯಲ್ಲಿಯ ಪ್ರತಿ ಕಟ್ಟೆಯ ಮೇಲೆ ಒಂದು ಕಂಬವಿದೆ. ಬಾಗಿಲನ್ನು ದಾಟಿ ಒಳಗೆ ಹೋದಾಗ ಎದುರಿಗೆ ಕೋಟೆಗೋಡೆಯಲ್ಲಿ ಒಂದು ಉಪಬಾಗಿಲಿದೆ. ಇದು ಮೇಲೆ ವಿವರಿಸಿದ ಬಂಡೆಯ ಹಿಂದಿರುವ ಗುಪ್ತ ಮಾರ್ಗದ ಬಾಗಿಲು. ಈ ಬಾಗಿಲ ಪಕ್ಕದಲ್ಲಿ ಕಾವಲುಗಾರನ ಕೊಠಡಿಯಿದೆ. ನಾಲ್ಕನೆಯ ಬಾಗಿಲನ್ನು ದಾಟಿದ ಮೇಲೆ ಒಳ ಮತ್ತು ಹೊರಕೋಟೆಗಳ ಮಧ್ಯದ ಪ್ರದೇಶವನ್ನು ಸೇರುತ್ತವೆ. ಈ ಭಾಗದಲ್ಲಿ ಒಳಕೋಟೆಯ ಪಶ್ಚಿಮಕ್ಕೆ ಎರಡು ಕೊಳಗಳು, ಕಾವಲುಗಾರರ ಕೊಠಡಿಗಳು, ಕಾವಲುಗಾರರ ಮನೆ ಮತ್ತು ದಕ್ಷಿಣಕ್ಕೆ ಒಂದು ಕೊಳ ಇವೆ.

ನಾಲ್ಕನೇ ಬಾಗಿಲಿನ ಹತ್ತಿರದಲ್ಲಿರುವ ಐದನೇ ಮತ್ತು ಕೊನೆಯ ಬಾಗಿಲು ಒಳಕೋಟೆಯಲ್ಲಿದೆ. ಬಾಗಿಲಿನ ಎದುರಿಗೆ ಇರುವ ಕೋಟೆಗೋಡೆಯಲ್ಲಿ ಕಾವಲುಗಾರರ ಎರಡು ಕೊಠಡಿಗಳಿವೆ. ಉತ್ತರಾಭಿಮುಖವಾಗಿರುವ ಈ ಬಾಗಿಲ ಚೌಕಟ್ಟಿನ ಸುರುಳಿಯಾಕಾರದ ಬೋದಿಗೆಗಳ ಮೇಲಿನ ಉತ್ತರಂಗದ ಮೇಲೆ ಚೌಕಾಕಾರದ ಚೌಕಟ್ಟಿನಲ್ಲಿ ವೃತ್ತಾಕಾರದ ಹೂವಿದೆ. ಮತ್ತೊಂದು ಜೊತೆ ಪುಷ್ಪ ಬೋದಿಗೆಗಳ ಮೇಲೆ ತೊಲೆ, ಅದರ ಮೇಲೆ ಕುರುಡು ಕಮಾನು ಇವೆ. ಕಮಾನಿನ ಮಧ್ಯದಲ್ಲಿ ಬಹುವಲಯಗಳ ಕಮಾನಿನ (cusped arch) ಗೂಡು ಇದೆ. ಇಟ್ಟಿಗೆ ಗಾರೆಯ ಕೈಪಿಡಿ ಗೋಡೆಯ ಕೆಳಗಿನ ಸಾಲಿನಲ್ಲಿ ಅಧಿಕ ಚಿಹ್ನೆಯ (+)ಆಕಾರದ ಕಿಂಡಿಗಳು ಮತ್ತು ಮೇಲಿನ ಸಾಲಿನಲ್ಲಿ ತೆನೆಗಳ ಉಬ್ಬು ಚಿತ್ರಗಳು ಇವೆ (ಚಿತ್ರ ೨೩೮). ಪ್ರವೇಶದ ಪಕ್ಕದಲ್ಲಿ ಪ್ರತಿ ಕಟ್ಟೆಯ ಮೇಲೆ ಒಂದು ಕಂಬ ಮತ್ತು ದಕ್ಷಿಣ ಭಾಗದಲ್ಲಿ ಒಂದು ಕೊಠಡಿ ಇವೆ. ಈ ಬಾಗಿಲಿನ ಪಕ್ಕದಲ್ಲಿ ಪೂರ್ವಕ್ಕೆ ಒಂದು ಚಿಕ್ಕ ಬಾಗಿಲಿದೆ. ಬಾಗಿಲು ಎತ್ತರದಲ್ಲಿರುವುದರಿಂದ ಮುಂದೆ ಮೆಟ್ಟಿಲುಗಳಿವೆ. ಬಾಗಿಲ ತೊಲೆಯ ಮೇಲೆ ಪರ್ಶಿಯನ್ ಶಾಸನವಿದೆ. ಈಗಾಗಲೇ ಗಮನಿಸಿರುವಂತೆ ಹೈದರಾಲಿಯ ಕಾಲದಲ್ಲಿ ಕೋಟೆಯ ನಿರ್ಮಾಣ ಆಗಿರುವುದು ಇದರಿಂದ ತಿಳಿಯುತ್ತದೆ. ಈ ಬಾಗಿಲಿರುವ ಕೊಠಡಿಯ ಒಳಗೆ ಮತ್ತೊಂದು




೨೪೧. ಬಹಾದ್ದೂರಬಂಡ, ನಾಲ್ಕನೇ ಬಾಗಿಲು




೨೪೨. ಬಹಾದ್ದೂರಬಂಡ, ಐದನೇ ಬಾಗಿಲು



೨೪೩. ಬಹಾದ್ದೂರಬಂಡ, ಬುರುಜಿನಲ್ಲಿಯ ಕಾವಲುಗಾರರ ಕೊಠಡಿಗಳು



೨೪೪. ಬಹಾದ್ದೂರಬಂಡ, ಒಳಕೋಟೆಯಲ್ಲಿಯ ದೊಡ್ಡ ಕಟ್ಟಡ

ಕೊಠಡಿಯಿದೆ. ಈ ಎರಡನೆಯ ಕೊಠಡಿಯ ಪೂರ್ವಕ್ಕಿರುವ ಬಾಗಿಲು ಕೋಟೆಯ ಒಳಭಾಗಕ್ಕೆ ಕೊಂಡೊಯ್ಯುತ್ತದೆ. ಮುಖ್ಯ ಬಾಗಿಲು ಮುಚ್ಚಿದಾಗ ಈ ಉಪ ಬಾಗಿಲಿನ ಉಪಯೋಗ ಆಗುತ್ತಿತ್ತು.

ಪಶ್ಚಿಮ ದಿಕ್ಕಿನಲ್ಲಿ ಒಳ ಮತ್ತು ಹೊರಕೋಟೆಗಳ ಮಧ್ಯದ ಪ್ರದೇಶದಲ್ಲಿ ಎರಡು ಕೊಳಗಳು, ಒಂದು ಕಾವಲುಗಾರನ ಮನೆ, ಹೊರಕೋಟೆ ಗೋಡೆಯಲ್ಲಿ ಕಾವಲುಗಾರನ ಕೊಠಡಿ ಮತ್ತು ಕಕ್ಕಸು ಇವೆ. ಹೊರಕೋಟೆಯ ದಕ್ಷಿಣ ಮತ್ತು ನೈರುತ್ಯ ದಿಕ್ಕುಗಳಲ್ಲಿ ದಿಡ್ಡಿಗಳಿವೆ.

ಒಳಕೋಟೆ ಗೋಡೆಯ ಕೈಪಿಡಿ ಗೋಡೆ ಹೊರಭಾಗಕ್ಕೆ ಇಳಿಜಾರಾಗಿದೆ. ಇದರಲ್ಲಿ ಬಂದೂಕು ಕಿಂಡಿಗಳಿವೆ. ಪಕ್ಕದಲ್ಲಿ ಗೋಡೆಯ ಮೇಲಿನ ನಡೆದಾರಿ (wall walk) ಇದೆ. ಈ ಕೋಟೆಗೋಡೆಯ ವಿಶೇಷತೆ ಎಂದರೆ ಗೋಡೆಯಲ್ಲಿರುವ ಕಕ್ಕಸುಗಳು. ಅಗಲವಾದ ಗೋಡೆಯಲ್ಲಿ ಇವು Z ಆಕಾರದಲ್ಲಿವೆ. ಹೊರಗಿನಿಂದ ಗೋಡೆಯೊಳಕ್ಕೆ ಪ್ರವೇಶಿಸಿ ಎಡ ಅಥವಾ ಬಲಕ್ಕೆ ತಿರುಗಿ ಮುಂದೆ ಹೋಗಿ ಪುನಃ ಬಲ ಅಥವಾ ಎಡಕ್ಕೆ ತಿರುಗಿದರೆ ಎರಡು ಕಾಲುಗಳನ್ನಿಟ್ಟು ಕುಳಿತುಕೊಳ್ಳಲು ಮಾಡಿದ ಸ್ಥಳವಿದೆ. ಕಾಲುಗಳಿಡುವ ಎತ್ತರಿಸಿದ ಭಾಗಗಳ ಮಧ್ಯದಲ್ಲಿ ಇರುವ ಸಂದಿ ಕೋಟೆಯ ಹೊರಭಾಗಕ್ಕೆ ಇಳಿಜಾರಾಗಿದೆ. ಮನುಷ್ಯರು ಕೂಡುವ ಸ್ಥಳದ ಎದುರಿಗೆ ಸ್ವಲ್ಪ ಎತ್ತರದಲ್ಲಿ ಗೋಡೆಯಲ್ಲಿ ನೀರಿನ ತಂಬಿಗೆ ಇಡಲು ಚಿಕ್ಕ ಗೂಡಿದೆ. ಕಕ್ಕಸು Z ಆಕಾರದಲ್ಲಿರುವುದರಿಂದ ಯಾರಾದರೂ ಇಣುಕಿ ನೋಡಿದರೂ ಒಳಗಿರುವವರು ಕಾಣುವುದಿಲ್ಲ. ಕೋಟೆಯೊಳಗಿನ ಪ್ರದೇಶವು ಚಿಕ್ಕದಾಗಿದ್ದು, ಸಮತಟ್ಟಾದ ಪ್ರದೇಶದ ಸುತ್ತಲೂ ಕೋಟೆಯಿದೆ. ಈ ಚಿಕ್ಕ ಪ್ರದೇಶದಲ್ಲಿ ಕಕ್ಕಸುಗಳನ್ನು ನಿರ್ಮಿಸಲು ಅವಕಾಶವಾಗಿಲ್ಲ. ಕೋಟೆ ದಾಟಿದರೆ ಹೊರಭಾಗದಲ್ಲಿ ಬೆಟ್ಟದ ಕಡಿದಾದ ಭಾಗವಿರುವುದರಿಂದ ಇಲ್ಲಿಯೂ ಅವಕಾಶವಿಲ್ಲ. ಆದುದರಿಂದ ಗೋಡೆಯ ಮಧ್ಯದಲ್ಲಿಯೇ ಕಕ್ಕಸುಗಳನ್ನು ನಿರ್ಮಿಸಿ, ನೀರು ಹಾಕಿದಾಗ ಹೊಲಸು ಜಾರಿ ಕೋಟೆಯ ಹೊರಗೆ ಬೀಳುವಂತೆ ಮಾಡಿದ್ದಾರೆ. ಗೋಡೆಯಲ್ಲಿ ಅಲ್ಲಲ್ಲಿ ಕಾವಲುಗಾರರ ಕೊಠಡಿಗಳೂ ಇವೆ. ಈ ಕೋಟೆಯ ಪಶ್ಚಿಮಕ್ಕೆ ಮತ್ತು ದಕ್ಷಿಣಕ್ಕೆ ಒಂದೊಂದು ದಿಡ್ಡಿಗಳಿವೆ. ಈಶಾನ್ಯಕ್ಕಿರುವ ಭಾಗಶಃ ವೃತ್ತಾಕಾರದ ಬುರುಜಿನ ಮೇಲಿನ ಕೈಪಿಡಿ ಗೋಡೆಯಲ್ಲಿ ತೋಪುಗಳಿಗಾಗಿ ಮಾಡಿದ ಸಂದಿಗಳಿವೆ. ಬುರುಜಿನ ಕೆಳಭಾಗದಲ್ಲಿ ಕಾವಲುಗಾರರ ಮೂರು ಕೊಠಡಿಗಳಿವೆ (ಚಿತ್ರ ೨೪೩).

ಒಳಕೋಟೆಯ ಒಳಗೆ ಎರಡು ದೇವಾಲಯಗಳು, ಮೂರು ಕೊಳಗಳು, ಕಾವಲುಗಾರರ ಮನೆಗಳು ಮತ್ತು ಇತರ ಕಟ್ಟಡಗಳಿವೆ. ಮುಖ್ಯ ಬಾಗಿಲಿನ ಹತ್ತಿರ ಪೂರ್ವಾಭಿಮುಖವಾಗಿರುವ ಚೌಡೇಶ್ವರಿ ದೇವಾಲಯವಿದೆ. ದೇವಿಯ ಪಾಶ, ಅಂಕುಶ, ಖಡ್ಗ, ಫಲ ಹಿಡಿದು ಕುಳಿತಿದ್ದಾಳೆ. ಪೀಠದ ಮೇಲೆ ಮನುಷ್ಯ ಮತ್ತು ಕುದುರೆ ಇವೆ.

ದೇವಾಲಯದ ಮುಂದಿರುವ ದೀಪಸ್ತಂಭದ ಮೇಲೆ ಕೈಮುಗಿದು ನಿಂತಿರುವ ಭಕ್ತನ ಶಿಲ್ಪವಿದೆ. ಈಶ್ವರ ದೇವಾಲಯವು ಪಶ್ಚಿಮ ದಿಕ್ಕಿನ ದಿಡ್ಡಿಯ ಪಕ್ಕದಲ್ಲಿದೆ. ಪೂರ್ವಾಭಿಮುಖವಾಗಿರುವ ದೇವಾಲಯದ ಮುಂಭಾಗದಲ್ಲಿ ಚಿಕ್ಕ ಮುಖ ಮಂಟಪವಿದೆ. ಗರ್ಭಗೃಹದೊಳಗೆ ಲಿಂಗ ಮತ್ತು ಬಾಗಿಲ ಚೌಕಟ್ಟಿನ ಮೇಲೆ ಗಣೇಶ ಮತ್ತು ಶೈವ ದ್ವಾರಪಾಲರಿದ್ದಾರೆ. ಪಶ್ಚಿಮ ದಿಡ್ಡಿಯ ಮತ್ತೊಂದು ಪಕ್ಕಕ್ಕೆ ಆಯತಾಕಾರದ ಎರಡು ಕಟ್ಟಡಗಳ ಅವಶೇಷಗಳಿವೆ. ಒಳಕೋಟೆಯ ಮಧ್ಯದಲ್ಲಿ ಆಯತಾಕಾರದ ದೊಡ್ಡ ಕಟ್ಟಡವಿದೆ (ಚಿತ್ರ ೨೪೪). ಈ ಕಟ್ಟಡಕ್ಕೆ ಉತ್ತರ ಮತ್ತು ಪೂರ್ವ ದಿಕ್ಕುಗಳಲ್ಲಿ ಬಾಗಿಲುಗಳಿವೆ. ಈ ಕಟ್ಟಡದ ದಕ್ಷಿಣಕ್ಕೆ ಬಂಡೆಯ ಮೇಲೆ ಎರಡು ಸಾಲಿನ ಕನ್ನಡ ಶಾಸನವಿದೆ. ಇದು ಶ್ರೀ ಬಂಡೆ ರಂಗನಾಥನನ್ನು ಉಲ್ಲೇಖಿಸುತ್ತದೆ.

## ಟಿಪ್ಪಣಿಗಳು

೧. Patil Channabasappa S. and Vinoda C. Patil, 1998, *Inscriptions of Koppal District,* No. 95; *JHAS,* 1916, pp. 98-99, pl. xxxiv; *ARIE,* 1984-85, No. C 139.

೨. *ಅದೇ,* No. 96; *JHAS,* 1916, p. 98, pl. xxxiii; *ARIE,* 1984-85, C 140.

೩. *ಅದೇ,* No.97; *ARIE,* 1985-86, No. B 94.

೪. Rao Hayavadana, *History of Mysore,* Vol. iii, p. 701.

೫. *ಅದೇ,* p. 85.

# ೧೬. ಕುಮ್ಮಟದುರ್ಗ

ಕುಮ್ಮಟದುರ್ಗ ಕೊಪ್ಪಳ ತಾಲೂಕಿನಲ್ಲಿ ಕೊಪ್ಪಳದಿಂದ ಪೂರ್ವಕ್ಕೆ ಮೂವತ್ತೆರಡು ಕಿ.ಮೀ. ದೂರದಲ್ಲಿರುವ ಜನವಾಸವಿಲ್ಲದ ಪ್ರದೇಶ. ಕೊಪ್ಪಳ-ಗಂಗಾವತಿ ರಸ್ತೆಯಲ್ಲಿಯ ಮುಕ್ಕುಂಪಿಯ ದಕ್ಷಿಣಕ್ಕೆ ಒಂದು ಕಿ.ಮೀ. ಅಂತರದಲ್ಲಿದೆ. ಇದು ಅಕ್ಷಾಂಶ ೧೫° ೨೧' ಉತ್ತರ ಮತ್ತು ರೇಕಾಂಶ ೭೬° ೨೬' ಪೂರ್ವದಲ್ಲಿದೆ. ಇದರ ದಕ್ಷಿಣಕ್ಕೆ ಎರಡು ಕಿ.ಮೀ. ದೂರದಲ್ಲಿ ಜನವಾಸವಿರುವ ಚಿಕ್ಕ ಗ್ರಾಮದ ಹೆಸರು ಹಳೇ ಕುಮ್ಮಟ. ಹೆಸರು ಹಳೇ ಕುಮ್ಮಟವಾದರೂ ಈ ಗ್ರಾಮದಲ್ಲಿ ಪ್ರಾಚೀನ ಅವಶೇಷಗಳಿಲ್ಲ. ಕುಮ್ಮಟದುರ್ಗ ಎಂದ ಕೂಡಲೇ ಎಲ್ಲರಿಗೂ ನೆನಪಾಗುವುದು ಕುಮಾರರಾಮನು ದಿಲ್ಲಿ ಸುಲ್ತಾನನ ದೊಡ್ಡ ಸೈನ್ಯವನ್ನು ಮೂರು ಸಲ ಸೋಲಿಸಿ ಕೊನೆಯಲ್ಲಿ ವೀರಮರಣವನ್ನು ಪಡೆದ ಐತಿಹಾಸಿಕ ಕಥನ ಕರ್ನಾಟಕದಾದ್ಯಂತ ಜನಜನಿತವಾಗಿದೆ. ಕೊಪ್ಪಳ ಮತ್ತು ಗಂಗಾವತಿ ತಾಲೂಕುಗಳು ಸಂಧಿಸುವಲ್ಲಿ ಎರಡು ತಾಲೂಕುಗಳಲ್ಲಿ ಹಂಚಿಹೋದ ವಿಶಾಲವಾದ ಪ್ರದೇಶವನ್ನು ಆವರಿಸಿರುವ ಕುಮ್ಮಟದುರ್ಗದಲ್ಲಿ ಪಲವು ಸುತ್ತಿನ ಕೋಟೆ, ಕುದುರೆ ಕಲ್ಲುಗಳು, ಅರಮನೆ ಅವಶೇಷಗಳು, ಮದ್ದಿನ ಮನೆ, ವೀರಗಲ್ಲುಗಳು, ದೇವಾಲಯಗಳು, ವೀರಗಲ್ಲುಗಳು , ಕೆರೆ, ಕೊಳ, ಬಾವಿ ಮುಂತಾದುವುಗಳಿವೆ.[೧]

## ಐತಿಹಾಸಿಕ ಹಿನ್ನೆಲೆ

ಕುಮ್ಮಟದುರ್ಗದ ಉಲ್ಲೇಖವನ್ನು ಮೊದಲ ಬಾರಿಗೆ ಹನ್ನೊಂದನೇ ಶತಮಾನದ ಶಾಸನದಲ್ಲಿ ಕಾಣುತ್ತೇವೆ. ಚಾಲುಕ್ಯ ಸೋಮೇಶ್ವರನು ಕುಮ್ಮಟದಲ್ಲಿ ನಡೆದ ಗಲಭೆಯನ್ನು ಅಡಗಿಸಿ ಕ್ರಿ.ಶ. ೧೦೫೫ರಲ್ಲಿ ಲಿಂಗಸೂಗೂರು ತಾಲೂಕಿನ ಬನ್ನಿಗೋಳದಲ್ಲಿ ತಂಗಿದ್ದನೆಂದು ಬನ್ನಿಗೋಳದ ಶಾಸನದಿಂದ ತಿಳಿಯುತ್ತದೆ.[೨] ಆಗ ಕುಮ್ಮಟವು ವೈರಿಯಿಂದ ತೊಂದರೆಗೀಡಾಗಿತ್ತೆಂದು ತಿಳಿಯುತ್ತದೆ. ಕ್ರಿ.ಶ. ೧೦೫೩ರಲ್ಲಿ ಚಾಲುಕ್ಯ ಮತ್ತು ಚೋಳರ ನಡುವೆ ಕೊಪ್ಪಳ (ಕೊಪ್ಪಂ)ನಲ್ಲಿ ನಡೆದ ಯುದ್ಧದ ನಂತರ ಹಿಂದಿರುಗುವಾಗ ಚೋಳ ಅರಸ ರಾಜೇಂದ್ರನು ಕುಮ್ಮಟ ಕೋಟೆಯನ್ನು ವಶಪಡಿಸಿಕೊಂಡಿದ್ದಂತೆ ತೋರುತ್ತದೆ.[೩] ಹನ್ನೆರಡನೇ ಶತಮಾನದಲ್ಲಿ ಹೊಯ್ಸಳ ಅರಸರಾದ ವಿಷ್ಣುವರ್ಧನ ಮತ್ತು ಬಲ್ಲಾಳರು ಜಯಿಸಿದ ಕೋಟೆಗಳ ಪಟ್ಟಿಯಲ್ಲಿ ಕುಮ್ಮಟ ಸೇರಿರುವುದರಿಂದ ಆಗ ಇಲ್ಲಿ ಕೋಟೆಯಿದ್ದುದು ಖಚಿತವಾಗುತ್ತದೆ.[೪] ಕ್ರಿ.ಶ. ೧೨೮೭ರಲ್ಲಿ ಮುಮ್ಮಡಿ ಸಿಂಗೆಯ ನಾಯಕನು ಕುಮ್ಮಟದಲ್ಲಿದ್ದನು. ಆಗ [illegible]ಕ್ಕೇಶ್ವರದಲ್ಲಿದ್ದ ಯಾದವ ರಾಮಚಂದ್ರನ ದಂಡನಾಯಕನನ್ನು ಮುಮ್ಮಡಿ ಸಿಂಗನ ಮೇಲೆ ಯುದ್ಧ ಮಾಡಲು ಕುಮ್ಮಟಕ್ಕೆ ಕಳುಹಿಸಲಾಯಿತು.[೫] ಈ

ಭಾಗವನ್ನು ಆಳುತ್ತಿದ್ದ ಮುಮ್ಮಡಿ ಸಿಂಗನು ಉತ್ತರದಲ್ಲಿ ಯಾದವರೊಂದಿಗೆ ಮತ್ತು ದಕ್ಷಿಣದಲ್ಲಿ ಹೊಯ್ಸಳರೊಂದಿಗೆ ಯುದ್ಧ ಮಾಡುತ್ತಿದ್ದನು. ಕೊರವಡಿ ಅಥವಾ ಈಗಿನ ದರೋಜಿ ಇವನ ರಾಜಧಾನಿ ಯಾಗಿತ್ತು.[೬] ಮುಮ್ಮಡಿ ಸಿಂಗೆಯ ನಾಯಕನ ನಂತರ ಅವನ ಮಗ ಕಂಪಿಲರಾಯನು ಕ್ರಿ.ಶ. ೧೩೦೦ರಲ್ಲಿ ಯಾದವರ ಸಾಮಂತನಾಗಿದ್ದನು. ಕ್ರಿ.ಶ. ೧೩೦೩ರಲ್ಲಿ ಹೊಯ್ಸಳರೊಂದಿಗೆ ಯುದ್ಧ ಮಾಡುತ್ತಿದ್ದನು. ಕ್ರಿ.ಶ. ೧೩೧೮ರಲ್ಲಿ ಪ್ರತಾಪ ಚಕ್ರವರ್ತಿ ಬಿರುದಿನೊಂದಿಗೆ ಸ್ವತಂತ್ರವಾಗಿ ಆಳುತ್ತಿದ್ದನು. ಕ್ರಿ.ಶ. ೧೩೨೦-೧೩೨೮ರ ನಡುವೆ ಪುನಃ ಹೊಯ್ಸಳರ ವಿರುದ್ಧ ಯುದ್ಧ ಮಾಡುತ್ತಿದ್ದನು. ಅವನು ಕಾಕತೀಯ ವೀರರುದ್ರನೊಂದಿಗೂ ಯುದ್ಧ ಮಾಡಿದನು. ಕಂಪಿಲರಾಯನು ಹೊಸಮಲೆದುರ್ಗ[೭] ಅಥವಾ ಈಗಿನ ರಾಮುಗಡದಿಂದ ಆಳುತ್ತಿದ್ದನು. ಕುಮ್ಮಟದುರ್ಗ ಅವನ ಎರಡನೇ ರಾಜಧಾನಿಯಾಗಿತ್ತು. ಅವನು ದಿಲ್ಲಿಯ ಸುಲ್ತಾನನ ಸೈನ್ಯದೊಂದಿಗೆ ಯುದ್ಧ ಮಾಡುವಾಗಲೆಲ್ಲ ಸೈನ್ಯದೊಂದಿಗೆ ಕುಮ್ಮಟಕ್ಕೆ ಬಂದು, ಕುಮ್ಮಟದಲ್ಲಿ ಮುಸ್ಲಿಮ್ ಸೈನ್ಯವನ್ನು ಎದುರಿಸುತ್ತಿದ್ದನು. ಕಂಪಿಲರಾಯನ ಮಗ ಕುಮಾರರಾಮನು ಈ ಯುದ್ಧಗಳಲ್ಲಿ ತಂದೆಗೆ ನೆರವಾಗುತ್ತಿದ್ದನು. ಕುಮಾರರಾಮನು ಕುಮ್ಮಟದಲ್ಲಿ ಕೋಟೆಯನ್ನು ಕಟ್ಟಿಸಿದನೆಂದು ಚೆನ್ನಬಸವ ಪುರಾಣ ಮತ್ತು ಕೈಫಿಯತ್ತುಗಳಿಂದ ತಿಳಿಯುತ್ತದೆ.[೮] ಈಗಾಗಲೇ ಗಮನಿಸಿದಂತೆ ಇದಕ್ಕಿಂತ ಮೊದಲು ಕುಮ್ಮಟದಲ್ಲಿ ಕೋಟೆಯಿತ್ತು. ಕುಮಾರರಾಮನು ಕಟ್ಟಿಸಿದ್ದು ಇಲ್ಲಿಯ ಮತ್ತೊಂದು ಕೋಟೆಯಾಗಿದೆ.

ಕಂಪಿಲರಾಯ ಮತ್ತು ಕುಮಾರರಾಮನು ದಿಲ್ಲಿ ಸುಲ್ತಾನನ ಸೈನ್ಯದೊಂದಿಗೆ ಯುದ್ಧ ಮಾಡಿ ಅದನ್ನು ಮೂರು ಸಲ ಕುಮ್ಮಟದಿಂದ ಹಿಮ್ಮೆಟ್ಟಿಸಿದರು. ಆಗ ಇಡೀ ದಕ್ಷಿಣ ಭಾರತ ಮುಸ್ಲಿಮರ ವಶವಾಗಿತ್ತು. ಯಾದವ ಕಾಕತೀಯ, ಹೊಯ್ಸಳ ಮತ್ತು ಪಾಂಡ್ಯ ರಾಜ್ಯಗಳ ಅರಸರು ಸೋತು ಶರಣಾದಾಗ ಇವರು ಮಾತ್ರ ಅವರನ್ನು ಎದುರಿಸುವಲ್ಲಿ ಸಫಲರಾಗಿದ್ದರು.[೯] ಅಲ್ಲಾವುದ್ದೀನ್ ಖಿಲ್ಜಿ ದಿಲ್ಲಿಯ ಸುಲ್ತಾನನಾಗಿದ್ದಾಗ ಮಲಿ ನಾಯಿಬ್ ಕಾಫರ್‌ನು ಕುಮ್ಮಟದ ಮೇಲೆ ಮೊದಲನೇ ದಾಳಿ ಮಾಡಿದನು. ಕ್ರಿ.ಶ. ೧೩೧೩-೧೮ರಲ್ಲಿ ನಡೆದ ಈ ಯುದ್ಧದಲ್ಲಿ ಸುಲ್ತಾನನ ಸೈನ್ಯವನ್ನು ಹಿಮ್ಮೆಟಸುವಲ್ಲಿ ಕಂಪಿಲರಾಯನು ಸಫಲನಾದನು. ಮುಂದೆ ಮಹಮದ್ ಬಿನ್ ತೊಘಲಕ್‌ನು ದಿಲ್ಲಿ ಸುಲ್ತಾನಾದಾಗ ಗುಲಬರ್ಗಾ ಜಿಲ್ಲೆಯ ಸಾಗರದ ಅಧಿಪತಿಯಾಗಿದ್ದ ಬಾಹುದ್ದೀನ್ ಗುರ್‌ಶಾಪ್ಸ್ ಸುಲ್ತಾನ ವಿರುದ್ಧ ದಂಗೆಯೆದ್ದನು. ಇವನು ಸುಲ್ತಾನನ ಸೋದರಳಿಯನಾಗಿದ್ದನು. ದಂಗೆಯನ್ನು ಹತ್ತಿಕ್ಕಲು ಸುಲ್ತಾನನು ಸೈನ್ಯವನ್ನು ಕಳಿಸಿದನು. ಗುರ್‌ಶಾಪ್ಸನು ಕಂಪಿಲನ ರಾಜ್ಯಕ್ಕೆ ಓಡಿ ಬಂದಾಗ ಕಂಪಿಲನು ಅವನಿಗೆ ಆಶ್ರಯ ನೀಡಿದನು. ಸುಲ್ತಾನನು ಬಲವಾದ ಸೈನ್ಯವನ್ನು ಕಂಪಿಲನ ಮೇಲೆ ಯುದ್ಧ ಮಾಡಲು

ಕಳಿಸಿದನು. ಕಂಪಿಲನು ಸುಲ್ತಾನನ ಸೈನ್ಯವನ್ನು ಎರಡು ಸಲ ಸೋಲಿಸಿದನು. ಪುನಃ ಸುಲ್ತಾನನ ಸೈನ್ಯ ಕೋಟೆಯನ್ನು ಹೆಚ್ಚು ಕಾಲ ಮುತ್ತಿತು. ಕೋಟೆಯೊಳಗಿನ ಆಹಾರ ಧಾನ್ಯಗಳು ಮುಗಿದು ಹೋದುದರಿಂದ ಕಂಪಿಲನಿಗೆ ಯುದ್ಧ ಮುಂದುವರಿಸಲು ಕಷ್ಟವಾಯಿತು. ಆತನ ಆದೇಶದ ಮೇರೆಗೆ ರಾಜಮನೆತನದ ಹೆಂಗಸರು ಜೌಹಾರ್ ಆಚರಿಸಿ ಸಾವನ್ನಪ್ಪಿದರು. ಮಂತ್ರಿಗಳ ಮತ್ತು ಅಧಿಕಾರಿಗಳ ಹೆಂಡಂದಿರು ಇದನ್ನು ಅನುಸರಿಸಿದರು. ಕಂಪಿಲ ಮತ್ತು ಆತನ ಅನುಯಾಯಿಗಳು ಕೋಟೆಯಿಂದ ಹೊರಬಂದು ಉಸಿರಿರುವವರೆಗೆ ಹೋರಾಡಿ ಸ್ವರ್ಗ ಸೇರಿದರು. ಕಂಪಿಲನ ರಾಜ್ಯ ಮುಸ್ಲಿಮರ ವಶವಾಯಿತು. ಇದನ್ನು ಪ್ರತ್ಯೇಕ ಪ್ರಾಂತ್ಯವನ್ನಾಗಿ ಮಾಡಿ ಮಲಿಕ್ ಮಹಮ್ಮದ್‌ನನ್ನು ಇದರ ಅಧಿಕಾರಿಯನ್ನಾಗಿ ಮಾಡಲಾಯಿತು. ಒಂದನೇ, ಎರಡನೇ ಮತ್ತು ಮೂರನೇ ಯುದ್ಧಗಳಲ್ಲಿ ಸುಲ್ತಾನನ ಸೈನ್ಯದ ನೇತೃತ್ವ ವಹಿಸಿದ ಸೈನ್ಯಾಧಿಕಾರಿಗಳು ಅನುಕ್ರಮವಾಗಿ ಮಲಿಕ್ ರುಕ್ನುದ್ದೀನ್, ಕುತುಬುಲ್ ಮುಲ್ಕ್ ಮತ್ತು ಮಲಿಕ್ ಖ್ವಾಜಜಹಾನ್ ಆಗಿದ್ದರು.[೧೦]

ಕಂಪಿಲನ ರಾಜಧಾನಿ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಕಂಪ್ಲಿಯಾಗಿತ್ತು ಮತ್ತು ಅವನು ಸುಲ್ತಾನನನ್ನು ಎದುರಿಸಿದ್ದು ಕಂಪ್ಲಿಯಲ್ಲಿ ಎನ್ನುವುದು ಕೆಲವು ವಿದ್ವಾಂಸರ ವಾದವಾಗಿತ್ತು.[೧೧] ಆದರೆ ಸಾಹಿತ್ಯಾಧಾರಗಳು ಮತ್ತು ಕುಮ್ಮಟದಲ್ಲಿ ಇತ್ತೀಚೆಗೆ ದೊರೆತ ವೀರಗಲ್ಲುಗಳ ಮೇಲಿನ ಶಾಸನಗಳಿಂದ ಕುಮ್ಮಟ ಕಂಪಿಲನ ರಾಜಧಾನಿಯಾಗಿತ್ತು ಮತ್ತು ಸುಲ್ತಾನನ ದಂಡು ಕುಮ್ಮಟದ ಮೇಲೆ ಏರಿಬಂದಿತ್ತೆಂಬುದು ಖಚಿತಪಟ್ಟಿದೆ. ಕುಮ್ಮಟದ ಯುದ್ಧಗಳಲ್ಲಿ ಕಂಪಿಲನು ಸುಲ್ತಾನನ ಸೈನ್ಯವನ್ನು ಮೂರು ಸಲ ಸೋಲಿಸಲು ಅವನ ವೀರ ಪುತ್ರ ಕುಮಾರರಾಮನು ಕಾರಣವಾಗಿದ್ದನು. ಯುದ್ಧಗಳಲ್ಲಿ ಅವನು ತೋರಿಸಿದ ಅಪ್ರತಿಮ ಶೌರ್ಯದಿಂದ ತನ್ನ ಮರಣಾನಂತರ ಇತರ ಯೋಧರಿಗೆ ಆದರ್ಶಪ್ರಾಯನಾದುದಲ್ಲದೆ ಜನರಿಂದ ಪೂಜಿತನಾದನು. ವಿಜಯನಗರ ಅರಸ ದೇವರಾಯನ ಕ್ರಿ.ಶ. ೧೪೩೨ರ ಶಾಸನವು ಪುಟ್ಟಗದೆ ಎಂಬ ಯೋಧನು ಕುಮಾರರಾಮನಾಥನಂತೆ ಶೌರ್ಯದಿಂದ ಹೋರಾಡಿ ಸ್ವರ್ಗಕ್ಕೆ ಹೋದನೆಂದು ತಿಳಿಸುತ್ತದೆ.[೧೨] ಕುಮಾರರಾಮನ ಮೂರ್ತಿಗಳನ್ನು ಸ್ಥಾಪಿಸಿ ದೇವಾಲಯಗಳನ್ನು ಕಟ್ಟಿಸಿದ್ದು ಸಂಗೂರು, ಹೊಸಪಟ್ಟೆದುರ್ಗ (ರಾಮಗಡ) ಮುಂತಾದ ಶಾಸನಗಳಿಂದ ತಿಳಿಯುತ್ತದೆ.[೧೩]

## ಕೋಟೆ

ಕುಮ್ಮಟದುರ್ಗ ಪ್ರದೇಶವು ಬೆಟ್ಟಗಳಿಂದ ಆವೃತವಾಗಿರುವುದಲ್ಲದೆ ಇದರ ಸುತ್ತಲು ಬೆಟ್ಟಗಳಿವೆ. ಇಲ್ಲಿ ಕುಮಾರರಾಮನ ಗುಡ್ಡ, ಮಾದಿಗ ಹಂಪಯ್ಯನ ಗುಡ್ಡ, ಹನುಮಂತದೇವರ ಗುಡ್ಡ, ಬೊಲ್ಲನಗುಡ್ಡ,

ಕಾಟಪ್ಪನ ಗುಡ್ಡ ಮತ್ತು ಗುಲಗಂಜಿ ಗುಡ್ಡಗಳಿವೆ. ಕೋಟೆಯನ್ನು ನೆಲಮಟ್ಟದಲ್ಲಿ ಅಕ್ಕಪಕ್ಕದ ಬೆಟ್ಟಗಳ ಮಧ್ಯದಲ್ಲಿ, ಬೆಟ್ಟಗಳ ಮೇಲೆ ಕಟ್ಟಿದೆ. ಕೋಟೆಯ ಹತ್ತಿರ ಬರಲು ಈ ಬೆಟ್ಟಗಳ ಸುತ್ತಲಿರುವ ಬೆಟ್ಟಗಳನ್ನು ಮೊದಲು ದಾಟಿ ಬರಬೇಕು.

## ಕುದುರೆ ಕಲ್ಲು

ಸುತ್ತಲಿನ ಬೆಟ್ಟಗಳನ್ನು ಹತ್ತುವುದು ಕಷ್ಟವಾಗಿ ಅವುಗಳ ಮಧ್ಯದಲ್ಲಿಯ ಕೊಳ್ಳ ಪ್ರದೇಶವನ್ನು ಹುಡುಕಿ ಬಂದರೆ ಅಲ್ಲಿ ಮೊದಲು ಎದುರಾಗುವುದು ಕುದುರೆ ಕಲ್ಲುಗಳು. ವಿವಿಧ ಆಕಾರದ ಮನುಷ್ಯನ ನಡುವಿನಷ್ಟು ಎತ್ತರದ ಕಲ್ಲುಗಳನ್ನು ಅನೇಕ ಸಾಲುಗಳಲ್ಲಿ ಒಂದು ಬೆಟ್ಟದಿಂದ ಮತ್ತೊಂದು ಬೆಟ್ಟದವರೆಗೆ ನೆಡಲಾಗಿದೆ. ಕೆಲವೆಡೆ ಚಿಕ್ಕ ಕಲ್ಲುಗಳನ್ನು ಒಟ್ಟಿ ಗೋಡೆಯಂತೆ ಸಾಲಾಗಿ ಜೋಡಿಸಿದೆ. ಸಾವಿರಾರು ಸಂಖ್ಯೆಯಲ್ಲಿರುವ ಈ ಕುದುರೆ ಕಲ್ಲುಗಳು ವೈರಿಗಳನ್ನು ಸುಲಭವಾಗಿ ಮುಂದೆ ಹೋಗಲು ಬಿಡುವುದಿಲ್ಲ. ಕುದುರೆಯ ಮೇಲೆ ಬಂದ ವೈರಿ ಕುದುರೆಯನ್ನು ಒಂದು ಸಾಲಿನ ಕಲ್ಲಿನ ಮೇಲೆ ಹಾರಿಸಿದರೆ ಕುದುರೆ ಎರಡನೇ ಸಾಲಿನ ಅಥವಾ ಮೂರನೇ ಸಾಲಿನ ಕಲ್ಲನ್ನು ಎಡವಿ ಬೀಳುವುದು ಸಹಜ. ಹೀಗೆ ಗೊಂದಲದಲ್ಲಿ ಸಿಕ್ಕಿಹಾಕಿಕೊಂಡ ವೈರಿ ಪಡೆಯನ್ನು ಪಕ್ಕದ ಬೆಟ್ಟದ ಮೇಲೆ ಕುಳಿತ ರಕ್ಷಣೆಪಡೆ ಬಾಣಗಳನ್ನುಳೆಗರೆದು ಸುಲಭವಾಗಿ ವೈರಿಯನ್ನು ಸೋಲಿಸಲು ಸಾಧ್ಯವಾಗುತ್ತಿತ್ತು. ಕುದುರೆಗಳ ಚಲನೆಯನ್ನು ತಡೆಯುವುದಕ್ಕಾಗಿ ನೆಟ್ಟ ಈ ಕಲ್ಲುಗಳನ್ನು ಈಗಲೂ ಕುದುರೆ ಕಲ್ಲುಗಳೆಂದು ಕರೆಯುತ್ತಾರೆ. ಇಂತಹ ಕುದುರೆ ಕಲ್ಲುಗಳು ಕುಮ್ಮಟದುರ್ಗದ ದಕ್ಷಿಣಕ್ಕೆ ಮತ್ತುನೈರುತ್ಯಕ್ಕೆ ಎರಡು ಕಡೆ ವಿಶಾಲವಾದ ಪ್ರದೇಶವನ್ನು ಆವರಿಸಿರುವುದನ್ನು ನೋಡಬಹುದು (ಚಿತ್ರಗಳು ೨೫೦-೨೫೧). ನಮ್ಮ ದೇಶದ ಸೈನಿಕ ವಾಸ್ತು ಪದ್ಧತಿಯಲ್ಲಿ ಈ ಕಲ್ಲುಗಳು ವಿಶಿಷ್ಟ ಸ್ಥಾನವನ್ನು ಪಡೆದಿದೆ. ಇಂತಹ ಕಲ್ಲುಗಳು ಬೇರೆಡೆ ಕಂಡುಬರುವುದಿಲ್ಲ. ಈ ಒಂದು ಅನುಕೂಲಕರವಾದ ಅಂಶವನ್ನು ಸದುಪಯೋಗ ಪಡೆಯುವುದಕ್ಕೆಂದೇ ಕಂಪಿಲರಾಯ ಯುದ್ಧ ಮಾಡುವಾಗಲೆಲ್ಲ ಹೊಸಮಲೆದುರ್ಗದಿಂದ ಕುಮ್ಮಟದುರ್ಗಕ್ಕೆ ಸೈನ್ಯದೊಂದಿಗೆ ಬರುತ್ತಿದ್ದ. ಈ ವಿಶಿಷ್ಟವಾದ ನೈಸರ್ಗಿಕ ಪರಿಸರ ಮತ್ತು ಕುದುರೆ ಕಲ್ಲುಗಳಿಂದಾಗಿ ಅವನು ದಿಲ್ಲಿ ಸುಲ್ತಾನನ ದೊಡ್ಡ ಸೈನ್ಯವನ್ನು ಹಿಮ್ಮೆಟ್ಟಿಸಲು ಸಾಧ್ಯವಾಯಿತು.

ಕಂಪಿಲರಾಯನು ಪ್ರಾರಂಭಿಸಿದ ಕುದುರೆ ಕಲ್ಲುಗಳನ್ನು ನೆಡುವ ಪದ್ಧತಿಯು ವಿಜಯನಗರ ಕಾಲದಲ್ಲಿ ಮುಂದುವರೆಯಿತು. ವಿಜಯನಗರ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ಅಲ್ಲಿಗೆ ಭೇಟಿ ನೀಡಿದ ಇಬ್ಬರು ವಿದೇಶಿ ಪ್ರವಾಸಿಗರು ಇಂತಹ ಕಲ್ಲುಗಳ ಬಗ್ಗೆ ಉಲ್ಲೇಖಿಸುತ್ತಾರೆ. ಕ್ರಿ.ಶ. ೧೪೪೨-೪೩ರಲ್ಲಿ ವಿಜಯನಗರಕ್ಕೆ ಭೇಟಿ




೨೪೫. ಕುಮ್ಮಟದುರ್ಗ: ೧. ಗಂಗಾವತಿ-ಕೊಪ್ಪಳ ರಸ್ತೆ, ೨. ಮುಕ್ಕುಂಪಿ ಗ್ರಾಮ, ೩. ಮುಕ್ಕುಂಪಿ ಕೆರೆ, ೪. ಪಾಪಾಸು ಗುಡ್ಡ, ೫. ಜಬ್ಬಲಗುಡ್ಡ ಗ್ರಾಮ, ೬. ಕೆರೆಯ ಒಡ್ಡು, ೭. ಈಶಾನ್ಯ ದಿಕ್ಕಿನ ಹೊರಕೋಟೆ, ೮. ಈಶಾನ್ಯ ದಿಕ್ಕಿನ ಮಧ್ಯದ ಕೋಟೆ, ೯. ಈಶಾನ್ಯ ದಿಕ್ಕಿನ ಒಳಕೋಟೆ, ೧೦. ವೀರಗಲ್ಲುಗಳು, ೧೧. ದೇವಿ, ಸೂರ್ಯ ಶಿಲ್ಪಗಳು ಮತ್ತು ಲಿಂಗಪೀಠ, ೧೨. ದೇವಾಲಯ, ೧೩. ವಕ್ರಾಣಿಕೆರೆ, ೧೪. ಮಾದಿಗ ಹಂಪಯ್ಯನ ಗುಡ್ಡ, ೧೫. ಚೇಳುಕಲ್ಲು, ೧೬. ಈಶ್ವರ ದೇವಾಲಯ, ೧೭. ಕುಮಾರರಾಮನ ಗುಡ್ಡ, ೧೮. ಜೈನ ದೇವಾಲಯ, ೧೯. ಅರಮನೆಯ ಅವಶೇಷಗಳು, ೨೦. ಕಡೆಗಾಪು, ೨೧. ರಾಮಸ್ವಾಮಿ ದೇವಾಲಯ, ೨೨. ಆನೆಪಾಗ, ೨೩. ಕುಮಾರರಾಮನ ಗುಡ್ಡದ ನೈರುತ್ಯಕ್ಕಿರುವ ಒಳಕೋಟೆ, ೨೪. ಕುಮಾರರಾಮನ ಗುಡ್ಡದ ದಕ್ಷಿಣಕ್ಕಿರುವ ಒಳಕೋಟೆ, ೨೫. ವೀರಗಲ್ಲು, ೨೬. ಶಿಲಾ ತೋರಣ, ೨೭. ಶಾಸನಸ್ಥ ವೀರಗಲ್ಲು, ೨೮. ಕುಮಾರರಾಮನ ಗುಡ್ಡ ಮತ್ತು ಗುಲಗಂಜಿ ಗುಡ್ಡಗಳ ಮಧ್ಯದ ಕೋಟೆ, ೨೯. ಗುಲಗಂಜಿ ಗುಡ್ಡ, ೩೦. ಗುಲಗಂಜಿ ಗುಡ್ಡ ಮತ್ತು ಕಾಟಪ್ಪನ ಗುಡ್ಡಗಳ ಮಧ್ಯದ ಕೋಟೆ, ೩೧. ದೇವಾಲಯ ಮತ್ತು ವೀರಗಲ್ಲುಗಳು, ೩೨. ಕುಮಾರರಾಮನ ಗುಡ್ಡದ ದಕ್ಷಿಣಕ್ಕಿರುವ ಹೊರಕೋಟೆ ೩೩. ಕುಮಾರರಾಮನ ಗುಡ್ಡದ ನೈರುತ್ಯಕ್ಕಿರುವ ಹೊರಕೋಟೆ, ೩೪. ಪಾಳುಬಿದ್ದ ಊರು ೩೫. ಹಾಲುಬಾವಿ, ೩೬. ಕುಮಾರರಾಮನ ಗುಡ್ಡದ ನೈರುತ್ಯಕ್ಕಿರುವ ಕುದುರೆಕಲ್ಲುಗಳು, ೩೭. ರಿಂದ ೩೯ ಕುಮಾರರಾಮನ ಗುಡ್ಡದ ದಕ್ಷಿಣ ಮತ್ತು ನೈರುತ್ಯಕ್ಕಿರುವ ಕುದುರೆಕಲ್ಲುಗಳು ೪೦. ಹಳೆಕುಮ್ಮಟ ಗ್ರಾಮ, ೪೧. ಹಳೆಕುಮ್ಮಟ ಬೂದಗುಂಪಿ ರಸ್ತೆ, ೪೨. ಕಾಟಪ್ಪನ ಗುಡ್ಡ, ೪೩. ರಿಂದ ೪೫. ಬೊಲ್ಲನ ಗುಡ್ಡ ಮತ್ತು ಕಾಟಪ್ಪನ ಗುಡ್ಡಗಳ ಮಧ್ಯದ ಕೋಟೆ, ೪೬. ಬೊಲ್ಲನ ಗುಡ್ಡ, ೪೭. ಹನುಮಂತ ದೇವರ ಗುಡ್ಡ, ೪೮. ಬೊಲ್ಲನ ಕೆರೆ, ೪೯. ದೇವಾಲಯ ಮತ್ತು ವೀರಗಲ್ಲುಗಳು, ೫೦. ಕುಮಾರರಾಮನ ಗುಡ್ಡದ ಮೇಲಿನ ಕೋಟೆ (ಕೃಪೆ : *VPR*, 1987-88)

ನೀಡಿದ ಪರ್ಶಿಯಾ ದೇಶದ ಪ್ರವಾಸಿ ಅಬ್ದುರ್ ರಜಾಕ್ ನಗರವನ್ನು ಈ ರೀತಿ ವಿವರಿಸುತ್ತಾನೆ: "ಬಿಜನಗರ ಹೇಗಿದೆ ಎಂದರೆ ಇಂತಹ ಊರನ್ನು ಕಣ್ಣು ಕಂಡಿಲ್ಲ ಮತ್ತು ಇದಕ್ಕೆ ಸಮನಾದುದು ಯಾವುದಾದರೂ ಇರುವುದನ್ನು ಕಿವಿಗಳು ಕೇಳಿಲ್ಲ. ಇದನ್ನು ಹೇಗೆ ಕಟ್ಟಿದೆ ಎಂದರೆ ಏಳು ಪುರದುರ್ಗಗಳನ್ನು ಮತ್ತು ಅಷ್ಟೇ ಸಂಖ್ಯೆಯ ಗೋಡೆಗಳು ಒಂದು ಮತ್ತೊಂದನ್ನು ಸುತ್ತುವರಿಯುತ್ತವೆ. ಮೊದಲನೇ ದುರ್ಗದ ಸುತ್ತಲು ಮನುಷ್ಯನಷ್ಟು ಎತ್ತರದ ಕಲ್ಲುಗಳಿವೆ, ಅವುಗಳ ಅರ್ಧಭಾಗವನ್ನು ನೆಲದಲ್ಲಿ ಹೂಳಲಾಗಿದ್ದು ಉಳಿದರ್ಧ ಮೇಲೆದ್ದಿದೆ. ಅವುಗಳನ್ನು ಒಂದರ ಪಕ್ಕದಲ್ಲಿ ಮತ್ತೊಂದನ್ನು ಹೇಗೆ ನೆಡಲಾಗಿದೆ ಎಂದರೆ ಯಾವುದೇ ಕುದುರೆ ಸವಾರ ಅಥವಾ ಕಾಲಾಳು ಧೈರ್ಯದಿಂದ ಅಥವಾ ಸುಲಭವಾಗಿ ದುರ್ಗದ ಹತ್ತಿರ ಹೋಗಲು ಸಾಧ್ಯವಾಗುವುದಿಲ್ಲ."[೨] ವಿಜಯನಗರಕ್ಕೆ ಕ್ರಿ.ಶ. ೧೫೨೦ರಲ್ಲಿ ಭೇಟಿ ನೀಡಿದ ಪೋರ್ಚುಗೀಸ್ ಪ್ರವಾಸಿ ಡಾಮಿಂಗೊ ಪಾಯಸ್ ವಿಜಯನಗರದ ಸೈನಿಕ ವಾಸ್ತು ಪದ್ಧತಿಯ ಬಗ್ಗೆ ಇಂತಹದೇ ವಿವರಣೆಯನ್ನು ಈ ರೀತಿ ಕೊಡುತ್ತಾನೆ : "ಬಿಸ್ನಗರಕ್ಕೆ ಹಿಂದಿರುಗುತ್ತ ನೀವು ತಿಳಿಯಬೇಕಾದುದು ಏನೆಂದರೆ ನೀವು ನಗರದ ಬಾಗಿಲಿಗೆ ತಲುಪುವ ಮುನ್ನ ಸುತ್ತುಗೋಡೆಯಲ್ಲಿ ಒಂದು ಬಾಗಿಲಿದೆ. ಇದು ಉಳಿದ ಎಲ್ಲ ಸುತ್ತು ಗೋಡೆಗಳನ್ನು ಸುತ್ತುವರಿಯುತ್ತದೆ. ಇದು ಬಹಳ ಬಲಿಷ್ಠವಾದದ್ದು ಮತ್ತು ಬೃಹತ್ತಾದ ಕಲ್ಲಿನ ಕಟ್ಟಡ. ಆದರೆ ಈಗ ಕೆಲವೆಡೆ ಇದು ಅಲ್ಲಲ್ಲಿ ಬಿದ್ದಿದೆ. ಅದರೊಳಗೆ ಪುರದುರ್ಗಗಳನ್ನು ಹೊಂದುವುದನ್ನು ಬಿಟ್ಟಿಲ್ಲ. ಈ ಗೋಡೆಗೆ ಕೆಲವೆಡೆ ಮತ್ತು ಕೆಳಮಟ್ಟದ ಭೂಮಿಯ ಮೇಲೆ ಕಟ್ಟಿದ ಭಾಗಗಳಲ್ಲಿ ನೀರಿರುವ ಕಂದಕವಿದೆ. ಇದರಿಂದ ಪ್ರತ್ಯೇಕವಾಗಿ ಮತ್ತೊಂದು ಈಕೆಳಗೆ ಹೇಳಿದಂತೆ ಮಾಡಿದ್ದು ಇದೆ. ದೊಡ್ಡ ಚೂಪಾದ ಕಲ್ಲುಗಳನ್ನು ಮನುಷ್ಯನ ಎದೆಯ ಮುಟ್ಟದಷ್ಟು ಎತ್ತರ ಭೂಮಿಯಲ್ಲಿ ನೆಟ್ಟಿದೆ. ಅವು ಒಂದೂವರೆ ಈಟಿ ಕೋಲಿನಷ್ಟು ಅಗಲವಾಗಿದ್ದು, ಅವುಗಳ ಮತ್ತು ದೊಡ್ಡ ಗೋಡೆಯ ಮಧ್ಯದಲ್ಲಿ ಅಷ್ಟೇ ಅಂತರವಿದೆ. ಈ ಗೋಡೆಯು ಕೆಳಮಟ್ಟದ ನೆಲದಲ್ಲಿ ಬೆಟ್ಟ ಅಥವಾ ಗುಡ್ಡಗಾಡು ತಲುಪುವವರೆಗೆ ಇದೆ."[೩] ಇಂತಹ ಕುದುರೆ ಕಲ್ಲುಗಳು ವಿಜಯನಗರದ ಸುತ್ತ ಈಗ ಉಳಿದಿಲ್ಲ.

## ವಿವಿಧ ಕೋಟೆಗಳು

ಕೋಟೆಯನ್ನು ಕುಮಾರರಾಮನ ಗುಡ್ಡ ಮತ್ತು ಮಾದಿಗ ಹಂಪಯ್ಯನ ಗುಡ್ಡಗಳ ಸುತ್ತ ಅನೇಕ ಸುತ್ತುಗಳಲ್ಲಿ ಕಟ್ಟಿದೆ (ಚಿತ್ರ ೨೪೫). ಎತ್ತರವಾದ ಕುಮಾರರಾಮನ ಗುಡ್ಡದ ಮೇಲೆ ಕಡೆಗಾಪು, ಅರಮನೆಗಳ ಅವಶೇಷಗಳು, ಮದ್ದಿನ ಮನೆ, ಕಾವಲುಗೋಪುರ, ಜೈನ ದೇವಾಲಯ, ಆಂಜನೇಯ ದೇವಾಲಯ, ರಾಮಸ್ವಾಮಿ ದೇವಾಲಯ ಮತ್ತು ಕೆಲವು ನೀರಿನ ಕೊಳಗಳಿವೆ. ಇದೇ ಗುಡ್ಡದ ಮೇಲೆ ನೈರುತ್ಯಕ್ಕೆ ಸ್ವಲ್ಪ ಕೆಳ



೨೪೬. ಕುಮ್ಮಟದುರ್ಗ, ಕುಮಾರರಾಮನ ಗುಡ್ಡದ ಪಶ್ಚಿಮಕ್ಕಿರುವ ಹೊರಕೋಟೆ



೨೪೭. ಕುಮ್ಮಟದುರ್ಗ, ಕುಮಾರರಾಮನ ಗುಡ್ಡದ ಪಶ್ಚಿಮಕ್ಕಿರುವ ಹೊರಕೋಟೆ

ಮಟ್ಟದಲ್ಲಿ ಆನೆಪಾಗವಿದೆ. ಮಾದಿಗ ಹಂಪಯ್ಯನ ಗುಡ್ಡದ ತುದಿಯಲ್ಲಿ ವೃತ್ತಾಕಾರದ ಕಾವಲು ಗೋಪುರವಿದೆ. ಮತ್ತು ಆಗ್ನೇಯ ದಿಕ್ಕಿನಲ್ಲಿ ಸ್ವಲ್ಪ ಕೆಳಮಟ್ಟದಲ್ಲಿ ಈಶ್ವರ ದೇವಾಲಯವಿದೆ. ಈ ಬೆಟ್ಟದ ಮೇಲೆ ಇನ್ನೂ ಕೆಲವು ಕಾವಲು ಗೋಪುರಗಳು ಮತ್ತು ನೀರಿನ ಕೊಳಗಳಿವೆ. ಈ ಎರಡು ಗುಡ್ಡಗಳ ಮಧ್ಯದ ಕೊಳ್ಳದ ಈಶಾನ್ಯ ತುದಿಯಲ್ಲಿ ವಕ್ರಾಣಿ ಕೆರೆಯಿದೆ.

ಕುಮಾರರಾಮನ ಗುಡ್ಡ ಮತ್ತು ಮಾದಿಗಹಂಪಯ್ಯನ ಗುಡ್ಡಗಳ ಈಶಾನ್ಯಕ್ಕೆ ನೆಲಮಟ್ಟದಲ್ಲಿ ಮೂರು ಕೋಟೆ ಗೋಡೆಗಳಿವೆ. ಹೊರಕೋಟೆಯು ಮಾದಿಗ ಹಂಪಯ್ಯನ ಗುಡ್ಡದ ಉತ್ತರದಿಂದ ಪ್ರಾರಂಭವಾಗಿ, ಮುಕ್ಕುಂಪಿ ಕೆರೆಯವರೆಗೆ ಚಾಚಿ, ಹನುಮಂತದೇವರ ಗುಡ್ಡದ ಕಪ್ಪುಕಲ್ಲುಗಳ ಮೇಲಿನ ಭಾಗವನ್ನು ಸೇರುತ್ತದೆ. ಈ ಕೋಟೆಯನ್ನು ಬಹಳ ದೊಡ್ಡ ದಿಮ್ಮಿಯಾಕಾರದ ಕಲ್ಲುಗಳಿಂದ ಗಾರೆಯನ್ನು ಬಳಸದೆ ಕಟ್ಟಿದೆ. ಕೆಲವು ಕಲ್ಲುಗಳು ಐದು ಮೀ. ಉದ್ದ ಮತ್ತು ಒಂದು ಮೀ. ದಪ್ಪ ಇವೆ. ಕಲ್ಲುಗಳನ್ನು ಅಚ್ಚುಕಟ್ಟಾಗಿ ಕತ್ತರಿಸಿ, ಪಕ್ಕದ ಕಲ್ಲುಗಳೊಂದಿಗೆ ಮಧ್ಯದಲ್ಲಿ ಸಂದಿಬಿಡದಂತ ಜೋಡಿಸಿದೆ. ಈ ಕೋಟೆಯಲ್ಲಿ ಮೂರು ಬಾಗಿಲುಗಳು, ಒಂದು ನೀರಿನ ಮೋರಿ ಮತ್ತು ಅನೇಕ ಚೌಕಾಕಾರದ ಬುರುಜುಗಳಿವೆ. ಹನುಮಂತದೇವರ ಗುಡ್ಡದ ಹತ್ತಿರವಿರುವ ದೊಡ್ಡ ಬಾಗಿಲು 'L' ಆಕಾರದಲ್ಲಿದೆ. ಈ ಕೋಟೆಯು ಹದಿಮೂರನೇ ಶತಮಾನದ ಕೊನೆ ಭಾಗದಲ್ಲಿ ಕಟ್ಟಿದ ರಾಯಚೂರು ಮತ್ತು ಮಲಿಯಾಬಾದ ಕೋಟೆಗಳನ್ನು ಹೋಲುತ್ತದೆ. ಇದು ಕುಮ್ಮಟದಲ್ಲಿಯ ಅತ್ಯಂತ ಹಳೆಯ ಕೋಟೆ. ಹನ್ನೊಂದು-ಹನ್ನೆರಡನೇ ಶತಮಾನದ ಶಾಸನಗಳಲ್ಲಿ ಉಲ್ಲೇಖಗೊಂಡ ಕೋಟೆ ಇದೇ ಎಂದು ಗುರುತಿಸಬಹುದು. ಹೊರಕೋಟೆಯಿಂದ ಸುಮಾರು ೪೦೦ ಮೀ. ಅಂತರದಲ್ಲಿರುವ ಮಧ್ಯ ಕೋಟೆಯನ್ನು ಚೆನ್ನಾಗಿ ಕತ್ತರಿಸದ ದಪ್ಪಕಲ್ಲುಗಳಿಂದ ಗಾರೆಯನ್ನು ಬಳಸದೆ ಕಟ್ಟಿದೆ. ಇದರ ಕಲ್ಲುಗಳು ಹೊರಕೋಟೆಯ ಕಲ್ಲುಗಳಿಗಿಂತ ಬಹಳ ಚಿಕ್ಕವು. ಇದರ ಮಧ್ಯದಲ್ಲಿ 'L' ಆಕಾರದ ಬಾಗಿಲಿದೆ. ಒಳಕೋಟೆ ಮಧ್ಯ ಕೋಟೆಯಿಂದ ೨೦೦ ಮೀ. ಅಂತರದಲ್ಲಿದೆ. ಮಧ್ಯ ಮತ್ತು ಹೊರಕೋಟೆಗಳು ಮಾದಿಗ ಹಂಪಯ್ಯನ ಗುಡ್ಡದ ಮೇಲೆ ಮುಂದುವರಿಯುತ್ತವೆ.

ಕುಮಾರರಾಮನ ಗುಡ್ಡದ ಪಶ್ಚಿಮ, ನೈರುತ್ಯ ಮತ್ತು ದಕ್ಷಿಣ ದಿಕ್ಕುಗಳಲ್ಲಿ ನೆಲಮಟ್ಟದಲ್ಲಿರುವ ಎರಡು ಕೋಟೆಗಳು ಗುಡ್ಡಗಳ ಮೇಲೆ ಹಬ್ಬಿವೆ (ಚಿತ್ರಗಳು ೨೪೬-೨೪೭). ಈ ಕೋಟೆಗಳನ್ನು ಸಹ ಸುಮಾರಾಗಿ ಕತ್ತರಿಸಿದ ದಪ್ಪ ಕಲ್ಲುಗಳಿಂದ ಯಾವುದೇ ಗಾರೆಯನ್ನು ಬಳಸದೆ ಕಟ್ಟಿದೆ (ಚಿತ್ರಗಳು ೨೪೮-೨೪೯). ಇವುಗಳಲ್ಲಿ ಕೆಲವು ದೊಡ್ಡ ಬಾಗಿಲುಗಳು ಒಂದು 'L' ಆಕಾರದ ಮತ್ತು ಒಂದು 'Z' ಆಕಾರದ ಬಾಗಿಲುಗಳು ಮತ್ತು ಅನೇಕ



೨೪೮. ಕುಮ್ಮಟದುರ್ಗ, ಕುಮಾರರಾಮನ ಗುಡ್ಡದ ಪಶ್ಚಿಮಕ್ಕಿರುವ ಹೊರಕೋಟೆಯ ಬಾಗಿಲು



೨೪೯. ಕುಮ್ಮಟದುರ್ಗ, ಕುಮಾರರಾಮನ ಗುಡ್ಡದ ದಕ್ಷಿಣಕ್ಕಿರುವ ಹೊರಕೋಟೆಯ ಬಾಗಿಲು



೨೫೦. ಕುಮ್ಮಟದುರ್ಗ, ಕುದುರೆ ಕಲ್ಲುಗಳು



೨೫೧. ಕುಮ್ಮಟದುರ್ಗ, ಕುದುರೆ ಕಲ್ಲುಗಳು



೨೫೨. ಕುಮ್ಮಟದುರ್ಗ. ಕುಮಾರರಾಮನ ಗುಡ್ಡದ ಮೇಲಿರುವ ಕೋಟೆಯ ಪೂರ್ವ ದಿಕ್ಕಿನ ಬಾಗಿಲು



೨೫೩. ಕುಮ್ಮಟದುರ್ಗ, ಕಡೆಗಾಪು (citadel)

ಚೌಕಾಕಾರದ ಕೊತ್ತಳಗಳಿವೆ. ಎರಡು ಕೋಟೆಗಳ ಮಧ್ಯದ ಭಾಗದಲ್ಲಿ ಚಿಂತಾಲಕಲ್ಲು, ತೋರಣ ಮತ್ತು ಕೆಲವು ಕಟ್ಟಡಗಳ ಅವಶೇಷಗಳಿವೆ. ಇಲ್ಲಿಯ ಒಳಕೋಟೆಯ ಒಂದು ಬಾಗಿಲನ್ನು ಹುಲಿಬಾಗಿಲು ಎಂದು ಕರೆಯುತ್ತಾರೆ. ಹೊರಕೋಟೆಯ ಹೊರಗೆ ಸ್ವಲ್ಪ ದೂರದಲ್ಲಿ ಹಾಲುಬಾವಿಯಿದೆ. ಕುಮಾರರಾಮನ ಗುಡ್ಡದ ದಕ್ಷಿಣಕ್ಕೆ ಒಳ ಮತ್ತು ಹೊರ ಕೋಟೆಗಳ ಮಧ್ಯದಲ್ಲಿ ವಿಶಾಲವಾದ ಬಯಲು ಪ್ರದೇಶವಿದೆ. ಇಲ್ಲಿ ವೀರಗಲ್ಲುಗಳು, ಭಗ್ನ ಶಿಲ್ಪಗಳು ಮತ್ತು ಕೆಲವು ಕಟ್ಟಡಗಳ ಅವಶೇಷಗಳಿವೆ. ಕುಮಾರರಾಮನ ಗುಡ್ಡದ ಆಗ್ನೇಯಕ್ಕೆ ಬೊಲ್ಲನ ಕೆರೆಯಿದೆ. ದೊಡ್ಡದಾದ ಈ ಕೆರೆಯ ಸುತ್ತ ಗುಡ್ಡಗಳಿವೆ. ಕೆರೆಯ ನೈರುತ್ಯಕ್ಕೆ ಬೆಟ್ಟದ ಮೇಲೆ ಕೆಲವು ಕಟ್ಟಡಗಳ ಅವಶೇಷಗಳಿವೆ.

ಇದುವರೆಗೆ ಗಮನಿಸಿದ ಕೋಟೆಗಳಲ್ಲದೆ ಗುಡ್ಡಗಳ ಮೇಲೆ ಎತ್ತರದಲ್ಲಿ ಕೆಲವು ಕೋಟೆಗಳಿವೆ. ಈ ಕೋಟೆಗಳಲ್ಲಿ ಸರಳವಾದ ಚಿಕ್ಕ ಬಾಗಿಲುಗಳು ಮತ್ತು ಚೌಕಾಕಾರದ ಕೊತ್ತಳಗಳಿವೆ. ಕುಮಾರರಾಮನ ಗುಡ್ಡದ ಮೇಲೆ ಪೂರ್ವಕ್ಕಿರುವ ಬಾಗಿಲ ಮುಂದಿನ ಮೆಟ್ಟಿಲುಗಳ ಪಕ್ಕದಲ್ಲಿ ಸುರುಳಿಯಾಕಾರದ ಕಟಕಟೆ ಕಲ್ಲುಗಳಿವೆ (ಚಿತ್ರ ೨೫೭). ಗುಡ್ಡಗಳ ಮೇಲೆ ಕೆಲವು ವೃತ್ತಾಕಾರದ ಒಂಟಿ ಕಾವಲು ಗೋಪುರಗಳಿವೆ (ಚಿತ್ರ ೨೬೯). ಹತ್ತಲು ಅಸಾಧ್ಯವಾದ ಗುಡ್ಡಗಳನ್ನು ನೈಸರ್ಗಿಕ ಕೋಟೆಗಳಂತೆ ಪರಿಗಣಿಸಿ ಅವುಗಳ ಮಧ್ಯದ ಕೊಳ್ಳಗಳನ್ನು ಕೋಟೆ ಕಟ್ಟಿ ಬಂಧಿಸಲಾಗಿದೆ.

### ಕಡೆಗಾಪು

ಕಡೆಗಾಪು (citadel) ಕುಮಾರರಾಮನ ಗುಡ್ಡದ ತುದಿಯಲ್ಲಿದೆ (ಚಿತ್ರ ೨೫೮). ಆಯತಾಕಾರದ ಈ ಕಟ್ಟಡದ ನಾಲ್ಕು ಮೂಲೆಗಳಲ್ಲಿ ವೃತ್ತಾಕಾರದ ಕೊತ್ತಳಗಳು ಮತ್ತು ಪೂರ್ವಕ್ಕೆ ಒಂದು ಬಾಗಿಲು ಇವೆ. ನಯಗೊಳಿಸಿದ ಕಲ್ಲುಗಳಿಂದ ಕಟ್ಟಿದ ಬಾಗಿಲು ಶಿಥಿಲಾವಸ್ಥೆಯಲ್ಲಿದೆ. ಮಣ್ಣಲ್ಲಿ ಭಾಗಶಃ ಹೂತಿರುವ ಕಟ್ಟಡದ ಅಧಿಷ್ಠಾನವು ಇಲ್ಲಿಯ ಅರಮನೆ ಅವಶೇಷಗಳ ಅಧಿಷ್ಠಾನದಂತೆ ಇದೆ. ಕಟ್ಟಡಕ್ಕೆ ಗಾರೆ ಮಾಡಿರುವುದು ಅಲ್ಲಲ್ಲಿ ಉಳಿದ ಗಾರೆಯಿಂದ ಸ್ಪಷ್ಟವಾಗುತ್ತದೆ. ಕೊತ್ತಳಗಳಲ್ಲಿ ಬಂದೂಕುಗಳನ್ನು ತೂರಿಸಲು ಮಾಡಿದ ಕಿಂಡಿಗಳಿವೆ. ಈ ಕಟ್ಟಡದಲ್ಲಿ ಮುಸ್ಲಿಮರ ಪ್ರಭಾವ ಸಾಕಷ್ಟು ಇರುವುದರಿಂದ ಕುಮ್ಮಟದ ಪತನದ ನಂತರ ಕೋಟೆ ಮುಸ್ಲಿಮರ ವಶದಲ್ಲಿದ್ದಾಗ ಈ ಕಟ್ಟಡವನ್ನು ಕಟ್ಟಲಾಗಿದೆ.

### ಮದ್ದಿನ ಮನೆ

ಅರಮನೆಯ ಅವಶೇಷಗಳ ಹತ್ತಿರ ಒಂದು ಆಯತಾಕಾರದ ಕಟ್ಟಡವಿದೆ. ಮೇಲಕ್ಕೆ ಹೋದಂತೆ ದಪ್ಪ ಕಿರಿದಾಗುವ ಈ ಕಟ್ಟಡಕ್ಕೆ ಬಾಗಿಲಿಲ್ಲ. ಕಲ್ಲು ಮಣ್ಣಿನಿಂದ ಕಟ್ಟಿದ ಕಟ್ಟಡಕ್ಕೆ ಹೊರಭಾಗಕ್ಕೆ ಗಾರೆ ಮಾಡಿದ ಗುರುತುಗಳಿವೆ. ಕಟ್ಟಡದ ಕಲ್ಲುಗಳಲ್ಲಿ ದೇವಾಲಯಗಳ ಕಲ್ಲುಗಳನ್ನು ಪುನಃ ಉಪಯೋಗಿಸಿರುವುದನ್ನು ಕಾಣಬಹುದು. ಮುಸ್ಲಿಮರ ವಶದಲ್ಲಿದ್ದಾಗ ಕಟ್ಟಿದ ಈ ಕಟ್ಟಡವನ್ನು ಮದ್ದಿನ ಮನೆಯನ್ನಾಗಿ ಉಪಯೋಗಿಸಿದ್ದಾರೆ (ಚಿತ್ರ ೨೫೬).

### ಆನೆಪಾಗ

ರಾಮಸ್ವಾಮಿ ದೇವಾಲಯದ ನೈರುತ್ಯಕ್ಕೆ ಗುಡ್ಡದ ಕೆಳಮಟ್ಟದಲ್ಲಿ ದೊಡ್ಡದಾದ ಆಯತಾಕಾರದ ಕಟ್ಟಡವಿದೆ. ಇದನ್ನು ಆನೆಗಳನ್ನು ಕಟ್ಟುವ ಆನೆಪಾಗವೆಂದು ಕರೆಯುತ್ತಾರೆ. ಇದರ ಗೋಡೆಗಳನ್ನು ದಪ್ಪ ಮತ್ತು ಉದ್ದವಾದ ದಿಮ್ಮಿಯಾಕಾರದ ಕಲ್ಲುಗಳನ್ನು ಒಂದೇ ಸಾಲಿನಲ್ಲಿ ಒಂದರ ಮೇಲೊಂದು ಇಟ್ಟು ಕಟ್ಟಿದ್ದಾರೆ. ಸುಮಾರಾಗಿ ಕತ್ತರಿಸಿದ ಕಲ್ಲುಗಳ ಒಂದು ಬದಿ ಮಾತ್ರ ಸಮತಟ್ಟಾಗಿದೆ. ಈ ಬದಿಯನ್ನು ಕಟ್ಟಡದ ಒಳಭಾಗಕ್ಕೆ ಮಾಡಿ ಕಟ್ಟಿದೆ. ಛಾವಣಿಯಿಲ್ಲದ ಕಟ್ಟಡಕ್ಕೆ ಪಶ್ಚಿಮ ದಿಕ್ಕಿನಲ್ಲಿ ಒಂದು ಬಾಗಿಲಿದೆ. ಒರಟಾದ ಕಲ್ಲುಗಳ ಗಾತ್ರವನ್ನು ನೋಡಿದರೆ ಗೋಡೆಗಳ ಭದ್ರತೆಗೆ ಹೆಚ್ಚು ಮಹತ್ವ ಕೊಟ್ಟಿರುವುದು ಸ್ಪಷ್ಟವಾಗುತ್ತದೆ (ಚಿತ್ರ ೨೫೭). ಈ ಕಟ್ಟಡದ ಬಳಿ ಅನೇಕ ಕಟ್ಟಡಗಳ ಅವಶೇಷಗಳಿವೆ. ನೆಲಮಟ್ಟದಲ್ಲಿ ಮಾತ್ರ ಇರುವ ಇವುಗಳ ಸ್ವರೂಪವನ್ನು ಗುರುತಿಸಲು ಸಾಧ್ಯವಾಗುವುದಿಲ್ಲ.

### ಅರಮನೆಯಂತಹ ಕಟ್ಟಡಗಳು

ಕಡೆಗಾಪಿನ ಪೂರ್ವಕ್ಕೆ ಎರಡು ಅರಮನೆಯಂತಹ ಕಟ್ಟಡಗಳಿವೆ. ಪೂರ್ವಾಭಿಮುಖವಾಗಿರುವ ಈ ಕಟ್ಟಡಗಳನ್ನು ಅಧಿಷ್ಠಾನದಂತಹ ವೇದಿಕೆಗಳ ಮೇಲೆ ಕಟ್ಟಿದೆ. ಒಂದು ಕಟ್ಟಡದ ಮುಂಭಾಗ ಮಧ್ಯದಲ್ಲಿ ಮುಂದೆ ಚಾಚಿದೆ. ಚಾಚಿದ ಭಾಗದಲ್ಲಿ ಒಳಹೋಗಲು ಮೆಟ್ಟಿಲುಗಳಿವೆ. ಈ ಕಟ್ಟಡದಲ್ಲಿ ಜೋಡಿ ವೇದಿಕೆಗಳಿವೆ. ಕೆಳ ವೇದಿಕೆಯಲ್ಲಿ ಉಪಾನ, ಪದ್ಮ, ಕಂಠ ಮತ್ತು ಪದ್ಮ ಪಟ್ಟಿಕೆಗಳಿವೆ. ಈ ವೇದಿಕೆಯ ಮೇಲೆ ಸ್ವಲ್ಪ ಹಿಂದೆ ಸರಿದ ಮೇಲಿನ ವೇದಿಕೆಯಲ್ಲಿ ಉಪಾನ, ಕಂಠ ಮತ್ತು ಪದ್ಮ ಪಟ್ಟಿಕೆಗಳಿವೆ. ಎರಡನೇ ಕಟ್ಟಡದಲ್ಲಿ ಒಂದೇ ವೇದಿಕೆಯಿದ್ದು, ಇದು ಮೊದಲನೇ ಕಟ್ಟಡದ ಕೆಳಗಿನ ವೇದಿಕೆಯಂತಿದೆ (ಚಿತ್ರ ೨೫೮). ಕಟ್ಟಡಗಳ ಒಳಭಾಗ



೨೫೪. ಕುಮ್ಮಟದುರ್ಗ, ಅರಮನೆಯ ಅವಶೇಷಗಳು



೨೫೫. ಕುಮ್ಮಟದುರ್ಗ, ಅರಮನೆಯಂತಹ ಕಟ್ಟಡ



೨೫೬. ಕುಮ್ಮಟದುರ್ಗ, ಮದ್ದಿನ ಮನೆ



೨೫೭. ಕುಮ್ಮಟದುರ್ಗ, ಆನೆಪಾಗ (elephant stables)

ಸಂಪೂರ್ಣವಾಗಿ ಬಿದ್ದು ಹೋಗಿರುವುದರಿಂದ ಇಲ್ಲಿದ್ದವ ಬಜಾರ ಮತ್ತು ಕೊಠಡಿಗಳ ವಿವರ ತಿಳಿಯುವುದಿಲ್ಲ. ಈ ವೇದಿಕೆಗಳು ಹಂಪಿಯಲ್ಲಿರುವ ವಿಜಯನಗರ ಕಾಲದ ಅರಮನೆಗಳ ವೇದಿಕೆಗಳನ್ನು ಹೋಲುತ್ತವೆ.

ಕುಮಾರರಾಮನ ಗುಡ್ಡದ ದಕ್ಷಿಣಕ್ಕಿರುವ ಬಯಲು ಪ್ರದೇಶದಲ್ಲಿ ಒಂದು ಕಟ್ಟಡದ ಅವಶೇಷಗಳಿವೆ (ಚಿತ್ರ ೨೫೭). ಇದರ ವೇದಿಕೆಯನ್ನು ನಯಗೊಳಿಸದ ಒರಟಾದ ಕಲ್ಲುಗಳಿಂದ ಕಟ್ಟಿದೆ. ಉತ್ತರಾಭಿಮುಖವಾಗಿರುವ ಈ ಕಟ್ಟಡದ ಮುಂಭಾಗದಲ್ಲಿ ಸುರುಳಿಯಾಕಾರದ ಕಟಕಟೆಗಳ ಮಧ್ಯದಲ್ಲಿ ಮೆಟ್ಟಿಲುಗಳಿವೆ. ಇಂತಹ ಮತ್ತೊಂದು ಕಟ್ಟಡದ ಅವಶೇಷಗಳು ಕುಮಾರರಾಮನ ಗುಡ್ಡದ ಆಗ್ನೇಯಕ್ಕೆ ಇವೆ. ಈ ಕಟ್ಟಡದ ಆವರಣದ ಸುತ್ತಲು ಗೋಡೆಯಿದೆ. ಕಟ್ಟಡದ ಪಕ್ಕದಲ್ಲಿ ಒಂದು ವೃತ್ತಾಕಾರದ ಕಣಜವಿದೆ.

ಕಾಟಪ್ಪನ ಗುಡ್ಡ ಮತ್ತು ಬೊಲ್ಲನ ಗುಡ್ಡಗಳ ಮಧ್ಯದ ಕೊಳ್ಳದಲ್ಲಿ ಒಂದು ವಿಶಾಲವಾದ ಆವರಣದ ಸುತ್ತ ಗೋಡೆಯನ್ನು ಕಟ್ಟಿದೆ. ಇದಕ್ಕೆ ಪೂರ್ವ ದಿಕ್ಕಿನಲ್ಲಿ ಬಾಗಿಲಿದೆ. ಆವರಣದಲ್ಲಿ ವ್ಯವಸಾಯ ಮಾಡುತ್ತಿರುವುದರಿಂದ ಕಟ್ಟಡದ ಅವಶೇಷಗಳು ಉಳಿದಿಲ್ಲ. ಗೋಡೆಗಳಿಂದ ಸುತ್ತುವರಿದ ಆವರಣ ಹಂಪೆಯಲ್ಲಿಯ ಇಂತಹ ಆವರಣಗಳನ್ನು ಹೋಲುತ್ತದೆ.

## ತೋರಣ

ಕುಮಾರರಾಮನ ಗುಡ್ಡದ ನೈರುತ್ಯಕ್ಕೆ ಕೋಟೆಯ ಒಳಭಾಗದಲ್ಲಿ ಒಂದು ಶಿಲಾ ತೋರಣವಿದೆ. ನಯಗೊಳಿಸಿದ ಕಲ್ಲುಗಳಿಂದ ಕಟ್ಟಿದ ಕಟ್ಟೆಯ ಮೇಲೆ ಇದನ್ನು ನಿರ್ಮಿಸಿದೆ. ಇದನ್ನು ಎರಡು ಕಂಬ ಮತ್ತು ಒಂದು ತೊಲೆಯಿಂದ ರಚಿಸಿದೆ. ಕಂಬಗಳ ಕೆಳಗಿನ ಮತ್ತು ಮೇಲಿನ ಭಾಗಗಳು ಚೌಕಾಕಾರವಾಗಿದ್ದು ಮಧ್ಯದ ಭಾಗ ಅಷ್ಟಭುಜಾಕೃತಿಯಲ್ಲಿದೆ. ಇದರ ಸಮೀಪದಲ್ಲಿ ಎರಡು ನೈಸರ್ಗಿಕವಾದ ಚಪ್ಪಡಿಗಳನ್ನು ನೆಲದಲ್ಲಿ ನೆಡಲಾಗಿದೆ. ಇವುಗಳನ್ನು ಚಿಂತಾಲಕಲ್ಲುಗಳೆಂದು ಕರೆಯುತ್ತಾರೆ.

## ಕೆರೆ, ಬಾವಿ ಮತ್ತು ಕೊಳಗಳು

ಮೂರು ಕೆರೆಗಳು, ಒಂದು ಬಾವಿ ಮತ್ತು ಹಲವು ಕೊಳಗಳು ಕುಮ್ಮಟದ ಜನರಿಗೆ ನೀರನ್ನು ಪೂರೈಸುತ್ತಿದ್ದವು. ಕೋಟೆಯ ಹೊರಗೆ ಈಶಾನ್ಯ ದಿಕ್ಕಿನಲ್ಲಿ ದೊಡ್ಡದಾದ ಕೆರೆಯಿದೆ. ಎರಡು ಗುಡ್ಡಗಳ ಮಧ್ಯದ ಕೊಳ್ಳವನ್ನು ಏರಿ ಕಟ್ಟಿ ಬಂಧಿಸಿ ಈ ಕೆರೆಯನ್ನು ನಿರ್ಮಿಸಿದೆ. ಇದನ್ನು ಮುಕ್ಕುಂಪಿ ಕೆರೆ ಎಂದು ಕರೆಯುತ್ತಾರೆ. ಮತ್ತೊಂದು



೨೫೮. ಕುಮ್ಮಟದುರ್ಗ, ನೀರಿನ ಮೊಣೆ



೨೫೯. ಕುಮ್ಮಟದುರ್ಗ, ವಕ್ರಾಣಿ



೨೬೦. ಕುಮ್ಮಟದುರ್ಗ, ಹಾಲಬಾವಿ



೨೬೧. ಕುಮ್ಮಟದುರ್ಗ, ಜೈನ ಬಸದಿ

ಕೆರೆ ಕೋಟೆಯೊಳಗೆ ಕುಮಾರರಾಮನ ಗುಡ್ಡದ ಪೂರ್ವಕ್ಕಿದೆ. ಇದನ್ನು ಕುಮಾರರಾಮನ ಗುಡ್ಡ ಮತ್ತು ಬೊಲ್ಲನ ಗುಡ್ಡಗಳ ಮಧ್ಯದಲ್ಲಿ ಏರಿಯನ್ನು ನಿರ್ಮಿಸಿ ಮಾಡಲಾಗಿದೆ. ಇದನ್ನು ಕುಮಾರರಾಮನ ಕುದುರೆಯ ಹೆಸರಿನಲ್ಲಿ ಬೊಲ್ಲನ ಕೆರೆ ಎಂದು ಕರೆಯುತ್ತಾರೆ. ಒಣಗಿದ ಈ ಕೆರೆಯ ಅಂಗಳದಲ್ಲಿ ಈಗ ವ್ಯವಸಾಯ ಮಾಡುತ್ತಿದ್ದಾರೆ. ಚಿಕ್ಕದಾದ ಮೂರನೇ ಕೆರೆಯನ್ನು ವಕ್ರಾಣಿ ಎಂದು ಕರೆಯುತ್ತಾರೆ (ಚಿತ್ರ ೨೪೯). ಇದನ್ನು ಮಾದಿಗ ಹಂಪಯ್ಯನ ಗುಡ್ಡ ಮತ್ತು ಕುಮಾರರಾಮನ ಗುಡ್ಡಗಳ ಮಧ್ಯದ ಕೊಳ್ಳದ ಈಶಾನ್ಯ ತುದಿಯಲ್ಲಿ ಕಟ್ಟಿದೆ. ಇದರ ಏರಿಯನ್ನು ದಪ್ಪ ಮತ್ತು ಉದ್ದವಾದ ದಿಮ್ಮಿಯಾಕಾರದ ಕಲ್ಲುಗಳಿಂದ ನಿರ್ಮಿಸಿದೆ. ಕೆರೆಯಲ್ಲಿ ಇಳಿಯಲು ಅಗಲವಾದ ಚಪ್ಪಡಿಗಳನ್ನು ಹಾಕಿ ಇಳಿಜಾರಾದ ದಾರಿಯನ್ನು ನಿರ್ಮಿಸಿದೆ. ಆನೆ ಮತ್ತು ಕುದುರೆಗಳು ನೀರು ಕುಡಿಯಲು ಕೆರೆಯಲ್ಲಿ ಇಳಿಯಲು ಅನುಕೂಲವಾಗುವಂತೆ ದಾರಿಯನ್ನು ನಿರ್ಮಿಸಿದೆ. ಕೆರೆಯ ಸುತ್ತಲಿನ ಇತರ ಭಾಗ ಗುಡ್ಡಗಳಿಂದ ಸುತ್ತುವರಿದಿರುವುದರಿಂದ ಇಲ್ಲಿ ಏರಿಯ ಮೇಲಿನಿಂದಲೇ ದಾರಿಯನ್ನು ನಿರ್ಮಿಸಿದೆ.

ಕೋಟೆಯ ಒಳಗಿನ ಪ್ರದೇಶದಲ್ಲಿ ಬಾವಿಗಳಿಲ್ಲ. ಹೊರಕೋಟೆಯ ಹೊರಗೆ ಕುಮಾರರಾಮನ ಗುಡ್ಡದ ನೈರುತ್ಯಕ್ಕೆ ಒಂದು ಬಾವಿಯಿದೆ. ಇದನ್ನು ಹಾಲು ಬಾವಿಯೆನ್ನು ಕರೆಯುತ್ತಾರೆ. ಚೌಕಾಕಾರದ ಬಾವಿಗೆ ಪಶ್ಚಿಮ ದಿಕ್ಕಿನಲ್ಲಿ ಮೆಟ್ಟಿಲುಗಳಿವೆ (ಚಿತ್ರ ೨೬೦).

ಕೋಟೆ ಪ್ರದೇಶದ ಮಧ್ಯದಲ್ಲಿರುವ ಕುಮಾರರಾಮನ ಗುಡ್ಡದ ಮೇಲೆ ಪ್ರಮುಖವಾದ ಕಟ್ಟಡಗಳಿರುವುದ ರಿಂದ ಇದು ಅನೇಕ ಚಟುವಟಿಕೆಗಳ ಕೇಂದ್ರ ಬಿಂದುವಾಗಿತ್ತು. ಇಲ್ಲಿಯ ಅವಶ್ಯಕತೆಯನ್ನು ಪೂರೈಸುವ ವ್ಯವಸ್ಥೆಯನ್ನು ಗುಡ್ಡದ ಮೇಲೆಯೇ ಮಾಡಲಾಗಿದೆ (ಚಿತ್ರ ೨೫೮). ಮಳೆಗಾಲದಲ್ಲಿ ಬಿದ್ದ ನೀರು ಹರಿದು ಬಂದು ತಗ್ಗಾದ ಭಾಗವನ್ನು ಸೇರುವ ಸ್ಥಳಗಳನ್ನು ಆಯ್ಕೆ ಮಾಡಿ ಅವುಗಳಿಗೆ ಅಡ್ಡವಾಗಿ ಏರಿ ಅಥವಾ ಗೋಡೆಗಳನ್ನು ನಿರ್ಮಿಸಿ ಕೊಳಗಳನ್ನಾಗಿ ಮಾಡಲಾಗಿದೆ. ಇಂತಹ ಏಳು ಕೊಳಗಳು ಇಲ್ಲಿವೆ. ಇವುಗಳಲ್ಲಿ ನಾಲ್ಕು ಕಡೆಗಾಪಿನ ಸುತ್ತ ಆಗ್ನೇಯ, ನೈರುತ್ಯ, ಉತ್ತರ ಮತ್ತು ಈಶಾನ್ಯ ದಿಕ್ಕುಗಳಲ್ಲಿವೆ. ಐದನೆಯದು ಜೈನ ಬಸದಿಯ ಈಶಾನ್ಯಕ್ಕಿದೆ. ಇವಲ್ಲದೆ ಮತ್ತೊಂದು ವಿಶಿಷ್ಟವಾದ ಕೊಳ ಗುಡ್ಡದ ಆಗ್ನೇಯ ಭಾಗದಲ್ಲಿದೆ. ಆಳವಾದ ಈ ಕೊಳ ಗುಡ್ಡದ ಬಂಡೆಗಲ್ಲಿನಲ್ಲಿ ನೈಸರ್ಗಿಕವಾಗಿ ನಿರ್ಮಾಣಗೊಂಡಿದೆ. ಬಂಡೆಯಲ್ಲಿ ಕೊರೆದಂತಿರುವ ಇದರ ಸುತ್ತಲು ಒಂದೇ ಬಂಡೆಯಿದೆ. ಇದರ ನೀರು ಬತ್ತುವುದಿಲ್ಲ. ಕಡು ಬೇಸಿಗೆಯಲ್ಲೂ ಇಲ್ಲಿ ನೀರಿರುತ್ತದೆ. ಈ ನೀರನ್ನು ಈಗಲೂ ಕುಡಿಯುತ್ತಾರೆ. ಇದನ್ನು ಕುಮಾರರಾಮನ ಹೆಸರಿನಲ್ಲಿ ರಾಮನ ದೊಣೆಯೆಂದು

ಕರೆಯುತ್ತಾರೆ. ಮತ್ತೊಂದು ಕೊಳ ಗುಡ್ಡದ ಮೇಲಿನ ಕೋಟೆಯ ಪೂರ್ವ ಬಾಗಿಲಿನ ಹತ್ತಿರ ಹೊರಭಾಗದಲ್ಲಿದೆ. ಮಾದಿಗಹಂಪಯ್ಯನ ಗುಡ್ಡದ ಮೇಲೆ ಒಂದು ಕೊಳವಿದೆ.

## ದೇವಾಲಯಗಳು

ಕೋಟೆಯಲ್ಲಿ ಒಂಬತ್ತು ದೇವಾಲಯಗಳಿವೆ. ಅವುಗಳಲ್ಲಿ ಜೈನಬಸದಿ, ಈಶ್ವರ ದೇವಾಲಯ ಮತ್ತು ರಾಮಸ್ವಾಮಿ ದೇವಾಲಯಗಳು ದೊಡ್ಡವಾಗಿದ್ದು ಬಹಳ ಮಹತ್ವದ್ದಾಗಿವೆ. ಉಳಿದ ದೇವಾಲಯಗಳು ಚಿಕ್ಕವಾಗಿದ್ದು ಶಿಥಿಲಾವಸ್ಥೆಯಲ್ಲಿವೆ. ಕುಮಾರರಾಮನ ಗುಡ್ಡದ ಮೇಲಿರುವ ಜೈನ ಬಸದಿ ದಕ್ಷಿಣಾಭಿಮುಖ ವಾಗಿದೆ (ಚಿತ್ರ ೨೬೧). ಆಯತಾಕಾರದ ದೊಡ್ಡ ಮಂಟಪದ ಉತ್ತರಕ್ಕೆ ಮೂರು ಅಂತರಾಳಗಳಿದ್ದು ಅವುಗಳ ಹಿಂದೆ ಮೂರು ಗರ್ಭಗೃಹಗಳಿವೆ. ಮಂಟಪದ ಪಶ್ಚಿಮಕ್ಕೆ ಎರಡು ಬಾಗಿಲುಗಳಿದ್ದು ಇಲ್ಲಿ ಎರಡು ಗರ್ಭಗಳಿದ್ದಂತೆ ತೋರುತ್ತದೆ. ಬಾಗಿಲುಗಳ ಲಲಾಟ ಬಿಂಬದಲ್ಲಿ ತೀರ್ಥಂಕರನ ಉಬ್ಬು ಶಿಲ್ಪಗಳಿವೆ. ಮಧ್ಯದ ಗರ್ಭಗೃಹದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ತೀರ್ಥಂಕರನ ಶಿಲ್ಪವಿದೆ. ನಿಂತ ಭಂಗಿಯಲ್ಲಿನ ತೀರ್ಥಂಕರನ ಭಗ್ನವಾದ ಒಂದು ಶಿಲ್ಪ ಮಂಟಪದಲ್ಲಿದೆ. ಬಸದಿಯ ಅಧಿಷ್ಠಾನ, ಕಂಬ, ಬಾಗಿಲು ಮುಂತಾದುವುಗಳ ವಾಸ್ತು ವಿನ್ಯಾಸವನ್ನು ನೋಡಿದರೆ ಇದು ಹನ್ನೆರಡು ಹದಿಮೂರನೇ ಶತಮಾನಗಳಿಗೆ ಸೇರಿದ್ದೆಂದು ತಿಳಿಯುತ್ತದೆ. ಕುಮಾರರಾಮನು ಇಲ್ಲಿ ಕೋಟೆಯನ್ನು ಕಟ್ಟಿಸುವುದಕ್ಕಿಂತ ಮೊದಲು ಇಲ್ಲಿ ಜೈನ ಮುನಿಗಳು ವಾಸಿಸುತ್ತಿದ್ದರು. ಕುಮಾರರಾಮನು ಈ ಗುಡ್ಡದ ಪರಿಸರವನ್ನು ಗಮನಿಸಿ, ಕೋಟೆಯ ನಿರ್ಮಾಣಕ್ಕೆ ಇದು ಆಯಕಟ್ಟಿನ ಸ್ಥಳವೆಂದು ನಿರ್ಧರಿಸಿ, ಜೈನ ಮುನಿಗಳನ್ನು ತೆರವುಗೊಳಿಸಿ, ಕೋಟೆಯನ್ನು ನಿರ್ಮಿಸಿದನೆಂಬುದು ಸಾಹಿತ್ಯದಲ್ಲಿ ಉಲ್ಲೇಖಗೊಂಡಿದೆ.[೯] ಇದಕ್ಕೆ ಹೊಂದುವಂತೆ ಜೈನ ಬಸದಿಯು ಕುಮಾರರಾಮನಿಗಿಂತ ಹಿಂದಿನ ಕಾಲದ್ದು. ಅವನು ಇಲ್ಲಿಗೆ ಬರುವುದಕ್ಕಿಂತ ಮೊದಲೇ ಈ ಬಸದಿಯ ನಿರ್ಮಾಣವಾಗಿತ್ತು.

ಮಾದಿಗಹಂಪಯ್ಯನ ಗುಡ್ಡದ ಮೇಲಿನ ದೇವಾಲಯವನ್ನು ಈಶ್ವರ ಅಥವಾ ಮಲ್ಲಿಕಾರ್ಜುನ ದೇವಾಲಯವೆಂದು ಕರೆಯುತ್ತಾರೆ (ಚಿತ್ರ ೨೬೨). ಪೂರ್ವಾಭಿಮುಖವಾಗಿರುವ ದೇವಾಲಯದಲ್ಲಿ ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳಿವೆ. ಅಧಿಷ್ಠಾನದಲ್ಲಿ ಉಪಾನ, ಪದ್ಮ, ಮಸೂರ ಕುಮುದ, ಕಪೋತ ಮತ್ತು ಪದ್ಮ ಪಟ್ಟಿಕೆಗಳಿವೆ. ಅಲಂಕಾರರಹಿತ ಗೋಡೆಯ ಮಧ್ಯಭಾಗದಲ್ಲಿ ಒಂದು ಅಡ್ಡ ಪಟ್ಟಿಯಿದೆ. ಗರ್ಭಗೃಹದ ಮೇಲೆ ಕಳಿಂಗ ಶೈಲಿಯ, ಹತ್ತು ತರಗಳ ಪಿರಾಮಿಡ್ಡು ಆಕಾರದ ಮೇಲ್ಕಟ್ಟಡವಿದೆ. ಪರ್ಯಾಯ ತರಗಳ ಮಧ್ಯದಲ್ಲಿ ಶಿಲ್ಪಗಳ ಚಪ್ಪಡಿಯಿದೆ. ಗರ್ಭಗೃಹದಲ್ಲಿ ಲಿಂಗವಿದೆ. ಸಭಾಮಂಟಪದ ಸುತ್ತಲು ಕಕ್ಷಾಸನವಿದೆ.



೨೬೨. ಕುಮ್ಮಟದುರ್ಗ, ಈಶ್ವರ ದೇವಾಲಯ



೨೬೩. ಕುಮ್ಮಟದುರ್ಗ ರಾಮಸ್ವಾಮಿ ದೇವಾಲಯ

ಇಂತಹ ಎರಡು ದೇವಾಲಯಗಳು ಹಂಪಿಯ ಹೇಮಕೂಟದಲ್ಲಿವೆ. ಅವುಗಳಲ್ಲಿ ಒಂದನ್ನು ಕಂಪಿಲರಾಯ ನಿರ್ಮಿಸಿದನೆಂಬುದು ಅಲ್ಲಿಯ ಶಾಸನದಲ್ಲಿ ಉಲ್ಲೇಖಗೊಂಡಿದೆ.[೭] ಆದುದರಿಂದ ಕುಮ್ಮಟದಲ್ಲಿಯ ಈ ದೇವಾಲಯವು ಸಹ ಕಂಪಿಲರಾಯನ ಕಾಲದ ನಿರ್ಮಾಣವಾಗಿದೆ.

ರಾಮಸ್ವಾಮಿ ದೇವಾಲಯ ಕುಮಾರರಾಮನ ಗುಡ್ಡದ ಮೇಲಿದೆ (ಚಿತ್ರ ೨೬೩). ದೊಡ್ಡ ಬಂಡೆಗೆ ತಾಗಿದಂತೆ ಕಟ್ಟಿದ ಈ ದೇವಾಲಯದಲ್ಲಿ ಗರ್ಭಗೃಹ ಮತ್ತು ಸಭಾಮಂಟಪ ಇವೆ. ಗೋಡೆಯ ಮೇಲೆ ಆನೆ, ಮನುಷ್ಯನ ತಲೆ, ಬಾಲಕೃಷ್ಣ ಮುಂತಾದ ಉಬ್ಬು ಶಿಲ್ಪಗಳಿವೆ. ಗರ್ಭಗೃಹದಲ್ಲಿ ಲಿಂಗದಾಕಾರದ ನೈಸರ್ಗಿಕವಾದ ಕಲ್ಲನ್ನು ಪೂಜಿಸಲಾಗುತ್ತಿದೆ. ವೀರಮರಣದ ನಂತರ ಕುಮಾರರಾಮನ ಕತ್ತರಿಸಿದ ತಲೆ ಲಿಂಗದ ರೂಪ ತಾಳಿತೆಂಬ ಪ್ರತೀತಿಯ ಹಿನ್ನೆಲೆಯಲ್ಲಿ ಇದನ್ನು ಪೂಜಿಸಲಾಗುತ್ತಿದೆ. ಸಭಾಮಂಟಪದಲ್ಲಿ ನಾಲ್ಕು ಚೌಕಾಕಾರದ ಕಂಬಗಳಿವೆ. ಇವುಗಳಲ್ಲಿ ಮೂರು ಚೌಕಾಕಾರದ ಮತ್ತು ಎರಡು ಅಷ್ಟಭುಜಾಕೃತಿಯ ಭಾಗಗಳಿವೆ. ಚೌಕಾಕಾರದ ಭಾಗದ ಬದಿಗಳಲ್ಲಿ ಆನೆ ಸವಾರರು, ಕುದುರೆ ಸವಾರರು, ನೃತ್ಯಗಾರರು, ಬೇಟೆಗಾರರು, ಶಂಖ, ಚಕ್ರ, ನಾಮ, ಚಂದ್ರ, ಮೀನು ಮುಂತಾದ ಉಬ್ಬು ಶಿಲ್ಪಗಳಿವೆ. ಕಂಬಗಳ ಮೇಲೆ ಪುಷ್ಪ ಬೋದಿಗೆಗಳಿವೆ. ಸಭಾಮಂಟಪಕ್ಕೆ ಮೂರು ದಿಕ್ಕಿನಲ್ಲಿ ಮೂರು ಬಾಗಿಲುಗಳಿವೆ. ಗರ್ಭಗೃಹ ಮತ್ತು ಸಭಾಮಂಟಪದ ಬಾಗಿಲುಗಳ ಮೇಲೆ ವೈಷ್ಣವ ದ್ವಾರಪಾಲರ ಮತ್ತು ಗಜಲಕ್ಷ್ಮಿಯ ಶಿಲ್ಪಗಳಿವೆ. ಕುಮಾರರಾಮನ ವೀರಮರಣದ ನಂತರ ಕಟ್ಟಿಸಿದ ಈ ದೇವಾಲಯದ ಕಂಬ ಮತ್ತು ಬಾಗಿಲುಗಳು ವಿಜಯನಗರ ಶೈಲಿಯಲ್ಲಿವೆ. ಆದುದರಿಂದ ಇದನ್ನು ಹದಿನಾರನೇ ಶತಮಾನದ್ದೆಂದು ಹೇಳಬಹುದು. ಕಂಪಿಲರಾಯನ ಮತ್ತೊಂದು ರಾಜಧಾನಿಯಾದ ಹೊಸಮಲೆ ದುರ್ಗದಲ್ಲಿ ಕೊನೇರಿನಾಯಕನ ಮಗಳು ಗೋಪಾಯಿ ಎಂಬ ಮಹಿಳೆ ಮತ್ತು ಇತರರು ಕ್ರಿ.ಶ. ೧೫೨೮ರಲ್ಲಿ ರಾಮನಾಥ ಮತ್ತು ಆತನ ಸಂಗಡಿಗರಿಗೆ ವೀರಸ್ವರ್ಗವಾಗಲೆಂದು ರಾಮನಾಥದೇವರ ದೇವಾಲಯವನ್ನು ಕಟ್ಟಿಸಿದ್ದಾರೆ.[೮] ಅದನ್ನು ಈಗ ರಾಮಸ್ವಾಮಿ ದೇವಾಲಯವೆಂದೇ ಕರೆಯುತ್ತಾರೆ. ಕುಮ್ಮಟದ ರಾಮಸ್ವಾಮಿ ದೇವಾಲಯದ ಹಿಂದಿನ ಬಂಡೆಯ ಮೇಲಿನ ಹಾಳಾಗಿರುವ ಶಾಸನದಲ್ಲಿ ಕೊನೇರಿಯ ಮಗಳು ಗೋಪಾಯಿಯ ಉಲ್ಲೇಖವಿದೆ.[೯] ಆದುದರಿಂದ ಅವಳೇ ಕುಮ್ಮಟದ ದೇವಾಲಯವನ್ನು ಕಟ್ಟಿಸಿದ್ದಾಳೆಂದು ಹೇಳಬಹುದು.

ಹಾಲುಬಾವಿಯ ಪೂರ್ವಕ್ಕೆ ಬಂಡೆಯ ಮೇಲಿರುವ ಶಾಸನವು ರಾಮನಾಥ ದೇವರ ಮನೆಯನ್ನು ಉಲ್ಲೇಖಿಸಿ ಅದನ್ನು ಸಿರಿಗೆನಾಯಕ ಮತ್ತು ಹನುಮನಾಯಕರು ಕೊಟ್ಟರೆಂದು ಉಲ್ಲೇಖಿಸುತ್ತದೆ.[೧೦] ಶಾಸನದ ಎರಡನೇ ಸಾಲಿನಲ್ಲಿ ಆನೆಯಗುಂದಿಯ ಉಲ್ಲೇಖವಿದೆಯಾದರೂ ಆ ಸಾಲಿನ ಕೊನೆಯ ಎರಡಕ್ಷರಗಳು ಸ್ಪಷ್ಟವಾಗಿಲ್ಲದಿರು

ವುದರಿಂದ ಆನೆಯಗುಂದಿಗೂ ರಾಮನಾಥನ ಮನೆಗೂ ಇರುವ ಸಂಬಂಧ ಸ್ಪಷ್ಟವಾಗುವುದಿಲ್ಲ. ಶಾಸನದ ಮೊದಲ ಸಾಲಿನಲ್ಲಿ ಎರಡು ವೃತ್ತಗಳ ಮಧ್ಯದಲ್ಲಿ "ಶ್ರೀ ರಾಮನತ ದೇವರ ಮನೆ" ಎಂದು ಮಾತ್ರವಿದೆ. ಕೊನೆಯ ಎರಡು ಸಾಲುಗಳಲ್ಲಿ "ಯಿ ಮನೆಕೆ ತಪಿದರೆ ಕತೆಯು......"ಎಂಬ ಶಾಪವಾಕ್ಯವಿದೆ. ಇವೆರಡನ್ನು ಗಮನಿಸಿದರೆ ರಾಮನಾಥನ ಮನೆ ಶಾಸನವಿರುವ ಸ್ಥಳದಲ್ಲಿಯೇ ಇದ್ದುದು ಸ್ಪಷ್ಟವಾಗುತ್ತದೆ. ಆದರೇ ಈಗ ಅಲ್ಲಿ ಕಟ್ಟಡದ ಅವಶೇಷಗಳು ಉಳಿದಿಲ್ಲ. ಶಾಸನದಲ್ಲಿಯ ಶಾಪವಾಕ್ಯವನ್ನು ಗಮನಿಸಿದಾಗ ಶಾಸನವು ವಿಜಯನಗರ ಕಾಲದೆಂದು ಸ್ಪಷ್ಟವಾಗುತ್ತದೆ. ರಾಮನಾಥನ ದೇವಾಲಯವನ್ನು ಶಾಸನವು ರಾಮನಾಥನ ಮನೆ ಎಂದು ಉಲ್ಲೇಕಿಸಿದೆ. ಆದುದರಿಂದ ವಿಜಯನಗರ ಕಾಲದಲ್ಲಿ ಕುಮಾರರಾಮನ ಮತ್ತೊಂದು ದೇವಾಲಯವನ್ನು ಇಲ್ಲಿ ಕಟ್ಟಿಸಲಾಗಿತ್ತು.

ಉಳಿದ ದೇವಾಲಯಗಳು ಚಿಕ್ಕವಾಗಿದ್ದು ಶಿಥಿಲಾವಸ್ಥೆಯಲ್ಲಿವೆ. ವಕ್ರಾಣಿಯ ದಕ್ಷಿಣಕ್ಕಿರುವ ದೇವಾಲಯ ದಲ್ಲಿ ಗರ್ಭಗೃಹ ಮಾತ್ರವಿದೆ. ಬೊಲ್ಲನ ಕೆರೆಯ ವಾಯುವ್ಯಕ್ಕಿರುವ ದೇವಾಲಯವನ್ನು ಚೆನ್ನಾಗಿ ನಯಗೊಳಿಸಿದ ಚಪ್ಪಡಿಗಳಿಂದ ಕಟ್ಟಿದೆ. ಇದರಲ್ಲಿ ಗರ್ಭಗೃಹ ಮತ್ತು ಅಂತರಾಳ ಇವೆ. ಚಿಂತಾಲಕಲ್ಲಿನ ಹತ್ತಿರವಿರುವ ಅತಿ ಚಿಕ್ಕ ದೇವಾಲಯವನ್ನು ಚಿಕ್ಕ ಒರಟುಗಲ್ಲುಗಳಿಂದ ಕಟ್ಟಿದೆ. ಆನೆಪಾಗದ ಹತ್ತಿರವುರುವ ಕಾಟಪ್ಪನ ದೇವಾಲಯವನ್ನು ಚೆನ್ನಾಗಿ ನಯಗೊಳಿಸಿದ ಚಪ್ಪಡಿಗಳಿಂದ ಕಟ್ಟಿದೆ. ರಾಮನದೋಣೆಯ ಹತ್ತಿರದ ಆಂಜನೇಯ ದೇವಾಲಯವನ್ನು ಒರಟುಗಲ್ಲು ಮತ್ತು ಮಣ್ಣಿನಿಂದ ಕಟ್ಟಿದೆ. ಇದರಲ್ಲಿ ಆಂಜನೇಯನ ಶಿಲ್ಪವಿದೆ. ಕುಮಾರರಾಮನ ಗುಡ್ಡದ ದಕ್ಷಿಣಕ್ಕೆ ಹೊರಕೋಟೆಯ ಹೊರಗಿರುವ ದೇವಾಲಯದ ಕೆಲವು ಚಪ್ಪಡಿಗಳು ಮಾತ್ರ ಉಳಿದಿವೆ.

## ವೀರಗಲ್ಲುಗಳು

ಕುಮ್ಮಟದುರ್ಗದಲ್ಲಿ ನಡೆದ ಅನೇಕ ಭೀಕರ ಯುದ್ಧಗಳಲ್ಲಿ ವೀರಸ್ವರ್ಗವನ್ನು ಪಡೆದವರಿಗಾಗಿ ವೀರಗಲ್ಲು ಗಳನ್ನು ಸ್ಥಾಪಿಸಲಾಗಿದೆ. ಅಂತಹ ಹದಿನೆಂಟು ವೀರಗಲ್ಲುಗಳನ್ನು ಈಗಲೂ ಕುಮ್ಮಟದುರ್ಗದಲ್ಲಿ ನೋಡಬಹುದು. ಇವುಗಳಲ್ಲಿ ಒಂದು ಕುಮಾರರಾಮನ ಗುಡ್ಡದ ನೈರುತ್ಯಕ್ಕೆ ಎರಡು ಕೋಟೆಗಳ ಮಧ್ಯದಲ್ಲಿ, ಇದರ ಆಗ್ನೇಯಕ್ಕೆ ಎರಡು, ಕುಮಾರರಾಮನ ಗುಡ್ಡದ ದಕ್ಷಿಣಕ್ಕಿರುವ ಬಯಲಲ್ಲಿ ಎರಡು, ಬೊಲ್ಲನ ಕೆರೆಯ ವಾಯುವ್ಯಕ್ಕೆ ದೇವಾಲಯದ ಪಕ್ಕದಲ್ಲಿ ಮೂರು, ಕುಮಾರರಾಮನ ಗುಡ್ಡದ ಈಶಾನ್ಯಕ್ಕೆ ಒಳ ಮತ್ತು ಮಧ್ಯ

ಕೋಟೆಗಳ ನಡುವೆ ಮೂರು, ರಾಮಸ್ವಾಮಿ ದೇವಾಲಯದ ಹತ್ತಿರ ಎರಡು, ಕಡೆಗಾಪಿನ ಉತ್ತರ ಗೋಡೆಯಲ್ಲಿ ಒಂದು, ಕಡೆಗಾಪಿನ ದಕ್ಷಿಣಕ್ಕೆ ಒಂದು (ಇದರ ಒಡೆದ ಒಂದು ಭಾಗ ಕಡೆಗಾಪಿನ ಪಶ್ಚಿಮ ಗೋಡೆಯಲ್ಲಿದೆ) ಗುಲಗುಂಜಿ ಗುಡ್ಡ ಮತ್ತು ಕಾಟಪ್ಪನ ಗುಡ್ಡಗಳ ಮಧ್ಯದ ಕೊಳ್ಳದಲ್ಲಿ ಒಂದು, ಕುಮಾರರಾಮನ ಗುಡ್ಡದ ದಕ್ಷಿಣಕ್ಕೆ ಕುದುರೆಕಲ್ಲುಗಳ ಪೂರ್ವ ತುದಿಯಲ್ಲಿ ಒಂದು ಇವೆ. ಸಾಮಾನ್ಯವಾಗಿ ವೀರಗಲ್ಲುಗಳಲ್ಲಿ ಮೂರು ಪಟ್ಟಿಕೆಗಳಿವೆ. ಕೆಳಗೆ ವೀರನು ವೈರಿಗಳೊಂದಿಗೆ ಹೋರಾಡುವ ದೃಶ್ಯ, ಮಧ್ಯದಲ್ಲಿ ವೀರನು ಚೌರಿ ಹಿಡಿದ ಅಪ್ಸರೆಯರೊಂದಿಗೆ ಸ್ವರ್ಗಕ್ಕೆ ಹೋಗುವ ದೃಶ್ಯ ಮತ್ತು ಮೇಲ್ಭಾಗದಲ್ಲಿ ವೀರನು ಸ್ವರ್ಗದಲ್ಲಿ ಲಿಂಗದ ಮುಂದೆ ಕುಳಿತಿರುವ ದೃಶ್ಯಗಳಿವೆ. ಎರಡು ವೀರಗಲ್ಲುಗಳ ಮೇಲೆ ಲಿಂಗದ ಬದಲು ಜೈನ ತೀರ್ಥಂಕರನಿದ್ದಾನೆ.

ಎರಡು ವೀರಗಲ್ಲುಗಳ ಮೇಲೆ ಶಾಸನಗಳಿವೆ. ಕ್ರಿ.ಶ. ೧೩೧೫ರ ಒಂದು ಶಾಸನವು ವೀರ ಕಂಪಿಲದೇವನು ಕುಮ್ಮಟದಲ್ಲಿ ರಾಜ್ಯಭಾರ ಮಾಡುತ್ತಿದ್ದಾಗ ಸುಲ್ತಾನನ ದಳ ನೇಮಿ ಸಹಿತ ನಡೆದು ಬಂದಾಗ ಕಾಮಿನಾಯ್ಕನು ರಣದಲ್ಲಿ ಹೋರಾಡಿ ಹತನಾದನೆಂದು ತಿಳಿಸುತ್ತದೆ.[೨] ಶಾಸನದಲ್ಲಿ ಉಲ್ಲೇಖಗೊಂಡ ಕಾಲಮಾನ ಕ್ರಿ.ಶ. ೧೩೧೫ರಲ್ಲಿ ಮಲ್ಲಿಕ್ ನಾಯಿಬ್ ಕಾಫರ್‌ನ ದಂಡಯಾತ್ರೆಗೆ ಸಮವಾಗುತ್ತದೆ. ಈ ವೀರಗಲ್ಲು ಬಹಳ ಮಹತ್ವದ ವಿಷಯಗಳನ್ನು ತಿಳಿಸುತ್ತದೆ. ಮೊದಲನೆಯದು ಕಂಪಿಲದೇವ ಕುಮ್ಮಟದಲ್ಲಿ ರಾಜ್ಯಭಾರ ಮಾಡುತ್ತಿದ್ದುದು ಮತ್ತು ಎರಡನೆಯದು ಇಲ್ಲಿ ಸುಲ್ತಾನನ ಸೈನ್ಯ ಕುಮ್ಮಟದ ಮೇಲೆ ಏರಿ ಬಂದು ಇಲ್ಲಿ ಯುದ್ಧ ನಡೆದದ್ದು. ಈ ಶಾಸನದಿಂದ ಅವಶೇಷಗಳು ಹರಡಿರುವ ಸ್ಥಳವೇ ಕುಮ್ಮಟವೆಂದು ನಿಸ್ಸಂದೇಹವಾಗಿ ಹೇಳಬಹುದು. ಈ ವೀರಗಲ್ಲಿನ ಕೆಳಭಾಗದಲ್ಲಿ ಕತ್ತಿ ಗುರಾಣಿ ಹಿಡಿದು ನೆಲದ ಮೇಲೆ ನಿಂತಿರುವ ವೀರ ಐದು ಜನ ಗಡ್ಡಧಾರಿಗಳೊಂದಿಗೆ ಹೋರಾಡುತ್ತಿದ್ದಾನೆ. ವೈರಿಗಳಲ್ಲಿ ಮೂವರು ಕುದುರೆಗಳ ಮೇಲಿದ್ದಾರೆ. ವೈರಿಗಳಲ್ಲಿ ಒಬ್ಬನು ಈಟಿ, ಇಬ್ಬರು ಕತ್ತಿ ಗುರಾಣಿಯನ್ನು ಮತ್ತು ಉಳಿದಿಬ್ಬರು ಬಿಲ್ಲು ಬಾಣಗಳನ್ನು ಹಿಡಿದಿದ್ದಾರೆ. ವೀರನ ಹಿಂದಿರುವ ಸೇವಕನು ವೀರನ ತಲೆಯ ಮೇಲೆ ಕೊಡೆಯನ್ನು ಹಿಡಿದಿದ್ದಾನೆ. ವೀರನ ಹಿಂದೆ ನಿಂತಿರುವ ನಾಲ್ವರು ಕತ್ತಿ ಗುರಾಣಿಗಳನ್ನು ಹಿಡಿದಿದ್ದಾರೆ. ನೆಲದ ಮೇಲೆ ಬಿದ್ದಿರುವ ಒಬ್ಬ ಗಡ್ಡಧಾರಿ ಕೈಯಲ್ಲಿ ಬಿಲ್ಲು ಬಾಣಗಳನ್ನು ಹಿಡಿದಿದ್ದಾನೆ. ಇವನು ತೊಟ್ಟಿರುವ ಅಂಗಿಯಿಂದ ಮತ್ತು ಗಡ್ಡದಿಂದ ಇವನೊಬ್ಬ ಮುಸಲ್ಮಾನನೆಂದು ಗುರುತಿಸಬಹುದು. ಉಳಿದ ಗಡ್ಡಧಾರಿಗಳೂ ಮುಸ್ಲಿಮರು. ವೀರಗಲ್ಲಿನ ಮಧ್ಯದಲ್ಲಿ ಪಲ್ಲಕ್ಕಿಯಲ್ಲಿ ಕುಳಿತಿರುವ ವೀರನನ್ನು ಇಬ್ಬರು ಚೌರಿ ಹಿಡಿದ ಅಪ್ಸರೆಯರು ಸ್ವರ್ಗಕ್ಕೆ ಒಯ್ಯುತ್ತಿದ್ದಾರೆ. ಮೇಲ್ಭಾಗದಲ್ಲಿ ವೀರನು ಕೈಮುಗಿದು ಕುಳಿತಿದ್ದಾನೆ. ಪುರೋಹಿತನು ಲಿಂಗವನ್ನು ಪೂಜಿಸುತ್ತಿದ್ದಾನೆ. ಪಕ್ಕದಲ್ಲಿ



೨೬೬. ಕುಮ್ಮಟದುರ್ಗ, ವೀರಗಲ್ಲು



೨೬೭. ಕುಮ್ಮಟದುರ್ಗ, ಕುಮಾರರಾಮನ ಕುದುರೆ ಬೊಲ್ಲ



೨೬೮. ಕುಮ್ಮಟದುರ್ಗ, ಕುಮಾರರಾಮನ ಶಿಲ್ಪ



೨೬೯. ಕುಮ್ಮಟದುರ್ಗ, ಕಾವಲು ಗೋಪುರ

ನಂದಿ ಮೇಲೆ ಸೂರ್ಯ ಚಂದ್ರರಿದ್ದಾರೆ. ಇಂತಹದೇ ಮತ್ತೊಂದು ವೀರಗಲ್ಲಿನ ಮೇಲಿನ ಶಾಸನವು ಕಂಪಿಲನು ಸುಲ್ತಾನನ ಸೈನ್ಯವನ್ನು ಎದುರಿಸಿದಾಗ ಸಿಂಗನು ಯುದ್ಧದಲ್ಲಿ ಹೋರಾಡಿ ಮಡಿದನೆಂದು ತಿಳಿಸುತ್ತದೆ.[೨೨] ಈ ವಾರಗಲ್ಲಿನ ಶಿಲ್ಪದಲ್ಲಿ ಎಡಗೈಯಲ್ಲಿ ಕತ್ತಿ ಹಿಡಿದ ಸಿಂಗನು ಅಶ್ವಾರೋಹಿ ಮುಸ್ಲಿಮರೊಂದಿಗೆ ಹೋರಾಡುತ್ತಿದ್ದಾನೆ (ಚಿತ್ರ ೨೬೫).

ಒಂದು ದೊಡ್ಡ ವೀರಗಲ್ಲಿನಲ್ಲಿ ಯುದ್ಧದ ದೃಶ್ಯವನ್ನು ವಿವರವಾಗಿ ಚಿತ್ರಿಸಿದೆ (ಚಿತ್ರ ೨೬೬). ಕುದುರೆಯ ಮೇಲೆ ಕುಳಿತಿರುವ ವೀರನು ಕೈಯಲ್ಲಿ ಕತ್ತಿಯನ್ನು ಹಿಡಿದಿದ್ದಾನೆ. ಅವನ ಹಿಂದೆ ಇಬ್ಬರು ಕುದುರೆ ಸವಾರರಿದ್ದಾರೆ. ಅವರಲ್ಲಿ ಒಬ್ಬನು ಎರಡು ಸಲ ಬಾಗಿದ ಕತ್ತಿಯನ್ನು ಮತ್ತೊಬ್ಬನು ನೆಟ್ಟಗಿರುವ ಕತ್ತಿಯನ್ನು ಹಿಡಿದಿದ್ದಾರೆ. ವೀರನ ಹಿಂದೆ ನೆಲದ ಮೇಲೆ ಇಬ್ಬರು ನಿಂತಿದ್ದಾರೆ. ಅವರಲ್ಲಿ ಒಬ್ಬನು ಮೇಲೆತ್ತಿದ ಎರಡು ಕೈಗಳಿಂದ ಉದ್ದವಾದ ಈಟಿಯನ್ನು ಮತ್ತೊಬ್ಬನು ವೀರನ ಮೇಲೆ ಕೊಡೆಯನ್ನು ಹಿಡಿದಿದ್ದಾರೆ. ವೀರನು ಎದುರಿಗಿರುವ ಇಬ್ಬರು ಕುದುರೆ ಸವಾರರನ್ನು ಎದುರಿಸುತ್ತಿದ್ದಾನೆ. ವೈರಿ ಪಡೆಯ ಇನ್ನಿಬ್ಬರು ಪಕ್ಕದಲ್ಲಿ ನೆಲದ ಮೇಲಿದ್ದಾರೆ. ಸತ್ತವರು ಮತ್ತು ಗಾಯಗೊಂಡವರು ಕೆಳಗೆ ನೆಲದ ಮೇಲೆ ಬಿದ್ದಿದ್ದಾರೆ. ಎಡಭಾಗದಲ್ಲಿರುವ ಒಬ್ಬನ ಬಲಗಾಲು ತುಂಡಾಗಿ ದೇಹದಿಂದ ದೂರ ಸರಿದಿದೆ. ಮಧ್ಯದಲ್ಲಿರುವವ ಕತ್ತರಿಸಿದ ತಲೆಯು ದೂರದಲ್ಲಿ ಬಿದ್ದಿದೆ. ಬಲಭಾಗದಲ್ಲಿ ಒಬ್ಬನ ದೇಹದ ಸೊಂಟದಿಂದ ಕೆಳಗಿನ ಅರ್ಧಭಾಗ ಮಾತ್ರ ಕಾಣುತ್ತಿದೆ. ವೀರಗಲ್ಲಿನ ಮಧ್ಯದ ಪಟ್ಟಿಕೆಯಲ್ಲಿ ಮಧ್ಯದಲ್ಲಿರುವ ವೀರನ ಒಂದೊಂದು ಬದಿಗೆ ನಾಲ್ಕು ಜನ ಹೆಂಗಸರಿದ್ದಾರೆ. ಒಂಬತ್ತು ಜನ ಕೈ ಕೈ ಹಿಡಿದು ಹಾರುವ ಭಂಗಿಯಲ್ಲಿದ್ದಾರೆ. ತುದಿಯಲ್ಲಿರುವ ಹೆಂಗಸರು ಕೈಯಲ್ಲಿ ಚೌರಿಯನ್ನು ಹಿಡಿದಿದ್ದಾರೆ. ಮೇಲಿನ ಪಟ್ಟಿಕೆಯಲ್ಲಿ ಮಧ್ಯದಲ್ಲಿ ಲಿಂಗವಿದೆ. ಬಲಭಾಗದಲ್ಲಿ ಗುರು ಲಿಂಗವನ್ನು ಪೂಜಿಸುತ್ತಿದ್ದಾನೆ ಮತ್ತು ವೀರನು ಕೈಮುಗಿದು ಕುಳಿತಿದ್ದಾನೆ. ಎಡಭಾಗದಲ್ಲಿ ಎಂಟು ಜನ ಹೆಂಗಸರು ಕೈಮುಗಿದು ಕುಳಿತಿದ್ದಾರೆ. ಇಲ್ಲಿರುವ ಎಂಟು ಜನ ಹೆಂಗಸರು ವೀರನ ಸತಿಯರು. ವೀರನು ಯುದ್ಧದಲ್ಲಿ ಮಡಿದ ನಂತರ ಅವರು ಸಹಗಮನ ಮಾಡಿ ಸ್ವರ್ಗ ಸೇರಿದ್ದಾರೆ.

ಕುಮಾರರಾಮನೆಂದು ಗುರುತಿಸಲಾಗುತ್ತಿರುವ ಒಂದು ಶಿಲ್ಪವಿದೆ[೨೩] ಸಿಂಗರಿಸಿದ ಕುದುರೆಯ ಮೇಲೆ ಕುಳಿತ ವೀರ ಎಡಗೈಯಲ್ಲಿ ಕುದುರೆಯ ಲಗಾಮು ಮತ್ತು ಮೇಲೆತ್ತಿದ ಬಲಗೈಯಲ್ಲಿ ಕತ್ತಿಯನ್ನು ಹಿಡಿದಿದ್ದಾನೆ (ಚಿತ್ರ ೨೬೮). ತಲೆಯ ಮೇಲಿನ ಚಿಕ್ಕ ರುಮಾಲಿನಿಂದ ಅಲಂಕಾರಿಕ ಗೊಂಡೆಗಳು ಇಳಿ ಬಿದ್ದಿವೆ. ವೀರನಿಗೆ ಚೂಪಾದ ಉದ್ದ ಮೀಸೆಗಳಿವೆ. ಸೊಂಟಕ್ಕೆ ಕಿರುಗತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಅವನ ಬಲಭಾಗದಲ್ಲಿ ಹೆಡೆ

ಬಿಚ್ಚಿದ ಹಾವಿದೆ. ಪಕ್ಕದಲ್ಲಿ ಸೂರ್ಯ ಚಂದ್ರರಿದ್ದಾರೆ. ಮೇಲೆ ಹೂವನ್ನು ಕೊಕ್ಕಿನಲ್ಲಿ ಹಿಡಿದ ಗಿಳಿಯಿದೆ. ಈತನೇ ತನ್ನ ನೆಚ್ಚಿನ ಕುದುರೆ ಬೊಲ್ಲನ ಮೇಲೆ ಕುಳಿತಿರುವ ಕುಮಾರರಾಮನೆಂದು ಗುರುತಿಸುತ್ತಾರೆ. ಕುಮಾರರಾಮನ ಕುದುರೆ ಬೊಲ್ಲನದೇ ಪ್ರತ್ಯೇಕವಾದ ಶಿಲ್ಪವು ರಾಮಸ್ವಾಮಿ ದೇವಾಲಯದ ಬಳಿಯಿದೆ. ಲಗಾಮು, ಝೂಲು ಹಾಕಿ ಸಿಂಗರಿಸಿದ ಕುದುರೆ ಮುಂದಿನ ಎಡಗಾಲನ್ನೆತ್ತಿ ಮುಂದೆ ಸಾಗುವ ಭಂಗಿಯಲ್ಲಿದೆ (ಚಿತ್ರ ೨೬೭).[೨೫]

ಉದ್ದವಾದ ದಿಮ್ಮಿಯಾಕಾರದ ಕಲ್ಲುಗಳಿಂದ ಕಟ್ಟಿದ ಈಶಾನ್ಯ ದಿಕ್ಕಿಗಿರುವ ಹೊರಕೋಟೆ ಹನ್ನೊಂದು -ಹನ್ನೆರಡನೇ ಶತಮಾನಗಳದ್ದು. ಚೌಕಾಕಾರದ ದಪ್ಪಕಲ್ಲುಗಳಿಂದ ಕಟ್ಟಿದ ಕೋಟೆಯು ಕಂಪಿಲದೇವನ ಕಾಲದಲ್ಲಿ ಹದಿನಾಲ್ಕನೇ ಶತಮಾನದ ಆರಂಭದಲ್ಲಿ ಕಟ್ಟಿದ್ದು. ವೃತ್ತಾರದ ಕೊತ್ತಳಗಳ ಕಡೆಗಾಪು ಹದಿನೈದು-ಹದಿನಾರನೇ ಶತಮಾನಗಳದ್ದು.

### ಟಿಪ್ಪಣಿಗಳು

೧. Rama Sharma M.H., 1930, " Vestiges of Kummata ", *QJMS*, xx, pp. 261-270; ವರದರಾಜರಾವ್ ಜಿ., ೧೯೮೫, *ಕುಮ್ಮಟದುರ್ಗ*; Patil Channabasappa S. 1991, "Kummata ," VPR, 1987-88, pp. 199-216; ಪಾಟೀಲ ಚನ್ನಬಸಪ್ಪ ಎಸ್., ೧೯೯೯, *ಕರ್ನಾಟಕ ಕೋಟೆಗಳು*, ಸಂಪುಟ ೧, ಪು. ೭೦-೭೮.

೨. Patil Channabasappa S., 1998, *Inscriptions of Raichur District*, No. 28; *ARIE*, 1957-58, No. B 342.

೩. Gopal B.R., 1981, *The Chalukyas of Kalyana and the Kalachuris*, p.6.

೪. *EC*, II, S.B. 335 (130); IV, Nagamangala 70; *MAR*, 1937, No. 26.

೫. *ARIE*, 1935-36, No. E 23; *EI*, XXIII, p. 184; *SII*, XX, No. 222.

೬. Patil Channabasappa S., 1996, "Doravadi," *VPR*, 1988-91, pp. 243-247.

೭. Patil Channabasappa S., 1996, "Hosamaledurga," VPR, 1988-91, pp. 236-242.

೮. Rama Sharma M.H., 1929, "Studies in Vijayanagara History, "*QJMS*, xx, pp. 8-9; ವರದರಾಜರಾವ್ ಜಿ., 1966, *ಕುಮಾರರಾಮನ ಸಾಂಗತ್ಯಗಳು*, ಪು. ೨೬೪-೨೬೫.

೯. Patil Channabasappa S., 1991, "Mummadi Singa, Kampila and Kumara Rama," *VPR,* 1988-89, pp. 179-198.

೧೦. *ಅದೇ.*

೧೧. Sewell Robert, 1982, *A Forgetten Empire,* p 17.

೧೨. *EC,* VIII, Tirthahalli 23.

೧೩. *EI*, XXIII, No. 28, pp. 182-185; *ARIE,* 1943-44, No.B 76; ಹರ್ಲಾಪುರ ಸುರೇಶ ಬ., ೧೯೯೮, "ಹಾನಗಲ್ಲ ಪರಿಸರದಲ್ಲಿ ಕುಮಾರರಾಮನ ಶಿಲ್ಪಗಳು". ಇತಿಹಾಸ ದರ್ಶನ ಸಂ. ೧೩, ಪು. ೫೫-೫೬.

೧೪. Sewell Robert, *ಪೂರ್ವೋಕ್ತ,* p. 88.

೧೫. *ಅದೇ,* p. 253.

೧೬. ವರದರಾಜರಾವ್, ೧೯೭೬, ಪೂರ್ವೋಕ್ತ, ಪು. ೨೬೪-೨೬೫.

೧೭. Patil Channabasappa S., 1992, *Temples of Raichur and Bellary District,* pp. 125-129.

೧೮. Patil Channabasappa S., 1996, "Hosamaledurga." *VPR,* 1988-91, pp. 236-242.

೧೯. ದೇವರಕೊಂಡಾರೆಡ್ಡಿ (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ : ೨ ಕೊಪ್ಪಳಜಿಲ್ಲೆ,* ಕೊಪ್ಪಳ ತಾಲೂಕ ೧೬೭.

೨೦. *ಅದೇ,* ಕೊಪ್ಪಳ ತಾಲೂಕ ೧೬೬.

೨೧. *ಅದೇ,* ಕೊಪ್ಪಳ ತಾಲೂಕ ೧೬೪ ; *VPR,* 1987-88, pp. 211-212.

೨೨. *ಅದೇ,* ಕೊಪ್ಪಳ ತಾಲೂಕ ೧೬೫; *VPR*, 1987-88, pp. 212-213.

೨೩. Rama Sharma M.H., 1930, "Vestiges of Kummata," *QJMS,* XX, p. 266.

೨೪. *ಅದೇ,* p. 269.

# ೧೬. ಶಿವಪುರ

ಶಿವಪುರ ಕೊಪ್ಪಳ ತಾಲೂಕಿನಲ್ಲಿ ಕೊಪ್ಪಳದ ಪೂರ್ವಕ್ಕೆ ೨೪ ಕಿ.ಮೀ. ದೂರದಲ್ಲಿದೆ. ಇದು ಅಕ್ಷಾಂಶ ೧೫° ೨೦' ಉತ್ತರ ಮತ್ತು ರೇಖಾಂಶ ೭೬° ೨೮' ಪೂರ್ವದಲ್ಲಿದೆ. ಈ ಚಿಕ್ಕ ಗ್ರಾಮದಿಂದ ೧ ಕಿ. ಮೀ. ಈಶಾನ್ಯಕ್ಕೆ ಬೆಟ್ಟದ ಮೇಲೆ ಕೋಟೆ, ದೇವಾಲಯ, ಕೊಳಗಳು, ಶಾಸನಗಳು ಮುಂತಾದವುಗಳಿವೆ.

## ಐತಿಹಾಸಿಕ ಹಿನ್ನೆಲೆ

ಶಿವಪುರವನ್ನು ಅಲ್ಲಿಯ ಶಾಸನಗಳು ಅದೇ ಹೆಸರಿನಿಂದ ಉಲ್ಲೇಖಿಸುತ್ತವೆ.[೧] ಗ್ರಾಮದ ಹತ್ತಿರದ ಬೆಟ್ಟವನ್ನು ಗ್ರಾಮದಿಂದ ಪ್ರತ್ಯೇಕಿಸಿ, ಬೆಟ್ಟದ ಮೇಲಿನ ಸೋಮೇಶ್ವರ ದೇವರನ್ನು ಬೆಟ್ಟದ ಸೋಮೇಶ್ವರ ಮತ್ತು ಬೆಟ್ಟದ ಮೇಲಿನ ಕೋಟೆಯನ್ನು ಸೋಮೇಶ್ವರ ದುರ್ಗವೆಂದು ಉಲ್ಲೇಖಿಸುತ್ತವೆ. ಶಿವಪುರ ಬೆಟ್ಟದ ಇತಿಹಾಸ ಕ್ರಿ.ಶ. ಹನ್ನೊಂದನೇ ಶತಮಾನದಷ್ಟು ಹಿಂದಕ್ಕೆ ಹೋಗುತ್ತದೆ. ಕಲ್ಯಾಣ ಚಾಲುಕ್ಯ ಅರಸ ತ್ರೈಲೋಕ್ಯಮಲ್ಲ (ಒಂದನೇ ಸೋಮೇಶ್ವರ)ನ ಕಾಲದಲ್ಲಿ ಆತನ ಸಾಮಂತ ಕದಂಬ ಕುಲದ ನನ್ನಿಯ ದೇವ ತ್ರೈಲೋಕ್ಯಮಲ್ಲದೇವ ಸಾಮಂತ ಪಂಪರಸನು ಕ್ರಿ.ಶ. ೧೦೫೩ರಲ್ಲಿ ಬೆಟ್ಟದ ಸೋಮೇಶ್ವರ ದೇವರಿಗೆ ಭೂಮಿಯನ್ನು ದಾನವಾಗಿ ಕೊಟ್ಟನೆಂದು ಬೆಟ್ಟದ ಮೇಲಿನ ಸೋಮೇಶ್ವರ ದೇವಾಲಯದ ಮುಂದಿನ ಬಂಡೆಯ ಮೇಲಿನ ಶಾಸನ ತಿಳಿಸುತ್ತದೆ.[೨] ಹನ್ನೊಂದನೇ ಶತಮಾನದಲ್ಲಿ ಇದೊಂದು ಧಾರ್ಮಿಕ ಕೇಂದ್ರವಾಗಿದ್ದುದು ಇದರಿಂದ ಸ್ಪಷ್ಟವಾಗುತ್ತದೆ. ಹದಿನೈದು-ಹದಿನಾರನೇ ಶತಮಾನದಲ್ಲಿ ಬೆಟ್ಟದ ಮೇಲೆ ಕೋಟೆ ಇದ್ದು, ಕೋಟೆಯನ್ನು ಸೋಮೇಶ್ವರ ದೇವರ ದುರ್ಗವೆಂದು ಕರೆಯುತ್ತಿದ್ದರು. ನಗರೂರ ಕುಲಕರ್ಣಿ ಅಮಾಜಿ ಪಂಡಿತನು ಸೋಮೇಶ್ವರ ದೇವರ ದುರ್ಗದಲ್ಲಿ ಒಂದು ಕೊಳವನ್ನು ಮಾಡಿಸಿದನೆಂದು ಕೊಳದ ಪಕ್ಕದ ಶಾಸನ ತಿಳಿಸುತ್ತದೆ.[೩] ಅದೇ ಕಾಲದ ಮತ್ತೊಂದು ಶಾಸನವು ಮಲಿಸೆಟ್ಟಿಯ ಹೆಂಡತಿ ವಿರುಪಕ್ಕ ಬೆಟ್ಟವನ್ನು ಹತ್ತಲು ಮೆಟ್ಟಿಲುಗಳನ್ನು ಮಾಡಿಸಿದಳೆಂದು ತಿಳಿಸುತ್ತದೆ.[೪]

## ಕೋಟೆ

ಬೆಟ್ಟದ ಮೇಲಿನ ಕೋಟೆ ಎರಡು ಸುತ್ತಿನದು (ಚಿತ್ರ ೨೬೦). ಮೊದಲನೆಯ ಸುತ್ತು ಬೆಟ್ಟವನ್ನು ಮೇಲಿನ ಹಂತದಲ್ಲಿ ಸುತ್ತುವರಿದಿದೆ ಮತ್ತು ಎರಡನೆಯ ಸುತ್ತು ಬೆಟ್ಟದ ತುದಿಯಲ್ಲಿದೆ. ಮೊದಲನೆಯ ಸುತ್ತು ದಕ್ಷಿಣ ದಿಕ್ಕಿನಲ್ಲಿ ಮಾತ್ರ ಉಳಿದಿದೆ.




೨೭೦. ಶಿವಪುರ ಕೋಟೆ : ೧. ಹೊರಕೋಟೆಯ ಬಾಗಿಲು, ೨. ಗುಂಡಿನ ಮೇಲಿನ ಕೊತ್ತಳ, ೩. ನೀರಿನಕೊಳ, ೪. ಬಾಗಿಲ ಅವಶೇಷಗಳು, ೫. ಚೌಕಾಕಾರದ ಕಟ್ಟಡ, ೬. ಸೋಮೇಶ್ವರ ದೇವಾಲಯ, ೭. ರಿಂದ ೯. ನೀರಿನ ಕೊಳಗಳು, ೧೦. ಕಡೆಗಾಪಿನ ಬಾಗಿಲು, ೧೧. ನೀರಿನ ತೊಟ್ಟಿ




೨೭೧. ಶಿವಪುರ, ಕಡೆಗಾಪಿನ ಬಾಗಿಲು

ಬೆಟ್ಟದ ಮೇಲೆ ಹತ್ತಲು ದಕ್ಷಿಣ ದಿಕ್ಕಿನಿಂದ ಮೆಟ್ಟಿಲುಗಳಿವೆ. ಈ ಮೆಟ್ಟಿಲುಗಳನ್ನೇ ವಿರುಪಕ್ಕ ಮಾಡಿಸಿರುವುದು. ಮೆಟ್ಟಿಲುಗಳನ್ನು ಬೆಟ್ಟದ ಬಂಡೆಯಲ್ಲಿ ಕೊರೆದು ಮಾಡಿದೆ. ಮೆಟ್ಟಿಲುಗಳನ್ನು ಹತ್ತುತ್ತ ಉತ್ತರ ದಿಕ್ಕಿಗೆ ಹೋದಾಗ ಮೇಲ ಮೊದಲನೇ ಕೋಟೆಯ ಬಾಗಿಲು ಎದುರಾಗುತ್ತದೆ. ಬಾಗಿಲ ಎದುರಿಗೆ ನೆಲದ ಮೇಲೆ ಗಣೇಶನ ಶಿಲ್ಪವನ್ನು ಇಟ್ಟಿದೆ. ದಕ್ಷಿಣಾಭಿಮುಖವಾಗಿರುವ ಈ ಬಾಗಿಲಿಗೆ ಚೌಕಟ್ಟು ಮತ್ತು ಛಾವಣಿಗಳಿಲ್ಲ. ಬಾಗಿಲ ಮುಂದಿನ ಆವರಣವನ್ನು ಗೋಡೆ ಕಟ್ಟಿ ವೈರಿಗೆ ಕಾಣದಂತೆ ಮರೆಮಾಡಿದೆ. ಈ ಗೋಡೆಯ ಮುಂದೆ ಮತ್ತೊಂದು ಗೋಡೆಯನ್ನು ಕಟ್ಟಿದೆ. ಮೊದಲನೇ ಗೋಡೆಯನ್ನು ಬಾಗಿಲಿನ ಪಶ್ಚಿಮ ಮೂಲೆಯಿಂದ ಮುಂದಕ್ಕೆ ಚಾಚಿ ಕಟ್ಟಿದೆ. ಇದು ದಕ್ಷಿಣಕ್ಕೆ ಬಂದು ಪೂರ್ವಕ್ಕೆ ತಿರುಗಿ, ಪುನಃ ಉತ್ತರಕ್ಕೆ ಮುಂದೆ ಹೋಗಿದೆ. ಎರಡನೇ ಗೋಡೆಯನ್ನು ಪೂರ್ವ ಮೂಲೆಯಿಂದ ಮುಂದಕ್ಕೆ ಚಾಚಿ ಕಟ್ಟಿದೆ. ಇದು ಸಹ ದಕ್ಷಿಣಕ್ಕೆ ಬಂದು ಮೊದಲನೇ ಗೋಡೆಯ ಹೊರಭಾಗದಲ್ಲಿ ಪಶ್ಚಿಮಕ್ಕೆ ತಿರುಗಿ ಸ್ವಲ್ಪ ಮುಂದೆ ಹೋಗಿದೆ. ಈ ಎರಡು ಗೋಡೆಗಳಿಂದಾಗಿ ಪ್ರವೇಶವು ಅಂಕುಡೊಂಕಾಗಿದೆ. ಮೊದಲು ಪೂರ್ವಕ್ಕೆ, ನಂತರ ಅನುಕ್ರಮವಾಗಿ ಉತ್ತರ, ಪಶ್ಚಿಮ ಮತ್ತು ಉತ್ತರಕ್ಕೆ ಹೋದಾಗ ಕೋಟೆಯ ಒಳಗಿರುತ್ತೇವೆ. ಬಾಗಿಲಲ್ಲಿ ಪ್ರವೇಶದ ಪಕ್ಕಗಳಲ್ಲಿ ಎರಡು ಕಟ್ಟೆಗಳಿವೆ. ಹೊರಕೋಟೆಯಲ್ಲಿ ಬಾಗಿಲ ಹತ್ತಿರ ಎರಡೂ ಬದಿಗೆ ಒಂದೊಂದು ಚೌಕಾಕಾರದ ಕೊತ್ತಳಗಳಿವೆ. ಇವಲ್ಲದೆ ಇದೇ ಕೋಟೆಯ ಪೂರ್ವ ಭಾಗದಲ್ಲಿ ಒಂದು ಮತ್ತು ಪಶ್ಚಿಮ ಭಾಗದಲ್ಲಿ ಎರಡು ವೃತ್ತಾಕಾರದ ಕೊತ್ತಳಗಳಿವೆ. ಕೋಟೆಯ ಒಳಗೆ ಕೋಟೆಯ ಪಕ್ಕದಲ್ಲಿ ಗುಂಡಿನ ಮೇಲೆ ವೃತ್ತಾಕಾರದ ಕೊತ್ತಳವಿದೆ. ಈ ಕೋಟೆಯನ್ನು ಮೊದಲು ಹದಿನೈದು-ಹದಿನಾರನೇ ಶತಮಾನದಲ್ಲಿ ಕಟ್ಟಿದ್ದು, ನುತರದಲ್ಲಿ ದುರಸ್ತಿ ಮಾಡಿದೆ.

ಬೆಟ್ಟದ ತುದಿಯಲ್ಲಿ, ಅಗಲವಾದ ಸಮತಟ್ಟಾದ ಪ್ರದೇಶವಿದೆ. ಇದರ ಮಧ್ಯದಲ್ಲಿ ಚಿಕ್ಕದಾದ ಎರಡನೇ ಕೋಟೆ ಅಥವಾ ಕಡೆಗಾಪು ಇದೆ (ಚಿತ್ರ ೨೭೨). ಕೋಟೆಯನ್ನು ಮಧ್ಯಮ ಗಾತ್ರದ ಸೈಜುಗಲ್ಲು ಮತ್ತು ಗಾರೆಯಿಂದ ಕಟ್ಟಿ ಹೊರಗೆ ಗಾರೆ ಮಾಡಿದೆ. ಆಯತಾಕಾರದ ಕಡೆಗಾಪಿನ ಪೂರ್ವಕ್ಕೆ ಬಾಗಿಲಿದೆ (ಚಿತ್ರ ೨೭೧). ಬಾಗಿಲ ಮುಂದೆ ಗೋಡೆಯನ್ನು ಕಟ್ಟಿ ಮರೆಮಾಡಿರುವುದರಿಂದ ಉತ್ತರದಿಂದ ಪ್ರವೇಶಿಸಿ ದಕ್ಷಿಣಕ್ಕೆ ಮುಂದೆ ಬಂದು ಪಶ್ಚಿಮಕ್ಕೆ ತಿರುಗಿದಾಗ ಬಾಗಿಲ ಚೌಕಟ್ಟು ಎದುರಾಗುತ್ತದೆ (ಚಿತ್ರ ೨೭೪). ಮೊದಲು ಬಾಗಿಲಿಗೆ ನೇರ ಪ್ರವೇಶವಿದ್ದು, ಬಾಗಿಲ ಮುಂದೆ ಹೊರಭಾಗದಲ್ಲಿ ದಾರಿಯ ಪಕ್ಕದಲ್ಲಿ ಎರಡು ಕಟ್ಟೆಗಳಿದ್ದವು. ನಂತರ ದಾರಿಯನ್ನು ಗೋಡೆಯಿಂದ ಮುಚ್ಚಿ, ಅದೇ ಗೋಡೆಯನ್ನು ಕಟ್ಟೆಗಳ ಮೇಲೂ ಕಟ್ಟಿ. ಬಾಗಿಲಿನ ಎದುರಿನ



೨೭೨. ಶಿವಪುರ, ಕಡೆಗಾಪು



೨೭೩. ಶಿವಪುರ, ಹೊರಕೋಟೆಯ ಬಾಗಿಲಿನ ಹತ್ತಿರದ ಕೊಳ

ಅರ್ಧ್ನಗೋಡೆಯನ್ನಾಗಿ ಮಾಡಿದೆ. ಉತ್ತರ ದಿಕ್ಕಿನಿಂದ ಪ್ರವೇಶಿಸಿದಾಗ ಬಲಕ್ಕೆ ಗೋಡೆಯಲ್ಲಿ ಒಂದು ಗೂಡಿದೆ. ಈ ಗೂಡಿನಲ್ಲಿ ಮಹಿಷಾಸುರಮರ್ದಿನಿಯ ದೊಡ್ಡ ಶಿಲ್ಪವಿದೆ (ಚಿತ್ರ ೨೭೫). ಎಂಟು ಕೈಗಳ ದೇವಿ ಬಲಗಾಲನ್ನು ಪ್ರಾಣಿರೂಪದ ಮಹಿಷನ ಮೇಲಿಟ್ಟು, ಮಾನವರೂಪದ ಮಹಿಷನ ಜುಟ್ಟನ್ನು ಹಿಡಿದು, ತ್ರಿಶೂಲ ಮತ್ತು ಕತ್ತಿಗಳಿಂದ ಮಹಿಷನನ್ನು ಹೊಡೆಯುತ್ತಿದ್ದಾಳೆ. ದೇವಿಯ ಕೈಯಲ್ಲಿ ಕತ್ತಿ, ಗುರಾಣಿ, ತ್ರಿಶೂಲ, ಬಿಲ್ಲು, ಬಾಣ, ಶಂಖ ಮತ್ತು ಬಾಣಗಳಿವೆ. ಪ್ರಾಣಿರೂಪದ ಮಹಿಷನ ಕುತ್ತಿಗೆ ಭಾಗದಿಂದ ಮಾನವರೂಪದ ಮಹಿಷ ಹೊರಬರುತ್ತಿದ್ದಾನೆ. ಈ ಶಿಲ್ಪದ ಹತ್ತಿರವಿರುವ ವೀರಗಲ್ಲಿನಲ್ಲಿಯ ವೀರನು ಕತ್ತಿ, ಗುರಾಣಿಯನ್ನು ಹಿಡಿದು ವೀರಾವೇಶದಿಂದ ಮುಂದೆ ಹೋಗುವ ಭಂಗಿಯಲ್ಲಿದ್ದಾನೆ. ಬಾಗಿಲ ಚೌಕಟ್ಟು ಸರಳವಾಗಿದೆ. ಚೌಕಟ್ಟಿನ ಮೇಲ್ಭಾಗದ ಉದ್ದವಾದ ಕಲ್ಲಿನ ಮೇಲೆ ಅಗಲವಾದ ಗಜಲಕ್ಷ್ಮಿಯ ಶಿಲ್ಪವಿದೆ. ಅದರ ಮೇಲಿನ ಕಲ್ಲಿನಲ್ಲಿ ಕೀರ್ತಿಮುಖವಿದೆ. ಪ್ರವೇಶದ ಬದಿಗಳಲ್ಲಿ ಕಟ್ಟೆಗಳಿವೆ. ಪ್ರತಿ ಕಟ್ಟೆಯ ಮೇಲೆ ಒಂದು ಕಂಬವಿದೆ. ಕಂಬದ ಕೆಳಭಾಗ ಚೌಕಾಕಾರ ಮತ್ತು ಮೇಲ್ಭಾಗ ಅಷ್ಟಭುಜಾಕೃತಿಯಲ್ಲಿದೆ. ಪ್ರತಿ ಕಟ್ಟೆಯ ಮೇಲೆ ಕಂಬದಿಂದಾದ ಎರಡು ಅಂಕಣಗಳಲ್ಲದೆ ಅವುಗಳ ಹಿಂದೆ ಒಂದು ಕೋಣೆಯಿದೆ.

ಕಡೆಗಾಪಿನ ನಾಲ್ಕು ಮೂಲೆಗಳಲ್ಲಿ ನಾಲ್ಕು ವೃತ್ತಾಕಾರದ ಕೊತ್ತಳಗಳಿವೆ. ಗೋಡೆಯ ಮೇಲೆ ಅಗಲವಾದ ದಾರಿ ಮತ್ತು ಕೈಪಿಡಿ ಗೋಡೆ ಇವೆ. ಗೋಡೆಯ ಮೇಲ್ಭಾಗದಲ್ಲಿ ಮತ್ತು ಕೈಪಿಡಿ ಗೋಡೆಯ ತೆನೆಗಳಲ್ಲಿ ಬಂದೂಕು ಕಿಂಡಿಗಳಿವೆ. ಎತ್ತರವಾದ ತೆನೆಗಳನ್ನು ಕಲ್ಲು, ಇಟ್ಟಿಗೆ, ಗಾರೆಯಿಂದ ಕಟ್ಟಿದೆ. ಉತ್ತರ ದಿಕ್ಕಿನ ಗೋಡೆಯ ಬದಿಯಲ್ಲಿಯ ಮೆಟ್ಟಿಲುಗಳನ್ನು ಹತ್ತಿ ಈಶಾನ್ಯ ಮೂಲೆಯ ಕೊತ್ತಳಕ್ಕೆ ಹೋಗಬಹುದು. ಈ ಕೊತ್ತಳದ ಒಳಗೆ ಒಂದು ಕಂಬವಿದ್ದು ಅರ್ಧ ವೃತ್ತಾಕಾರದ ಛಾವಣಿಯನ್ನು ಹೊತ್ತಿದೆ. ಇದರಲ್ಲಿಯ ಚಿಕ್ಕ ಬಾಗಿಲಿನಿಂದ ಕೋಟೆಗೋಡೆಯ ಮೇಲ್ಭಾಗಕ್ಕೆ ಹೋಗಲು ದಾರಿಯಿದೆ. ಕಡೆಗಾಪಿನ ಒಳಗೆ ಕೆಲವು ಕಟ್ಟಡಗಳ ಅವಶೇಷಗಳಿವೆ. ಇಲ್ಲಿರುವ ಒಂದು ನೀರಿನ ತೊಟ್ಟಿ ಸುಸ್ಥಿತಿಯಲ್ಲಿದೆ. ಚೌಕಾಕಾರದ ನೀರಿನ ತೊಟ್ಟಿಯನ್ನು ನೆಲದ ಮೇಲೆ ಸೈಜುಗಲ್ಲಿನಿಂದ ಕಟ್ಟಿ, ಗಾರೆ ಮಾಡಿದೆ. ಕಡೆಗಾಪನ್ನು ಹದಿನೇಳು-ಹದಿನೆಂಟನೇ ಶತಮಾನಗಳಲ್ಲಿ ಕಟ್ಟಿದೆ.

ಬೆಟ್ಟದ ಮೇಲೆ ನಾಲ್ಕು ಕೊಳಗಳಿವೆ. ಹೊರ ಬಾಗಿಲಿನಿಂದ ಕಡೆಗಾಪಿಗೆ ಹೋಗುವಾಗ ಸಿಗುವ ಕೊಳವು ದೊಡ್ಡದಾಗಿದೆ (ಚಿತ್ರ ೨೭೬). ಈ ಕೊಳವನ್ನು ದಕ್ಷಿಣ ಮತ್ತು ಪೂರ್ವ ದಿಕ್ಕಿಗೆ ದೊಡ್ಡ ಗೋಡೆಯನ್ನು ಕಟ್ಟಿ ನಿರ್ಮಿಸಿದೆ. ಕಡೆಗಾಪಿನ ಈಶಾನ್ಯಕ್ಕೆ ಮೂರು ಕೊಳಗಳಿವೆ. ಒಂದರ ಪೂರ್ವಕ್ಕೆ ಗೋಡೆಯನ್ನು ಕಟ್ಟಿ ನಿರ್ಮಿಸಿದೆ.

ಆಳವಾದ ಮತ್ತೊಂದು ಕೊಳದ ಉತ್ತರ ಮತ್ತು ದಕ್ಷಿಣಕ್ಕೆ ಗೋಡೆಗಳನ್ನು ಕಟ್ಟಿದೆ. ಇದರಲ್ಲಿ ಇಳಿಯಲು ದಕ್ಷಿಣಕ್ಕೆ ಮೆಟ್ಟಿಲುಗಳಿವೆ. ಇದರ ಪಕ್ಕದಲ್ಲಿಯ ಬಂಡೆಯ ಮೇಲಿನ ಶಾಸನದಿಂದ ಇದನ್ನು ನಗರೂರ ಕುಲಕರ್ಣಿ ಅಮ್ಮಾಜಿ ಪಂಡಿತ ಮಾಡಿಸಿದನೆಂದು ತಿಳಿಯುತ್ತದೆ. ಮತ್ತೊಂದು ಕೊಳದ ಪೂರ್ವ ಮತ್ತು ಆಗ್ನೇಯಕ್ಕೆ ಅರ್ಧ ವೃತ್ತಾಕಾರದ ಗೋಡೆಯನ್ನು ಕಟ್ಟಿ ನಿರ್ಮಿಸಿದೆ.

ಕಡೆಗಾಪಿನ ಪೂರ್ವಕ್ಕೆ ಸೋಮೇಶ್ವರ ದೇವಾಲಯವಿದೆ. ಗುಹೆಯನ್ನು ಪರಿವರ್ತಿಸಿ ದೇವಾಲಯವನ್ನಾಗಿ ಮಾಡಿದೆ. ಗವಿಯ ಮುಂಭಾಗದಲ್ಲಿ ಮಂಟಪವಿದೆ. ಎರಡು ಬಾಗಿಲುಗಳನ್ನು ದಾಟಿ ಒಳಗೆ ಹೋದಾಗ ಲಿಂಗವಿದೆ. ಗವಿಯ ಬಂಡೆಯ ಮೇಲೆ ಸೈಜುಗಲ್ಲುನ್ನು ಮತ್ತು ಗಾರೆಯಿಂದ ಕಟ್ಟಿದ ದೇವಾಲಯದ ಮೇಲ್ಕಟ್ಟಡವಿದೆ. ಇದು ಮೆಟ್ಟಿಲುಗಳ ಪಿರಾಮಿಡ್ಡು ಆಕಾರದಲ್ಲಿದೆ. ದೇವಾಲಯದ ಬಾಗಿಲ ಬಳಿ ಗಣೇಶನ ಶಿಲ್ಪ ಮತ್ತು ನಾಲ್ಕು ನಾಗರಕಲ್ಲುಗಳಿವೆ. ದೇವಾಲಯದ ಮುಂದಿನ ಒಂದು ಬಂಡೆಯ ಮೇಲೆ ನಂದಿಯ ಸುಂದರವಾದ ಉಬ್ಬು ಶಿಲ್ಪವಿದೆ. ಅದರ ಕೆಳಗೆ 'ಮಾದಪಭಟ್ಟರ ಕುಲಸ್ವಾಮಿ ಸೋಮೇಶ್ವರ' ಎಂದು ಬರೆದ ಶಾಸನವಿದೆ.[೫] ಇದರ ಹತ್ತಿರವಿರುವ ಮತ್ತೊಂದು ಶಾಸನವು ಕ್ರಿ.ಶ. ೧೦೫೩ರಲ್ಲಿ ಬೆಟ್ಟದ ಸೋಮೇಶ್ವರ ದೇವರಿಗೆ ದಾನ ನೀಡಿದ್ದನ್ನು ತಿಳಿಸುತ್ತದೆ. ದೇವಾಲಯದ ಹತ್ತಿರ ಬಾಗಿಲಿನ ಅಧಿಷ್ಠಾನ ಭಾಗದ ಅವಶೇಷಗಳಿವೆ. ಅದರ ಪಕ್ಕದಲ್ಲಿ ಎತ್ತರವಾದ ಗೋಡೆಯ ಚೌಕಾಕಾರದ ಕಟ್ಟಡವಿದೆ. ಇದಕ್ಕೆ ಬಾಗಿಲಿಲ್ಲದಿರುವುದರಿಂದ ಇದು ಕಣಜ ಅಥವಾ ಮದ್ದಿನ ಮನೆಯಾಗಿತ್ತು.

### ಟಿಪ್ಪಣಿಗಳು

೧. ದೇವರಕೊಂಡಾರೆಡ್ಡಿ (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ : ೨ ಕೊಪ್ಪಳ ಜಿಲ್ಲೆ*, ಕೊಪ್ಪಳ ತಾಲೂಕ ೧೫೫-೧೫೬.

೨. *ಅದೇ,* ಕೊಪ್ಪಳ ತಾಲೂಕ ೧೫೯.

೩. Patil Channabasappa S. and Vinoda C. Patil (Eds), 1998, *Inscriptions of Koppal District,* No. 252.

೪. *ಅದೇ,* No. 254; ದೇವರಕೊಂಡಾರೆಡ್ಡಿ (ಸಂ), *ಪೂರ್ವೋಕ್ತ,* ಕೊಪ್ಪಳ ತಾಲೂಕ ೧೫೭.

೫. *ಅದೇ,* No. 251; ದೇವರ ಕೊಂಡಾರೆಡ್ಡಿ (ಸಂ), *ಪೂರ್ವೋಕ್ತ,* ಕೊಪ್ಪಳ ತಾಲೂಕ ೧೫೮.

# ೧೮. ಕನಕಗಿರಿ

ಕನಕಗಿರಿ ಗಂಗಾವತಿ ತಾಲೂಕಿನಲ್ಲಿ ಗಂಗಾವತಿಯಿಂದ ವಾಯವ್ಯಕ್ಕೆ ೧೯ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೫° ೧೯' ಉತ್ತರ ಮತ್ತು ರೇಕಾಂಶ ೭೬° ೨೮' ಪೂರ್ವದಲ್ಲಿದೆ. ಐತಿಹಾಸಿಕ ಮತ್ತು ಧಾರ್ಮಿಕವಾಗಿ ಪ್ರಸಿದ್ಧಿ ಪಡೆದಿರುವ ಈ ಗ್ರಾಮದಲ್ಲಿ ಕೋಟೆ, ದೇವಾಲಯ, ಬಾವಿ ಮುಂತಾದವುಗಳಿವೆ. ಇಲ್ಲಿಯ ದೇವಾಲಯ ಮತ್ತು ಬಾವಿಗಳು ಶಿಲ್ಪ ಕಲೆಗೆ ಪ್ರಸಿದ್ಧವಾಗಿರುವುದರಿಂದ, 'ಕಾಲಿದ್ದವರು ಹಂಪಿಯನ್ನು ನೋಡಬೇಕು ಮತ್ತು ಕಣ್ಣಿದ್ದವರು ಕನಕಗಿರಿಯನ್ನು ನೋಡಬೇಕು' ಎಂಬ ಗಾದೆ ಉತ್ತರ ಕರ್ನಾಟಕದಲ್ಲಿ ಬಳಕೆಯಲ್ಲಿದೆ.

ಮೌರ್ಯ ಚಕ್ರವರ್ತಿ ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ ಉಲ್ಲೇಖಗೊಂಡ ಸುವರ್ಣಗಿರಿಯೇ ಕನಕಗಿರಿ ಎಂದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ.[೧] ಆದರೆ ಕನಕಗಿರಿಯ ಇತಿಹಾಸ ಸ್ಪಷ್ಟವಾಗುವುದು ವಿಜಯನಗರ ಕಾಲದಿಂದ. ವಿಜಯನಗರ ಅರಸರ ಸಾಮಂತರಾಗಿ ಗುಜ್ಜಲ ವಂಶದ ನಾಯಕರು ಕನಕಗಿರಿಯನ್ನು ಆಳುತ್ತಿದ್ದರು. ಈ ವಂಶದ ಮೊದಲ ದೊರೆ ಪರಸಪ್ಪ ನಾಯಕ (ಕ್ರಿ.ಶ.೧೪೩೬-೧೫೧೦). ಇವನು ವಿಜಯನಗರ ಅರಸ ಎರಡನೇ ದೇವರಾಯನ ಆಳ್ವಿಕೆಯಲ್ಲಿ ಕನಕಗಿರಿ ಗ್ರಾಮದ ಮೇಲಾಧಿಕಾರಿಯಾಗಿ ನೇಮಕ ಹೊಂದಿ ತನ್ನ ಆಡಳಿತವನ್ನು ಪ್ರಾರಂಭಿಸಿದನು. ಅವನ ನಂತರ ಉಡಚಿ ನಾಯಕ (ಕ್ರಿ.ಶ. ೧೫೧೦-೧೫೩೩) ಮತ್ತು ಇಮ್ಮಡಿ ಉಡಚಿ ನಾಯಕ (ಕ್ರಿ.ಶ. ೧೫೩೩-೧೫೭೮) ಆಳಿದರು. ಕನಕಗಿರಿಯಲ್ಲಿ ಇಮ್ಮಡಿ ಉಡಚಿ ನಾಯಕನ ಎರಡು ಶಾಸನಗಳಿವೆ.[೨] ಈ ವಂಶದಲ್ಲಿ ಒಟ್ಟು ಹನ್ನೆರಡು ಜನ ನಾಯಕರು ಆಳಿದರು. ಅವರಲ್ಲಿ ಒಂಬತ್ತು ಜನ ಕನಕಗಿರಿಯಿಂದ ಮತ್ತು ಕೊನೆಯ ಮೂವರು ಹತ್ತಿರದ ಹುಲಿಹೈದರ್‌ನಿಂದ ಆಳಿದರು. ಕೊನೆಯ ಪಾಳೆಯಗಾರನಾದ ಹಿರೇ ನಾಯಕನ ಕಾಲದಲ್ಲಿ ಕನಕಗಿರಿ ಪ್ರದೇಶ ಹರಿಹರ-ದಾವಣಗೆರೆಯವರೆಗೆ ಬೆಳೆದಿತ್ತು.[೩] ಮುಂದೆ ಇದು ಹೈದರಾಬಾದಿನ ನಿಜಾಮನ ವಶಕ್ಕೆ ಹೋಯಿತು.

ಕನಕಗಿರಿಯ ಸುತ್ತಲು ಆಯತಾಕಾರದ ಕೋಟೆಯಿದೆ.ಇದು ಪಶ್ಚಿಮ ಮತ್ತು ದಕ್ಷಿಣ ಭಾಗದಲ್ಲಿ ಹೆಚ್ಚಿಗೆ ಮತ್ತು ಪೂರ್ವ ಭಾಗದಲ್ಲಿ ಭಾಗಶಃ ಶಿಥಿಲವಾಗಿದೆ. ಕೋಟೆಯ ಹೊರಗೆ ಕಂದಕವಿದೆ. ಕೋಟೆಯಲ್ಲಿ ಪೂರ್ವ ದಿಕ್ಕಿಗೆ ಎರಡು, ಪಶ್ಚಿಮ ಮತ್ತು ದಕ್ಷಿಣ ದಿಕ್ಕಿಗೆ ಒಂದೊಂದು ಬಾಗಿಲುಗಳು ಮತ್ತು ಅನೇಕ ವೃತ್ತಾಕಾರದ ಕೊತ್ತಳಗಳು ಇವೆ (ಚಿತ್ರ ೨೭೬). ಕೋಟೆಯನ್ನು ಚೌಕಾಕಾರದ ದಪ್ಪ ಕಲ್ಲುಗಳಿಂದ ಕಟ್ಟಿದೆ (ಚಿತ್ರ೨೭೮).

ಪೂರ್ವ ದಿಕ್ಕಿಗಿರುವ ಪ್ರಮುಖ ಬಾಗಿಲನ್ನು ದೇವರ ಅಗಸೆ ಎಂದು ಕರೆಯುತ್ತಾರೆ. ಎರಡು ವೃತ್ತಾಕಾರದ




೨೭೬. ಕನಕಗಿರಿ ಕೋಟೆ : ೧. ದೇವರ ಅಗಸಿ, ೨. ಕನಕಾಚಲ ದೇವಾಲಯ, ೩. ರಾಮಲಿಂಗ ಕೃಷ್ಣ ದೇವಾಲಯ, ೪. ನೀಲಕಂಠೇಶ್ವರ ದೇವಾಲಯ, ೫. ನಗರೇಶ್ವರ ದೇವಾಲಯ, ೬. ಪಂಪಾಪತಿ ದೇವಾಲಯ, ೭. ಜಾಮಿ ಮಸೀದಿ, ೮. ಮಲ್ಲಿಕಾರ್ಜುನ ದೇವಾಲಯ, ೯. ಬಸವಣ್ಣನ ದೇವಾಲಯ, ೧೦. ಯಲ್ಲಮ್ಮನ ಗುಡಿ, ೧೧. ಕೊಪ್ಪಳ ಅಗಸಿ, ೧೨. ಸಂಜೀವ ಮೂರ್ತಿ ದೇವಾಲಯ, ೧೩. ಗಜಲಕ್ಷ್ಮಿ ದೇವಾಲಯ, ೧೪. ವೀರಭದ್ರ ದೇವಾಲಯ, ೧೫. ಬಸವಣ್ಣನ ದೇವಾಲಯ, ೧೬. ಚಾಮುಂಡಿ ದೇವಾಲಯ, ೧೭. ಪ್ರತಾಪ ರಾಯನ ದೇವಾಲಯ, ೧೮. ಚಿದಾನಂದಗುಡಿ, ೧೯. ಆನೆಗೊಂದಿ ಅಗಸಿ, ೨೦. ಬಾವಿ



೨೭೭. ಕನಕಗಿರಿ, ದೇವರ ಅಗಸಿ



೨೭೮. ಕನಕಗಿರಿ, ಉತ್ತರ ದಿಕ್ಕಿನ ಕೋಟೆ



೨೨೯. ಕನಕಗಿರಿ, ಕನಕಾಚಲ ದೇವಾಲಯ



೨೩೦. ಕನಕಗಿರಿ, ಕನಕಾಚಲ ದೇವಾಲಯದ ಸಭಾಮಂಟಪ

ಕೊತ್ತಳಗಗಳ ಮಧ್ಯದಲ್ಲಿರುವ ಬಾಗಿಲಿಗೆ ಸರಳವಾದ ಚೌಕಟ್ಟಿದೆ. ಪಕ್ಕದಲ್ಲಿಯ ಕೊತ್ತಳಗಳ ಕೆಳಭಾಗವನ್ನು ದಪ್ಪ ಕಲ್ಲುಗಳಿಂದ ಮತ್ತು ಮೇಲಿನ ಭಾಗವನ್ನು ಚಿಕ್ಕ ಕಲ್ಲುಗಳಿಂದ ಕಟ್ಟಿದೆ. ಮೇಲ್ಭಾಗದಲ್ಲಿ ಉದ್ದವಾದ ಬಂದೂಕು ಕಿಂಡಿಗಳಿವೆ. ಪ್ರವೇಶನ ಪಕ್ಕದಲ್ಲಿ ಕಟ್ಟೆಗಳಿವೆ. ಪೂರ್ವ ದಿಕ್ಕಿನಲ್ಲಿರುವ ಮತ್ತೊಂದು ಬಾಗಿಲನ್ನು ಆನೆಗೊಂದಿ ಅಗಸೆ ಎಂದು ಕರೆಯುತ್ತಾರೆ. ಎರಡು ವೃತ್ತಾಕಾರದ ಕೊತ್ತಳಗಳ ಮಧ್ಯದಲ್ಲಿರುವ ಈ ಬಾಗಿಲು ಶಿಥಿಲವಾಗಿದೆ. ಬಾಗಿಲ ಮುಂಭಾಗದಲ್ಲಿ ಬಲಗಡೆ ಆಂಜನೇಯನ ದೇವಾಲಯವಿದೆ. ಪ್ರವೇಶದ ಪಕ್ಕದಲ್ಲಿ ಕಟ್ಟೆಗಳಿವೆ. ಎಡಭಾಗದ ಕಟ್ಟೆಯ ಮೇಲೆ ಮನುಷ್ಯನ ಶಿಲ್ಪ, ನಾಗರ ಕಲ್ಲು ಮತ್ತು ನಂದಿ ಶಿಲ್ಪಗಳಿವೆ. ಪಶ್ಚಿಮ ದಿಕ್ಕಿನಲ್ಲಿರುವ ಬಾಗಿಲನ್ನು ಕೊಪ್ಪಳ ಅಗಸೆ ಎಂದು ಕರೆಯುತ್ತಾರೆ. ಈ ಬಾಗಿಲ ಮುಂದೆ ಆಂಜನೇಯನ ದೇವಾಲಯವಿದೆ.

ಈಗಿನ ಊರು ಕೋಟೆಯ ಒಳಗಿದೆ. ಕನಕಾಚಲ ದೇವಾಲಯವು ವಿಜಯನಗರ ಶೈಲಿಯಲ್ಲಿದ್ದು ಶಿಲ್ಪ ಕಲೆಗೆ ಪ್ರಸಿದ್ಧವಾಗಿದೆ. ಅದೇ ರೀತಿ ಊರ ಹೊರಗೆ ಉತ್ತರಕ್ಕೆ ಇರುವ ವೆಂಕಟಪತಿ ಬಾವಿ ಸಹ ಸುಂದರವಾಗಿದ್ದು, ಅನೇಕ ಶಿಲ್ಪಗಳನ್ನು ಒಳಗೊಂಡಿದೆ. ಊರೊಳಗೆ ಇನ್ನೂ ಅನೇಕ ದೇವಾಲಯಗಳು, ಮಸೀದಿ ಮತ್ತು ಬಾವಿಗಳು ಇವೆ. ಇಲ್ಲಿಯ ಪ್ರಮುಖ ದೇವಾಲಯಗಳು ಪೂರ್ವ-ಪಶ್ಚಿಮಕ್ಕಿರುವ ಉದ್ದವಾದ ಬೀದಿಯ ಎರಡು ಬದಿಗಳಲ್ಲಿವೆ. ಪೂರ್ವ ದಿಕ್ಕಿನ ಮುಖ್ಯ ಬಾಗಿಲಿನಿಂದ ಒಳಗೆ ಹೋದಾಗ ಬೀದಿಯ ಉತ್ತರಕ್ಕೆ ಕನಕಾಚಲ ದೇವಾಲಯವಿದೆ. ಇದರ ಮುಂದೆ ಒಂದು ತೋಪು ಬಿದ್ದಿದೆ. ದೇವಾಲಯದ ಪಶ್ಚಿಮಕ್ಕೆ ರಾಮಲಿಂಗೇಶ್ವರ ಮತ್ತು ಕೃಷ್ಣ ದೇವಾಲಯಗಳಿವೆ. ದಕ್ಷಿಣಕ್ಕೆ ಪ್ರತಾಪರಾಯ ಮತ್ತು ಚಿದಾನಂದ ದೇವಾಲಯಗಳಿವೆ. ಮುಂದೆ ಹೋದಂತೆ ಉತ್ತರಕ್ಕೆ ನೀಲಕಂಠೇಶ್ವರ ಮತ್ತು ನಗರೇಶ್ವರ ದೇವಾಲಯಗಳಿವೆ. ಇವುಗಳ ಎದುರಿಗೆ ದಕ್ಷಿಣಕ್ಕೆ ಚಾಮುಂಡಿ ದೇವಾಲಯವಿದೆ. ಮುಂದೆ ಹೋದಂತೆ ಉತ್ತರಕ್ಕೆ ಪಾಪಾವತಿ ದೇವಾಲಯ ಮತ್ತು ದಕ್ಷಿಣಕ್ಕೆ ಬಸವಣ್ಣ, ವೀರಭದ್ರ ಮತ್ತು ಗಜಲಕ್ಷ್ಮಿ ದೇವಾಲಯಗಳಿವೆ. ಇನ್ನೂ ಮುಂದೆ ಹೋದಾಗ ಉತ್ತರಕ್ಕೆ ಮಲ್ಲಿಕಾರ್ಜುನ, ಬಸವಣ್ಣ ಮತ್ತು ಎಲ್ಲಮ್ಮ ದೇವಾಲಯಗಳು ಮತ್ತು ದಕ್ಷಿಣಕ್ಕೆ ಸಂಜೀವಮೂರ್ತಿ ದೇವಾಲಯಗಳಿವೆ. ಉತ್ತರ ದಿಕ್ಕಿನ ಗೋಡೆಯ ಹತ್ತಿರ ಜಾಮೀ ಮಸೀದಿಯಿದೆ. ಈ ಎಲ್ಲ ದೇವಾಲಯಗಳು ಮತ್ತು ಕೋಟೆ ಹದಿನಾರು-ಹದಿನೇಳನೇ ಶತಮಾನಗಳಲ್ಲಿ ನಿರ್ಮಾಣಗೊಂಡಿವೆ.

## ಟಿಪ್ಪಣಿಗಳು

೧. Desai P. B., Shrinivas H. Ritti and B.R. Gopal,1981, *A History of Karnataka*, p. 47.

೨. *ARIE*, 1972-73, Nos. B 133, 135.

೩. ರಾಜಪುರೋಹಿತ ಜಯತೀರ್ಥ, ೧೯೭೭, ಕನಕಗಿರಿ ಪು. ೭೧.

# ೧೯. ಎಮ್ಮಿಗುಡ್ಡ

ಎಮ್ಮಿಗುಡ್ಡ ಗಂಗಾವತಿ ತಾಲೂಕಿನಲ್ಲಿ ಗಂಗಾವತಿಯಿಂದ ಪಶ್ಚಿಮಕ್ಕೆ ೧೫ ಕಿ.ಮೀ. ದೂರದಲ್ಲಿ, ಅಕ್ಷಾಂಶ ೧೫° ೨೬' ಉತ್ತರ ಮತ್ತು ರೇಖಾಂಶ ೭೬° ೨೬' ಪೂರ್ವದಲ್ಲಿರುವ ಜನವಾಸವಿಲ್ಲದ ಚಿಕ್ಕ ಗ್ರಾಮ. ಇಲ್ಲಿ ಕೋಟೆ, ಅರಮನೆ ಅವಶೇಷಗಳು, ದೇವಾಲಯ ಮುಂತಾದವುಗಳಿವೆ.

ಕೋಟೆ ಕಟ್ಟಲು ಆಯ್ಕೆಮಾಡಿದ ಸ್ಥಳ ಉತ್ತರ, ದಕ್ಷಿಣ ಮತ್ತು ಪೂರ್ವ ದಿಕ್ಕುಗಳಲ್ಲಿ ಬೆಟ್ಟದಿಂದ ಸುತ್ತುವರಿದಿರುವುದರಿಂದ ಪೂರ್ವ ದಿಕ್ಕಿನಲ್ಲಿ ಮಾತ್ರ ಕೋಟೆಗೋಡೆಯನ್ನು ಕಟ್ಟಿದೆ. ಕೋಟೆಯ ಒಳಗೆ ದುರ್ಗಾ, ಆಂಜನೇಯ, ಕನಕಾಚಲ ಮತ್ತು ಈಶ್ವರ ದೇವಾಲಯಗಳು ಮತ್ತು ಅರಮನೆ ಅವಶೇಷಗಳು ನೆಲಮಟ್ಟದಲ್ಲಿವೆ. ಪಶ್ಚಿಮ ದಿಕ್ಕಿನ ಬೆಟ್ಟದ ಮೇಲೆ ಒಂದು ಬಾಗಿಲು, ದೇವಾಲಯ ಮತ್ತು ಉತ್ತರ ದಿಕ್ಕಿನ ಬೆಟ್ಟದ ಮೇಲೆ ಎರಡು ವೃತ್ತಾಕಾರದ ಕೊತ್ತಳಗಳು ಇವೆ (ಚಿತ್ರ ೨೮೧).

ಕೋಟೆಯನ್ನು ಚೌಕಾಕಾರದ ದಪ್ಪ ಕಲ್ಲುಗಳಿಂದ ಕಟ್ಟಿದೆ (ಚಿತ್ರ ೨೮೩). ಕೋಟೆಯಲ್ಲಿ ಪೂರ್ವಾಭಿಮುಖವಾಗಿರುವ ಬಾಗಿಲು ಮತ್ತು ಆರು ವೃತ್ತಾಕಾರದ ಕೊತ್ತಳಗಳಿವೆ. ಎರಡು ವೃತ್ತಾಕಾರದ ಕೊತ್ತಳಗಳ ಮಧ್ಯದಲ್ಲಿರುವ ಬಾಗಿಲಿಗೆ ಸರಳವಾದ ಚೌಕಟ್ಟಿದೆ. ಬಾಗಿಲ ಚೌಕಟ್ಟಿನ ಸುತ್ತಲಿರುವ ಗೋಡೆಯ ರಚನೆ ಅದೇ ಗೋಡೆಯ ಉಳಿದ ಭಾಗದ ರಚನೆಗಿಂತ ಭಿನ್ನವಾಗಿದೆ. ಬಾಗಿಲ ಸುತ್ತ ಚಿಕ್ಕ ಮತ್ತು ಉದ್ದವಾದ ಕಲ್ಲುಗಳನ್ನು ಬಳಸಿದೆ. ಆದುದರಿಂದ ಇದು ನಂತರ ಕಟ್ಟಿದ್ದಾಗಿದೆ. ಮೇಲಿನ ಕೈಪಿಡಿಗೋಡೆಯಲ್ಲಿ ಉದ್ದವಾದ ಬಂದೂಕು ಕಿಂಡಿಗಳಿವೆ (ಚಿತ್ರ ೨೮೪). ಬಾಗಿಲ ಪ್ರವೇಶದ ಪಕ್ಕದಲ್ಲಿ ಕಟ್ಟೆಗಳಿವೆ. ಪ್ರತಿ ಕಟ್ಟೆಯ ಮೇಲೆ ಎರಡು ಕಂಬಗಳ ಮೂರು ಅಂಕಣಗಳಿವೆ (ಚಿತ್ರ ೨೮೨). ಕಟ್ಟೆಗಳ ಮೇಲೆ ಹತ್ತಲು ಮೆಟ್ಟಿಲುಗಳಿವೆ.

ಬಾಗಿಲನ್ನು ದಾಟಿ ಕೋಟೆಯ ಒಳಗೆ ಹೋದಾಗ, ಪೂರ್ವ ಗೋಡೆಯ ಪಕ್ಕದಲ್ಲಿ, ಉತ್ತರಕ್ಕೆ ಆಂಜನೇಯನ ಮತ್ತು ದಕ್ಷಿಣಕ್ಕೆ ದುರ್ಗಾ ದೇವಾಲಯಗಳಿವೆ. ಇಲ್ಲಿಂದ ಪಶ್ಚಿಮಕ್ಕೆ ಹೋದಾಗ ಸ್ವಲ್ಪ ದೂರದಲ್ಲಿ ಅರಳಿ ಮರದ ಕೆಳಗೆ ಆಂಜನೇಯನ ದೊಡ್ಡ ಶಿಲ್ಪವಿದೆ. ಕಾಲುಗಳನ್ನು ಅಗಲಮಾಡಿ ಮುಂದಕ್ಕೆ ಮುಖ ಮಾಡಿ ನೆಟ್ಟಗೆ ವಿಶಿಷ್ಟ ಭಂಗಿಯಲ್ಲಿ ನಿಂತಿರುವ ಆಂಜನೇಯ ಬಲಗೈಯನ್ನು ಮೇಲೆತ್ತಿ ಎಡಗೈಯಲ್ಲಿ ಹೂವನ್ನು ಹಿಡಿದಿದ್ದಾನೆ. ಅವನ ಕಾಲುಗಳ ಕೆಳಗೆ ಕತ್ತಿ, ಗುರಾಣಿ ಹಿಡಿದ ವ್ಯಕ್ತಿ ನೆಲದ ಮೇಲೆ ಬಿದ್ದಿದ್ದಾನೆ. ಮರದ ಕಟ್ಟೆಯ ಮೇಲೆ ನಾಗರಕಲ್ಲುಗಳಿವೆ. ಇಲ್ಲಿಂದ ಇನ್ನೂ ಸ್ವಲ್ಪ ಮುಂದೆ ಹೋದಾಗ ಬೆಟ್ಟದ ಪಕ್ಕದಲ್ಲಿ ಅರಮನೆ ಅವಶೇಷಗಳಿವೆ. ಇವುಗಳಿಗೆ ತಾಗಿದಂತೆ ಸುತ್ತಲೂ ಗೋಡೆಯಿದೆ. ಪೂರ್ವಾಭಿಮುಖವಾಗಿರುವ ಈ ಕಟ್ಟಡದ

೨೮೧. ಎಮ್ಮಿಗುಡ್ಡ ಕೋಟೆ: ೧. ಬಾಗಿಲು, ೨. ದುರ್ಗಾ ದೇವಾಲಯ, ೩. ಹನುಮಂತನ ದೇವಾಲಯ, ೪. ಹನುಮನ ಶಿಲ್ಪ, ೫. ಕನಕಾಚಲ ದೇವಾಲಯ, ೬. ಈಶ್ವರ ದೇವಾಲಯ, ೭. ಬಾಗಿಲು, ೮. ಅರಮನೆ ೯ ಹನುಮಂತನ ಗುಡಿ






0 1 2 3 4 5 ಮೀ



೨೮೩. ಎಮ್ಮಿಗುಡ್ಡ, ಕೋಟೆಯ ಪೂರ್ವಭಾಗ



೨೮೪. ಎಮ್ಮಿಗುಡ್ಡ, ಬಾಗಿಲು



೨೮೫. ಎಮ್ಮಿಗುಡ್ಡ, ಅರಮನೆಯ ಮುಂಭಾಗ

೨೮೬. ಎಮ್ಮಿಗುಡ್ಡ, ಕನಕಾಚಲ ದೇವಾಲಯದ ಮೇಲ್ಕಟ್ಟಡ

ಮುಂಭಾಗದ ಎರಡು ಮೂಲೆಗಳಲ್ಲಿ ವೃತ್ತಾಕಾರದ ಕೊತ್ತಳಗಳಿವೆ. ಈ ಕೊತ್ತಳಗಳನ್ನು ಮುಂದಿನ ಕೋಟೆಯಲ್ಲಿಯ ಕೊತ್ತಳಗಳಂತೆ ದಪ್ಪ ಕಲ್ಲುಗಳಿಂದ ಕಟ್ಟಿದೆ. ಎರಡು ಕೊತ್ತಳಗಳ ಮಧ್ಯದಲ್ಲಿಯ ಗೋಡೆಯ ಮುಂದೆ ಅಧಿಷ್ಠಾನದಂತಹ ವೇದಿಕೆ ಮೇಲೆ ಹತ್ತು ಅಂಕಣಗಳ ಕೈಸಾಲೆಯಿದೆ. ದಕ್ಷಿಣಕ್ಕಿರುವ ಆರು ಮತ್ತು ಉತ್ತರಕ್ಕಿರುವ ಮೂರು ಅಂಕಣಗಳ ಮುಂಭಾಗದಲ್ಲಿ ಕಮಾನುಗಳಿವೆ. ಏಳನೇ ಆಯತಾಕಾರದ ಅಂಕಣದಲ್ಲಿ ಒಳಭಾಗಕ್ಕೆ ಹೋಗಲು ಬಾಗಿಲಿದೆ (ಚಿತ್ರ ೨೮೫). ಅಂಕಣಗಳ ಮಧ್ಯದಲ್ಲಿ ಗೋಡೆಗಳಿವೆ. ಏಳನೇ ಅಂಕಣದಲ್ಲಿಯ ಬಾಗಿಲನ್ನು ಗೋಡೆ ಕಟ್ಟಿ ಮುಚ್ಚಲಾಗಿದೆ. ಈಗಿನ ಪ್ರವೇಶ ಉತ್ತರ ದಿಕ್ಕಿಗಿದೆ. ಕೈಸಾಲೆಯ ಹಿಂದಿನ ಗೋಡೆ ಬಹಳ ಎತ್ತರವಿದೆ. ಗಾರೆ ಮಾಡಿದ ಈ ಗೋಡೆಯ ಕೈಪಿಡಿಗೋಡೆಯಲ್ಲಿ ತೆನೆಗಳಿವೆ. ಅರಮನೆಯು ಬಹಳಷ್ಟು ಶಿಥಿಲವಾಗಿರುವುದರಿಂದ ವಿವರಗಳು ತಿಳಿಯುವುದಿಲ್ಲ.

ಅರಮನೆಯ ಉತ್ತರಕ್ಕೆ ಸುಸ್ಥಿಯಲ್ಲಿರುವ ಕನಕರಾಯನ ದೇವಾಲಯವಿದೆ. ಪೂರ್ವಾಭಿಮುಖವಾಗಿರುವ ದೇವಾಲಯ ಎತ್ತರದಲ್ಲಿರುವುದರಿಂದ ಮುಂದೆ ಅಗಲವಾದ ಮೆಟ್ಟಿಲುಗಳಿವೆ. ದೇವಾಲಯ ಪ್ರಾಕಾರದಲ್ಲಿ ವಿಜಯನಗರ ಕಾಲದ ಮಹಾದ್ವಾರವಿದೆ. ದೇವಾಲಯದಲ್ಲಿ ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪ ಇವೆ. ಮುಂಭಾಗದಲ್ಲಿ ತೆರೆದಿರುವ ಸಭಾಮಂಟಪದ ಮುಂಭಾಗದಲ್ಲಿ ನಂತರದಲ್ಲಿ ಅಗಲವಾದ ಮುಖ ಮಂಟಪವನ್ನು ಕಟ್ಟಿದೆ. ಗೋಡೆಯ ಮಧ್ಯಭಾಗದಲ್ಲಿ ಉಬ್ಬಿದ ಅಡ್ಡ ಪಟ್ಟಿಯಿದೆ. ಗರ್ಭಗೃಹದ ಮೇಲಿನ ಮೇಲ್ಕಟ್ಟಡ ಕಳಿಂಗ ಅಥವಾ ಕದಂಬ ನಾಗರ ಶೈಲಿಯಲ್ಲಿದೆ. ಗೋಡೆಯ ಕಪೋತದ ಮೇಲೆ ಒಂಬತ್ತು ಹಂತಗಳ ಮೆಟ್ಟಿಲುಗಳ ಆಕಾರದ ಕಪೋತ ದಿಂಡುಗಳಿವೆ. ಇವುಗಳ ಮಧ್ಯದಲ್ಲಿ ಕಂಠ ದಿಂಡುಗಳಿಲ್ಲ. ಪ್ರತಿ ಪರ್ಯಾಯ ಕಪೋತ ದಿಂಡಿನ ಮಧ್ಯದಲ್ಲಿ ಎತ್ತರವಾದ ಫಲಕವಿದೆ. ಇದರಲ್ಲಿ ಕೂಡು-ಕೀರ್ತಿ ಮುಖಗಳಿವೆ. ಕೂಡುಗಳಲ್ಲಿ ಹೂಗಳಿವೆ (ಚಿತ್ರ ೨೮೬). ಇಂತಹ ಮೇಲ್ಕಟ್ಟಡವನ್ನು ಕುಮ್ಮಟದುರ್ಗದ ಈಶ್ವರ ದೇವಾಲಯದಲ್ಲಿ ಮತ್ತು ಹಂಪಿಯ ಹೇಮಕೂಟದ ಮೇಲೆ ಕಂಪಿಲರಾಯರು ಕಟ್ಟಿಸಿದ ತ್ರಿಕೂಟ ದೇವಾಲಯಗಳಲ್ಲಿ ನೋಡಬಹುದು. ಕುಮ್ಮಟದುರ್ಗಕ್ಕೆ ಬಹಳ ಹತ್ತಿರವಿರುವ ಈ ದೇವಾಲಯವು ಸಹ ಕಂಪಿಲರಾಯನ ಕಾಲದ ನಿರ್ಮಾಣವಾಗಿದೆ.

ಕನಕರಾಯನ ದೇವಾಲಯದ ವಾಯವ್ಯಕ್ಕೆ ಪೂರ್ವಾಭಿಮುಖವಾದ ಈಶ್ವರ ದೇವಾಲಯವಿದೆ. ಇದರಲ್ಲಿ ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳಿವೆ. ಗರ್ಭಗೃಹದ ಮೇಲಿನ ಮೇಲ್ಕಟ್ಟಡ ಇಟ್ಟಿಗೆ ಮತ್ತು ಗಾರೆಯದು. ಇದು ವಿಜಯನಗರ ಕಾಲದ ದೇವಾಲಯ.

ದಪ್ಪ ಚೌಕಾಕಾರದ ಕಲ್ಲುಗಳಿಂದ ಕಟ್ಟಿದ ಈ ಕೋಟೆಯ ಕಾಲ ಹದಿನೈದು- ಹದಿನಾರನೇ ಶತಮಾನಗಳು.

## ೨೦. ಆನೆಗೊಂದಿ

ಅಕ್ಷಾಂಶ ೧೫° ೨೦' ಉತ್ತರ ಮತ್ತು ರೇಖಾಂಶ ೭೬° ೩೩' ಪೂರ್ವದಲ್ಲಿರುವ ಆನೆಗೊಂದಿ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನಲ್ಲಿ, ಗಂಗಾವತಿಯಿಂದ ಹನ್ನೊಂದು ಕಿ. ಮೀ. ನೈರುತ್ಯಕ್ಕಿದೆ. ಹಂಪಿಯ ಹತ್ತಿರ ತುಂಗಭದ್ರ ನದಿಯ ಉತ್ತರ ದಂಡೆಯ ಮೇಲಿರುವ ಈ ನಗರ ಪೌರಾಣಿಕ, ಐತಿಹಾಸಿಕ ಮತ್ತು ಧಾರ್ಮಿಕ ಮಹತ್ವವನ್ನು ಪಡೆದಿದೆ. ಇಲ್ಲಿ ಕೋಟೆ, ದೇವಾಲಯಗಳು, ಯತಿಗಳ ಸಮಾಧಿಗಳು ಮುಂತಾದವುಗಳಿವೆ.

### ಐತಿಹಾಸಿಕ ಹಿನ್ನೆಲೆ

ಪಂಪಾದೇವಿ ಶಿವನನ್ನು ವರಿಸಲು ತಪಸ್ಸು ಮಾಡಿದ ಸ್ಥಳ ಆನೆಗೊಂದಿಯ ಹತ್ತಿರವ ಪಂಪಾಸರಸ್ಸು ಎಂದು ಗುರುತಿಸಲಾಗುತ್ತದೆ. ಪಂಪಾದೇವಿಯು ವಿರೂಪಾಕ್ಷ (ಶಿವ)ನನ್ನು ವರಿಸಿ ಹಂಪೆಯಲ್ಲಿ ನೆಲೆಸಿದ್ದರಿಂದ ಹಂಪೆಯು ಪಂಪಾತೀರ್ಥ ಅಥವಾ ಪಂಪಾಕ್ಷೇತ್ರವೆಂದು ಪ್ರಸಿದ್ಧವಾಯಿತು. ಆನೆಗೊಂದಿಯನ್ನು ರಾಮಾಯಣ ಕಾಲದ ಕಿಷ್ಕಿಂಧವೆಂದು ಗುರುತಿಸಲಾಗುತ್ತದೆ. ಹನ್ನೊಂದರಿಂದ ಹದಿನಾರನೇ ಶತಮಾನದವರೆಗಿನ ಶಾಸನಗಳು ಸಹ ಇದನ್ನು ಕಿಷ್ಕಿಂಧವೆಂದೇ ಉಲ್ಲೇಖಿಸುತ್ತವೆ.[1] ಸುಗ್ರೀವನಿಂದ ಪೂಜಿತನಾದ ಸೀತಾರಾಮನನ್ನು ಕಂಡು ಗೌರವವನ್ನು ಸಲ್ಲಿಸಲು ಕಿಷ್ಕಿಂಧೆಗೆ ಬಂದ ಕೆಲವು ಅರಸರು ತುಂಗಭದ್ರದಿಂದ ಶುದ್ಧೀಕರಣಗೊಂಡ ಹೇಮಕೂಟದ ಹತ್ತಿರ ನೆಲೆಸಿದರೆಂದು ಒಂದು ಶಾಸನವು ತಿಳಿಸುತ್ತದೆ. ರಾಮಾಯಣ ಕಾಲದ ಘಟನೆಗಳನ್ನು ಕ್ರಿ.ಶ. ೧೫೦೫ರ ಈ ಶಾಸನದಲ್ಲಿ ಸ್ಮರಿಸಲಾಗಿದೆ.[2]

ಕಲ್ಯಾಣ ಚಾಲುಕ್ಯರ ಮತ್ತು ಹೊಯ್ಸಳರ ಕಾಲದಲ್ಲಿ ಇದೊಂದು ಪ್ರಮುಖ ನಗರವಾಗಿತ್ತು. ಈ ಕಾಲದ ದೇವಾಲಯಗಳ ಅವಶೇಷಗಳನ್ನು ಊರಲ್ಲಿಯ ಗಣೇಶನ ದೇವಾಲಯ ಮತ್ತು ಹುಚ್ಚಪ್ಪಯ್ಯನ ಮಠದಲ್ಲಿ ಈಗಲೂ ನೋಡಬಹುದು. ಹದಿಮೂರನೇ ಶತಮಾನದ ಕೊನೆಯ ಪಾದ ಮತ್ತು ಹದಿನಾಲ್ಕನೇ ಶತಮಾನದ ಮೊದಲನೇ ಪಾದದಲ್ಲಿ ಕಂಪಿಲರಾಯನು ಈ ಭಾಗವನ್ನು ಆಳುತ್ತಿದ್ದನು. ಕೆಲವು ವಿದ್ವಾಂಸರ ಪ್ರಕಾರ ಕಂಪ್ಲಿ ಈತನ ರಾಜಧಾನಿಯಾಗಿತ್ತು. ದಿಲ್ಲಿ ಸುಲ್ತಾನನ ಸೈನ್ಯ ಕಂಪ್ಲಿಯನ್ನು ಮುತ್ತಿದಾಗ ಈತನು ಆನೆಗೊಂದಿ ಕೋಟೆಯಲ್ಲಿ ಆಶ್ರಯ ಪಡೆದನೆಂದು ರಾಬರ್ಟ್ ಸಿವೆಲ್ ಹೇಳುತ್ತಾನೆ.[3] ದಿಲ್ಲಿ ಸುಲ್ತಾನ ಮಹಮ್ಮದ್ ಬಿನ್ ತೊಘಲಕ್‌ನ ಆದೇಶದ ಮೇರೆಗೆ ಮಲಿಕ್‌ಜಾದ ಕಂಪ್ಲಿಯನ್ನು ಗೆದ್ದಾಗ ಕಂಪಿಲರಾಯನು ಹೊಸದುರ್ಗದಲ್ಲಿ ಆಶ್ರಯಪಡೆದನೆಂದು ಹೇಳಿ, ಹೊಸದುರ್ಗವೇ ಆನೆಗೊಂದಿಯೆಂದು ಪ್ರಶ್ನಾರ್ಥಕ ಚಿಹ್ನೆಯೊಂದಿಗೆ

ಗುರುತಿಸುತ್ತಾರೆ.[೪] ಆನೆಗೊಂದಿಯ ಬಗ್ಗೆ ವಿಶೇಷ ಅಧ್ಯಯನ ನಡೆಸಿದ ಸುಗಂಧಾ ಮತ್ತು ಇತರ ವಿದ್ವಾಂಸರು ಈ ಹೊಸದುರ್ಗವೇ ಆನೆಗೊಂದಿಯೆಂದು ಹೇಳುತ್ತಾರೆ.[೫] ಆದರೆ ಈ ಹೊಸದುರ್ಗ ಅಥವಾ ಹೊಸಮಲೆದುರ್ಗವು ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ರಾಮಗಡವೆಂದು ದೃಢಪಟ್ಟಿದೆ.[೬] ಕಂಪಿಲರಾಯನ ಕಾಲದಲ್ಲಿ ಆನೆಗೊಂದಿ ಮಹತ್ವದ ಸ್ಥಾನ ಪಡೆದಿತ್ತು. ಹೊಯ್ಸಳ ಬಲ್ಲಾಳನು ಕಂಪಿಲನ ಮೇಲೆ ದಂಡೆತ್ತಿ ಬಂದಾಗ ಕಂಪಿಲನ ಸೈನ್ಯವು ಆನೆಗೊಂದಿಯಲ್ಲಿ ಒಟ್ಟಿಗೆ ಸೇರಿ ಅಲ್ಲಿಂದ ಮುಂದೆ ಸಾಗಿತೆಂಬುದು ಕುಮಾರರಾಮ ಚರಿತೆಯಿಂದ ತಿಳಿಯುತ್ತದೆ.[೭] ಹೊಯ್ಸಳ ಬಲ್ಲಾಳನು ಕ್ರಿ. ಶ. ೧೩೩೦ ರಿಂದ ೧೩೪೦ರ ವರೆಗೆ ತುಂಗಭದ್ರಾ ನದಿಯ ಉತ್ತರ ದಂಡೆಯ ಮೇಲೆ ತಾನು ಕಟ್ಟಿಸಿದ ಕೋಟೆಯಿಂದ ಆಳುತ್ತಿದ್ದನು. ಇದನ್ನು ಹೊಸದುರ್ಗ, ವಿರೂಪಾಕ್ಷ ಹೊಸದುರ್ಗ, ವಿಜಯ ವಿರೂಪಾಕ್ಷಪುರ, ಹೊಸಬೆಟ್ಟ, ಹೊಸಪಟ್ಟಣ ಮುಂತಾದ ಹೆಸರುಗಳಿಂದ ಶಾಸನಗಳು ಉಲ್ಲೇಖಿಸಿವೆ ಎಂದು ಪಿ.ಬಿ. ದೇಸಾಯಿಯವರು ಅಭಿಪ್ರಾಯ ಪಡುತ್ತಾರೆ.[೮] ಆದರೆ ಶಾಸನಗಳು ಈ ಹೊಸ ರಾಜಧಾನಿ ತುಂಗಭದ್ರಾ ನದಿಯ ಉತ್ತರ ದಂಡೆಯಲ್ಲಿರುವುದೋ ಅಥವಾ ದಕ್ಷಿಣ ದಂಡೆಯಲ್ಲಿರುವುದೋ ಎಂದು ಸ್ಪಷ್ಟಪಡಿಸುವುದಿಲ್ಲ. ವಿಜಯನಗರವು ಮುಂದೆ ಸಂಗಮ ವಂಶಸ್ಥರಿಂದ ಸ್ಥಾಪಿತವಾಗಿರುವುದರಿಂದ ಆನೆಗೊಂದಿಯೇ ಹೊಸ ರಾಜಧಾನಿ ಎಂಬ ದೇಸಾಯಿಯವರ ಅಭಿಪ್ರಾಯವನ್ನು ಒಪ್ಪಬಹುದಾಗಿದೆ.

ವಿಜಯನಗರವನ್ನು ಸ್ಥಾಪಿಸಿದ ಸಂಗಮ ವಂಶದ ಮೊದಲ ಅರಸರು ಆನೆಗೊಂದಿಯನ್ನು ತಮ್ಮ ರಾಜಧಾನಿಯನ್ನಾಗಿಮಾಡಿಕೊಂಡರು. ಆನೆಗೊಂದಿಯನ್ನು ಹಸ್ತಿನಾವತಿ, ಹಸ್ತಿನಿ ಮತ್ತು ಕುಂಜರಕೋಣ ಎಂದೂ ಕರೆಯಲಾಗುತ್ತಿತ್ತು. ಮೊದಲನೆಯ ಹರಿಹರನು ಕುಂಜರಕೋಣ ಅಥವಾ ಹಸ್ತಿನಿಯಿಂದ ಆಳುತ್ತಿದ್ದನು.[೧೦] ಮೊದಲನೇ ಬುಕ್ಕ ವಿಜಯನಗರ ಪಟ್ಟಣವನ್ನು ಕಟ್ಟಿಸಿದ ಮೇಲೆ ರಾಜಧಾನಿಯು ಅಲ್ಲಿಗೆ ಸ್ಥಳಾಂತರವಾಯಿತು. ಆದರೂ ಆನೆಗೊಂದಿಯ ಹೆಸರು ವಿಜಯನಗರ-ಹಂಪೆಯೊಂದಿಗೆ ಸೇರಿ ವಿಜಯನಗರ ಅರಸರ ರಾಜಧಾನಿಯಾಗಿ ಶಾಸನಗಳಲ್ಲಿ ಉಲ್ಲೇಖಗೊಂಡಿದೆ.[೧೧] ಕ್ರಿ. ಶ. ೧೫೬೫ರಲ್ಲಿ ಆದ ರಕ್ಕಸ ತಂಗಡಿ ಯುದ್ಧದ ನಂತರ ವಿಜಯನಗರದ ಪತನವಾದಾಗ ರಾಜಧಾನಿಯನ್ನು ಪೆನುಗೊಂಡೆಗೆ ಬದಲಾಯಿಸಲಾಯಿತು. ಕ್ರಿ.ಶ. ೧೫೮೦ರಲ್ಲಿ ಅರವೀಡು ಮನೆತನದ ರಾಮರಾಜನ ಮಗ ತಿಮ್ಮರಾಜಯ್ಯನು ಆನೆಗೊಂದಿಯಿಂದ ಆಳುತ್ತಿದ್ದನು.[೧೨] ಕ್ರಿ.ಶ. ೧೭೪೯ರಲ್ಲಿ ಮರಾಠರ ವಶವಾಗಿ, ಕ್ರಿ.ಶ. ೧೭೭೪ರಲ್ಲಿ ಹೈದರಾಲಿ ಮತ್ತು ಕ್ರಿ.ಶ. ೧೭೮೬ರಲ್ಲಿ ಟೀಪು ಸುಲ್ತಾನನ ವಶವಾಯಿತು. ೧೭೯೦ರಲ್ಲಿ ಆನೆಗೊಂದಿ ಸಂಸ್ಥಾನವು ಪುನಃ ಸ್ಥಾಪನೆಯಾಗಿ ೧೯೪೮ರವರೆಗೆ ಆನೆಗೊಂದಿ ಅರಸರ ಆಳ್ವಿಕೆಗೆ ಒಳಪಟ್ಟಿತ್ತು.[೧೩]

## ಕೋಟೆ

ಕೋಟೆಯನ್ನು ಕಟ್ಟುವಾಗ ನೈಸರ್ಗಿಕವಾಗಿ ಆಯಕಟ್ಟಿನ ಸ್ಥಳವಾಗಿದ್ದು ಹೆಚ್ಚಿನ ರಕ್ಷಣೆಯನ್ನು ನೀಡುವಂತಹ ಪ್ರದೇಶವನ್ನು ಆಯ್ಕೆ ಮಾಡಲಾಗುತ್ತದೆ. ಆನೆಗೊಂದಿ ಇಂತಹ ಆಯಕಟ್ಟಿನ ಸ್ಥಳವಾಗಿದೆ. ದಕ್ಷಿಣ ಮತ್ತು ಪೂರ್ವ ದಿಕ್ಕುಗಳಲ್ಲಿ ಹರಿಯುವ ಅಗಲ ಮತ್ತು ಆಳವಾಗಿರುವ ತುಂಗಭದ್ರ ನದಿ ಮತ್ತು ಉತ್ತರ, ಪಶ್ಚಿಮ ಮತ್ತು ದಕ್ಷಿಣ ದಿಕ್ಕುಗಳಲ್ಲಿ ತಲೆ ಎತ್ತಿರುವ ಎತ್ತರವಾದ ಬೆಟ್ಟಗಳು ನೈಸರ್ಗಿಕವಾಗಿ ವೈರಿ ಪಡೆಗೆ ತಡೆಯನ್ನೊಡ್ಡುತ್ತವೆ. ಇವುಗಳ ಮಧ್ಯದಲ್ಲಿಯ ವಿಶಾಲವಾದ ಪ್ರದೇಶವನ್ನು ಸುತ್ತುವರಿದು, ಬೆಟ್ಟಗಳ ಮೇಲೆ ಹರಡಿ, ಬೆಟ್ಟಗಳ ಮತ್ತೊಂದು ಬದಿಯವರೆಗೆ ಚಾಚಿ ಕೋಟೆಯನ್ನುಕಟ್ಟಿದೆ (ಚಿತ್ರ ೨೮೭). ಉತ್ತರ ದಿಕ್ಕಿನಲ್ಲಿರುವ ಹೊರ ಕೋಟೆಯ ಬಾಗಿಲಿನಿಂದ ದಕ್ಷಿಣ ದಿಕ್ಕಿನಲ್ಲಿ ನದಿಯ ದಂಡೆಯ ಮೇಲಿರುವ ಅಂಬಿಗರ ಬಾಗಿಲಿನವರೆಗೆ ಸುಮಾರು ಮೂರು ಕಿ.ಮೀ. ಮತ್ತು ಪೂರ್ವ ದಿಕ್ಕಿನಲ್ಲಿ ನದಿಯ ದಂಡೆಯ ಮೇಲಿನ ಬಾಗಿಲಿನಿಂದ ಪಶ್ಚಿಮದಲ್ಲಿ ಬೆಟ್ಟದ ಕೆಳಗಿರುವ ಬಾಗಿಲಿನವರೆಗೆ ಸುಮಾರು ನಾಲ್ಕು ಕಿ.ಮೀ. ಪ್ರದೇಶವನ್ನು ಈ ಕೋಟೆ ಆವರಿಸಿದೆ. ವಿಸ್ತೀರ್ಣದಲ್ಲಿ ಇದು ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳಲ್ಲಿ ಎಲ್ಲಕ್ಕಿಂತಲೂ ದೊಡ್ಡದು.

ಒಳಕೋಟೆಯನ್ನು ನೆಲಮಟ್ಟದಲ್ಲಿ ಊರಿನ ಸುತ್ತಲೂ ಕಟ್ಟಲಾಗಿದೆ (ಚಿತ್ರ ೨೮೮). ಇದರ ಹೊರಗೆ ಬೇರೆ ಬೇರೆ ದಿಕ್ಕುಗಳಲ್ಲಿ ಪರಿಸರಕ್ಕನುಗುಣವಾಗಿ ಹೊರ ಕೋಟೆಗಳನ್ನು ಕಟ್ಟಿದೆ. ಊರಿನ ಪಶ್ಚಿಮಕ್ಕೆ ಮತ್ತು ವಾಯುವ್ಯಕ್ಕಿರುವ ಎರಡು ದೊಡ್ಡ ಬೆಟ್ಟಗಳನ್ನು ಪ್ರತ್ಯೇಕವಾದ ಕೋಟೆ ಗೋಡೆಗಳು ಸುತ್ತುವರಿದಿವೆ. ಎಲ್ಲಕ್ಕಿಂತಲೂ ಹೊರಗಿರುವ ಕೋಟೆ ದಕ್ಷಿಣ ಮತ್ತು ಪೂರ್ವ ದಿಕ್ಕುಗಳಲ್ಲಿ ನದಿಯ ದಂಡೆಯ ಮೇಲೆ ಮತ್ತು ಪಶ್ಚಿಮ, ವಾಯವ್ಯ, ಉತ್ತರ ಮತ್ತು ಈಶಾನ್ಯ ದಿಕ್ಕುಗಳಲ್ಲಿಯ ಬೆಟ್ಟಗಳನ್ನು ಸುತ್ತುವರಿದಿದೆ (ಚಿತ್ರ ೨೮೯). ಮಧ್ಯದ ಸುತ್ತುಗಳನ್ನು ಬೆಟ್ಟಗಳ ಮಧ್ಯದಲ್ಲಿ ನೆಲಮಟ್ಟದಲ್ಲಿ ಮತ್ತು ಬೆಟ್ಟಗಳ ಕಡಿದಾದ ಭಾಗವನ್ನು ಬಿಟ್ಟು ಉಳಿದ ಭಾಗಗಳಲ್ಲಿ ಕಟ್ಟಿದೆ. ಈ ಕೋಟೆಯಲ್ಲಿ ಅನೇಕ ಬಾಗಿಲುಗಳು, ಚೌಕಾಕಾರದ ಮತ್ತು ಅರ್ಧವೃತ್ತಾಕಾರದ ಕೊತ್ತಳಗಳು, ಕಾವಲು ಗೋಪುರಗಳು, ಕಣಜಗಳು, ಕಟ್ಟಡಗಳ ಅವಶೇಷಗಳು, ಕೊಳಗಳು, ಬಾವಿಗಳು, ದೇವಾಲಯಗಳು ಮುಂತಾದವುಗಳಿವೆ.[೧೪]

ಕೋಟೆಯ ಅವಶೇಷಗಳನ್ನು ಗಮನಿಸಿದರೆ ಹದಿಮೂರನೇ ಶತಮಾನದಲ್ಲಿ ಪ್ರಾರಂಭವಾದ ನಿರ್ಮಾಣ ಕಾರ್ಯವು ಹದಿನೆಂಟನೇ ಶತಮಾನದವರೆಗೆ ಮುಂದುವರಿದದ್ದು ಸ್ಪಷ್ಟವಾಗುತ್ತದೆ. ತೆಳುವಾದ ಮತ್ತು ಎತ್ತರವಾದ




೨೮೭. ಆನೆಗೊಂದಿ ಕೋಟೆ : ೧. ಬಾಗಿಲು, ೨. ಸುಂಕದ ಬಾಗಿಲು, ೩. ಆಂಜನೇಯ ದೇವಾಲಯ, ೪. ಅರವಂಟಿಗೆ, ೫. ಕಡೇಬಾಗಿಲು, ೬. ವೀರಭದ್ರದೇವಾಲಯ, ೭. ದೇವಾಲಯ, ೮. ಹೊನ್ನಗಸೆ, ೯. ರಂಗನಾಥ ದೇವಾಲಯ, ೧೦. ಗಗನ ಮಹಲ್, ೧೧. ಜೈನ ಬಸದಿ, ೧೨. ಈಶ್ವರ ದೇವಾಲಯ, ೧೩. ಬಾಗಿಲು, ೧೪. ಚಿಂತಾಮಣಿ ಮಠ, ೧೫. ಅಂಬಿಗರ ಬಾಗಿಲು, ೧೬. ಕಣಜಗಳು, ೧೭. ದೊಡ್ಡ ಕಣಜ, ೧೮. ಪಶ್ಚಿಮ ಬಾಗಿಲುಗಳು, ೧೯. ಪಶ್ಚಿಮ ಬೆಟ್ಟದ ಮಧ್ಯದ ಕೋಟೆಯ ಬಾಗಿಲುಗಳು.



೨೮೮. ಆನೆಗೊಂದಿ, ಊರ ಪಶ್ಚಿಮಕ್ಕಿರುವ ಒಳಕೋಟೆ



೨೮೯. ಆನೆಗೊಂದಿ, ಉತ್ತರ ದಿಕ್ಕಿನ ಒಳಕೋಟೆ



೨೯೦. ಆನೆಗೊಂದಿ, ಪಶ್ಚಿಮ ಬೆಟ್ಟದ ಮೇಲಿನ ಕೋಟೆ ಮತ್ತು ಕಾವಲು ಗೋಪುರ



೨೯೧. ಆನೆಗೊಂದಿ, ಸುಂಕದ ಬಾಗಿಲ ಹತ್ತಿರದ ಅರವಂಟಿಗೆ

ಬಾಗಿಲ ಚೌಕಟ್ಟು, ಕಂಬ, ಅರೆಗಂಬಗಳನ್ನು ಅಳವಡಿಸಿದ ಬಾಗಿಲುಗಳು ಹದಿಮೂರನೇ ಶತಮಾನದವಾದರೆ ದಪ್ಪವಾದ ಕಂಬಗಳನ್ನು ಬಳಸಿದ ಬಾಗಿಲುಗಳು ಹದಿನಾಲ್ಕು-ಹದಿನೈದನೇ ಶತಮಾನಗಳವು. ಅರ್ಧವೃತ್ತಾಕಾರದ ಬುರುಜುಗಳ ಮಧ್ಯದಲ್ಲಿ ಹೇರಳವಾಗಿ ಗಾರೆ ಬಳಸಿ ಕಟ್ಟಿದ ಬಾಗಿಲು ಹದಿನೇಳನೇ ಶತಮಾನದ್ದು. ಅದೇ ರೀತಿ ಕೋಟೆಗೋಡೆಯ ರಚನೆಯಲ್ಲೂ ವೈವಿಧ್ಯತೆಯಿದೆ. ಚೌಕಾಕಾರದ ದಪ್ಪಕಲ್ಲುಗಳನ್ನು ಬಳಸಿ ಬದಿಗಳಲ್ಲಿ ಸಂದಿಗಳಿಲ್ಲದಂತೆ ಅಚ್ಚುಕಟ್ಟಾಗಿ ಜೋಡಿಸಿ ಕಟ್ಟಿದ ಕೋಟೆಗೋಡೆ ಹದಿನಾಲ್ಕನೇ ಶತಮಾನದ್ದು. ಇದು ವಿಜಯನಗರದ ಆರಂಭದ ಕಾಲದ್ದು. ಎರಡನೆಯ ವಿಧದ ಕೋಟೆ ಗೋಡೆಗೆ ಇದೇ ಅಳತೆಯ ಕಲ್ಲುಗಳನ್ನು ಬಳಸಿದೆಯಾದರೂ, ಬದಿಗಳಲ್ಲಿ ಸಂದಿಗಳಿದ್ದು ಅವುಗಳಲ್ಲಿ ಕಲ್ಲಿನ ಚಕ್ಕೆಗಳನ್ನು ಉಪಯೋಗಿಸಿದೆ. ಇದು ವಿಜಯನಗರದ ಉಚ್ಛ್ರಾಯ ಕಾಲದ್ದು. ಮೂರನೆಯ ವಿಧದ ಗೋಡೆಯನ್ನು ಚಿಕ್ಕ ಕಲ್ಲು ಮತ್ತು ಮಣ್ಣಿನಿಂದ ಕಟ್ಟಿದೆ. ಇದರಲ್ಲಿ ಕಲ್ಲಿನ ಚಕ್ಕೆಗಳೇ ಹೆಚ್ಚಿನ ಪ್ರಮಾಣದಲ್ಲಿ ಕಾಣುತ್ತವೆ. ಇದು ವಿಜಯನಗರವು ಕ್ರಿ.ಶ.೧೫೬೫ರಲ್ಲಿ ಪತನವಾದ ನಂತರ ಹದಿನಾರು-ಹದಿನೇಳನೇ ಶತಮಾನಗಳಲ್ಲಿ ಕಟ್ಟಿದ್ದು . ಕೊನೆಯ ವಿಧದ ಗೋಡೆಯನ್ನು ಬಹಳ ಚಿಕ್ಕ ಕಲ್ಲುಗಳಿಂದ ಕಟ್ಟಿರುವುದರಿಂದ ಇದು ಬಲಿಷ್ಠವಾಗಿಲ್ಲ. ಇಂತಹ ಗೋಡೆಯನ್ನು ಕೋಟೆಯ ದುರಸ್ತಿ ಮಾಡುವಾಗ ಹದಿನೆಂಟನೇ ಶತಮಾನದಲ್ಲಿ ಕಟ್ಟಿದೆ.

### ಬಾಗಿಲುಗಳು

ವಿಶಾಲವಾದ ಅನೇಕ ಸುತ್ತುಗಳ ಕೋಟೆಯಲ್ಲಿ ನಾನಾ ದಿಕ್ಕಿಗೆ ನಲ್ವತ್ತಕ್ಕೂ ಹೆಚ್ಚು ದೊಡ್ಡ ಮತ್ತು ಚಿಕ್ಕ ಬಾಗಿಲುಗಳು, ಗುಪ್ತದ್ವಾರಗಳಂತಿರುವ ಅತಿ ಚಿಕ್ಕ ಬಾಗಿಲುಗಳಿವೆ. ಇವುಗಳ ಗಾತ್ರದಲ್ಲಿದ್ದಂತೆ ರಚನೆಯಲ್ಲೂ ವೈವಿಧ್ಯತೆ ಇದೆ. ಕೆಲವು ಸುಸ್ಥಿತಿಯಲ್ಲಿ, ಕೆಲವು ಶಿಥಿಲಾವಸ್ಥೆಯಲ್ಲಿದ್ದರೆ, ಕೆಲವೆಡೆ ಅವುಗಳ ಕೆಳಗಿನ ಕಟ್ಟೆಗಳು ಮಾತ್ರ ಉಳಿದಿವೆ.

ಈಶಾನ್ಯ ದಿಕ್ಕಿನಿಂದ ಗಂಗಾವತಿ ಕಡೆಯಿಂದ ಬರುವಾಗ ನಾಲ್ಕು ಬಾಗಿಲುಗಳಿವೆ. ಇವುಗಳಲ್ಲಿ ಮೊದಲನೆಯದು ಕಡೇ ಬಾಗಿಲು, ಎರಡನೆಯದು ಗೋರಿ ಬಾಗಿಲು, ಮೂರನೆಯದು ಸುಂಕದ ಬಾಗಿಲು ಮತ್ತು ನಾಲ್ಕನೆಯದು ಹೊನ್ನಗಸೆ. ಉತ್ತರ ದಿಕ್ಕಿನ ರಾಮಪುರದಿಂದ ಬರುವ ಹಾದಿಯಲ್ಲಿ ಒಂದು ಬಾಗಿಲು, ಪಶ್ಚಿಮ ದಿಕ್ಕಿನ ಸಾನಪುರದಿಂದ ಬರುವ ಹಾದಿಯಲ್ಲಿ ಐದು ಬಾಗಿಲುಗಳು ಮತ್ತು ದಕ್ಷಿಣದಿಂದ ಹಂಪಿಯ ಕಡೆಯಿಂದ ಬರುವ ದಾರಿಯಲ್ಲಿ ಎರಡು ಬಾಗಿಲುಗಳು ಬೇರೆ ಊರುಗಳಿಂದ ಬರುವ ದಾರಿಗಳಲ್ಲಿರುವ

ಬಾಗಿಲುಗಳಾಗಿವೆ. ಇವುಗಳಲ್ಲಿ ಹೊನ್ನಗಸೆ, ಕಲ್ಲಗಸೆ ಮತ್ತು ಅಂಬಿಗರ ಬಾಗಿಲು ಪ್ರಮುಖವಾಗಿದ್ದು ಉಳಿದವುಗಳಿಗಿಂತ ದೊಡ್ಡವು.

ವಾಯವ್ಯ ದಿಕ್ಕಿನ ದಾರಿಯಲ್ಲಿರುವ ಸುಂಕದ ಬಾಗಿಲನ್ನು ಅಲ್ಲಿರುವ ಶಾಸನವು ಬಡಗನೆಯ (ಉತ್ತರ) ಬಾಗಿಲು ಎಂದು ಉಲ್ಲೇಖಿಸುತ್ತದೆ. ಅಚ್ಯುತರಾಯನ ಆಳ್ವಿಕೆಯ ಕ್ರಿ.ಶ. ೧೫೩೧ರ ಈ ಶಾಸನವು ಬಾಗಿಲ ಹತ್ತಿರ ಪ್ರತಿಷ್ಠಾಪಿಸಿದ ಬಸವರಾಜ ದೇವರಿಗೆ ಚವರದ ಕೋನಪ್ಪ ನಾಯಕನ ಮಗ ಮಾದಯ್ಯ ಮತ್ತು ಪೆನುಗೊಂಡೆಯ ನಾಗಯ್ಯ ಭೂಮಿಯ ದಾನವನ್ನು ನೀಡಿ ಅರವಂಟಿಗೆಯನ್ನು ನಿರ್ಮಿಸಿದ್ದನ್ನು ತಿಳಿಸುತ್ತದೆ.[೨೪] ಬಾಗಿಲ ಹತ್ತಿರ ಅರವಂಟಿಗೆಯ ಕಟ್ಟಡವಿದೆ. ನಾಲ್ಕು ಕಂಬಗಳ ಮಂಟಪವನ್ನು ಈಗ ಒಂದು ಕೊಠಡಿಯನ್ನಾಗಿ ಪರಿವರ್ತಿಸಿದೆ (ಚಿತ್ರ ೨೯೧). ಈ ಕಟ್ಟಡದಲ್ಲಿ ನೀರನ್ನು ಸಂಗ್ರಹಿಸಲು ಉಪಯೋಗಿಸುತ್ತಿದ್ದ ಕಲ್ಲಿನ ದೊಡ್ಡ ತೊಟ್ಟಿಯನ್ನು ಈಗಲೂ ನೋಡಬಹುದು. ಬಾಗಿಲಿನ ಹತ್ತಿರದಲ್ಲಿ ಆಂಜನೇಯನ ದೇವಾಲಯವಿದೆ. ಹೊನ್ನಗಸೆ ಎರಡು ಚೌಕಾಕಾರದ ಕೊತ್ತಳಗಳ ಮಧ್ಯ ಉತ್ತರಾಭಿಮುಖವಾಗಿದೆ (ಚಿತ್ರ ೨೯೨). ಪಶ್ಚಿಮ ದಿಕ್ಕಿನ ಕೊತ್ತಳ ಬಿದ್ದಿದೆ. ಶಿಥಿಲವಾದ ಬಾಗಿಲಿನ ಚೌಕಟ್ಟಿನ ಒಂದು ತೋಳು ಮಾತ್ರ ಉಳಿದಿವೆ (ಚಿತ್ರ ೨೯೪). ಅಗಲವಾದ ತೋಳಿನ ಕೆಳಗೆ ಮಕರವಿದೆ. ಅದರ ಬಾಯಿಂದ ಹೊರಬಂದ ಬಳ್ಳಿಯು ಸುರುಳಿಯಾಕಾರದ ಶಾಖೆಯಾಗಿದೆ. ಎರಡನೇ ಶಾಖೆಯನ್ನು ಚೌಕಾಕಾರದ ಪುಷ್ಪಗಳಿಂದ ಮತ್ತು ಮೂರನೇ ಶಾಖೆಯನ್ನು ಪತ್ರಗಳಿಂದ ಅಲಂಕರಿಸಿದೆ. ಪ್ರವೇಶದ ಪಕ್ಕದಲ್ಲಿರುವ ಕಟ್ಟೆಗಳ ಕೆಳಭಾಗ ಹಾಳಾಗಿ ಹೋಗಿದೆ. ಪ್ರತಿ ಕಟ್ಟೆಯ ಮೇಲೆ ಎರಡು ಸಾಲಿನಲ್ಲಿ ಎಂಟು ಕಂಬಗಳಿವೆ (ಚಿತ್ರ ೨೯೩). ದಪ್ಪನೆಯ ಕಂಬಗಳ ಕೆಳಭಾಗ ಚೌಕಾಕಾರ, ಮಧ್ಯದ ಭಾಗ ಎಂಟು ಮತ್ತು ಹದಿನಾರು ಬದಿಗಳ ಪಟ್ಟಿಗಳು, ಮೇಲ್ಭಾಗ ಮತ್ತೊಂದು ಚೌಕಾಕಾರ ಮತ್ತು ಅದರ ಮೇಲಿನ ಭಾಗ ಮಡಕೆಯಾಕಾರದಲ್ಲಿ ಇವೆ. ಕೆಳಗಿನ ಚೌಕಾಕಾರದ ಬದಿಗಳಲ್ಲಿ ಆನೆ ಸವಾರರ ಮತ್ತು ಮಡಕೆಯ ಭಾಗದಲ್ಲಿರುವ ಕೂಡುಗಳಲ್ಲಿ ಗಣೇಶ ಮತ್ತು ಮೃಗ ಮಾನವರ ಶಿಲ್ಪಗಳಿವೆ. ಕಂಬಗಳ ಬೋದಿಗೆಗಳು ಸುರುಳಿಯಾಕಾರದಲ್ಲಿವೆ. ಒಳಮಾಳಿಗೆಯ ಮಧ್ಯದ ಭಾಗದಲ್ಲಿ ದುಂಡನೆಯ ಹೂವಿದೆ. ಕಲ್ಲಿನಲ್ಲಿ ಮಾಡಿದ ಕಾಲುವೆಯನ್ನು ಎರಡು ಹೆಚ್ಚುವರಿ ಕಂಬಗಳ ಮೇಲೆ ಎತ್ತರದಲ್ಲಿ ಪಶ್ಚಿಮದಿಂದ ಪೂರ್ವಕ್ಕೆ ಒಯ್ಯಲಾಗಿದೆ. ಮೇಲಿನ ಕೈಪಿಡಿ ಗೋಡೆಯಲ್ಲಿ ಒಂದೇ ಕಲ್ಲಿನಲ್ಲಿ ಮಾಡಿದ ಅರ್ಧವೃತ್ತಾಕಾರದ ಮೇಲ್ಭಾಗವುಳ್ಳ ಒಂದು ತೆನೆಯಿದೆ. ಇಂತಹ ತೆನೆಗಳು ಹದಿನಾಲ್ಕನೇ ಶತಮಾನದ ಪ್ರಾರಂಭದ ವರೆಗಿನ ಕೋಟೆಗಳಲ್ಲಿ ಬಳಕೆಯಲ್ಲಿದ್ದವು. ದಪ್ಪ ಕಂಬಗಳು ಮತ್ತು ಅಗಲವಾದ ಬಾಗಿಲ ತೋಳುಗಳನ್ನು ಕಲ್ಯಾಣ ಚಾಲುಕ್ಯರು ಮತ್ತು ಹೊಯ್ಸಳರು ಈ ಭಾಗದಲ್ಲಿ



೨೯೨. ಆನೆಗೊಂದಿ, ಹೊನ್ನಗಸೆ



೨೯೩. ಆನೆಗೊಂದಿ, ಹೊನ್ನಗಸೆ, ಒಳಭಾಗ









೨೯೪. ಆನೆಗೊಂದಿ, ಹೊನ್ನಗಸೆ









೨೯೫. ಆನೆಗೊಂದಿ: ಅಂಬಿಗರ ಬಾಗಿಲು



೩೯೬. ಆನೆಗೊಂದಿ. ಕಲ್ಲಗಸೆ



೩೯೭. ಆನೆಗೊಂದಿ, ಅಂಬಿಗರ ಬಾಗಿಲು



೨೯೮. ಆನೆಗೊಂದಿ, ಅಂಬಿಗರ ಒಳಬಾಗಿಲು ಒಳಭಾಗ



೨೯೯. ಆನೆಗೊಂದಿ, ಅಂಬಿಗರ ಬಾಗಿಲು ಒಳಮಾಳಿಗೆ

ಉಪಯೋಗಿಸುತ್ತಿದ್ದರು. ಈ ಸಂಪ್ರದಾಯವನ್ನು ವಿಜಯನಗರ ಪ್ರಾರಂಭ ಕಾಲದಲ್ಲಿ ಮುಂದುವರಿಸಲಾಯಿತು. ಆದುದರಿಂದ ಈ ಬಾಗಿಲನ್ನು ವಿಜಯನಗರದ ಆರಂಭ ಕಾಲದಲ್ಲಿ ಕಟ್ಟಿಸಲಾಗಿದೆ.

ಕಲ್ಲಗಸೆ ಹೊನ್ನಗಸೆಯ ಪಶ್ಚಿಮಕ್ಕೆ ಗದ್ದೆಗಳ ಮಧ್ಯದಲ್ಲಿದೆ. ಇದರ ಬದಿಗಳಲ್ಲಿದ್ದ ಕೋಟೆ ಈಗಿಲ್ಲ. ಉತ್ತರಾಭಿಮುಖವಾಗಿರುವ ಈ ಬಾಗಿಲು ಶಿಥಿಲಾವಸ್ಥೆಯಲ್ಲಿದೆ. ಸುಸ್ಥಿತಿಯಲ್ಲಿರುವ ಬಾಗಿಲ ಚೌಕಟ್ಟಿನ ಮೇಲೆ ಅಲಂಕಾರರಹಿತ ಪಟ್ಟಿಕೆಗಳಿವೆ. ತೋಳುಗಳ ಕೆಳಭಾಗದಲ್ಲಿ ಆನೆ ಸವಾರರ ಮತ್ತು ಉತ್ತರಂಗದ (lintel) ಮೇಲೆ ಗಜಲಕ್ಷ್ಮಿ ಶಿಲ್ಪಗಳು ಇವೆ (ಚಿತ್ರ ೨೯೬). ಬಾಗಿಲ ಪಕ್ಕದಲ್ಲಿ ಸ್ವಲ್ಪ ಮುಂದಕ್ಕೆ ಚಾಚಿದಂತೆ ಅಗಲವಾದ ಅರೆಗಂಬವಿದೆ. ಇದರಲ್ಲಿ ಅಡ್ಡ ಮತ್ತು ಉದ್ದವಾಗಿ ವಿಭಜಿಸಿದ ಭಾಗಗಳಿವೆ. ಇದು ದೇವಾಲಯಗಳ ಗೋಡೆಗಳ ಮೇಲಿರುವ ಅಲಂಕಾರಿಕ ದಪ್ಪ ಅರೆಗಂಬಗಳಂತೆದೆ ಮತ್ತು ರಾಯಚೂರು ಕೋಟೆಯ ಬಾಗಿಲುಗಳಲ್ಲಿ ತೋರಣವನ್ನು ಹೊತ್ತ ಬಾಗಿಲ ತೋಳಿನಂತೆ ಇದೆ. ಪ್ರವೇಶದ ಬದಿಗಳಲ್ಲಿಯ ಕಟ್ಟೆಗಳ ಮೇಲೆ ಎತ್ತರವಾದ ಚೌಕಾಕಾರದ ಕಂಬಗಳಿವೆ. ಕಂಬಗಳ ಎರಡು ಚೌಕಗಳ ಮಧ್ಯದ ಭಾಗವನ್ನು ಹೂಗಳ ವಿನ್ಯಾಸವಿರುವ ಹದಿನಾರು ಬದಿಯ ಪಟ್ಟಿಕೆಗಳು ಮತ್ತು ಸರಪಳಿ ವಿನ್ಯಾಸದ ಪಟ್ಟಿಕೆಗಳಿಂದ ಅಲಂಕರಿಸಿದೆ. ಮೇಲಿನ ಕುಂಭ ಅಥವಾ ಮಡಕೆ ಭಾಗವನ್ನು ಸಹ ಹದಿನಾರು ಬದಿಗಳಿಂದ ಅಲಂಕರಿಸಿದೆ. ಮಧ್ಯದ ಒಳಮಾಳಿಗೆಯ ಚಪ್ಪಡಿಕಲ್ಲು ಕೆಳಗೆ ಬಿದ್ದಿದೆ. ಇದರ ಮಧ್ಯದಲ್ಲಿ ವೃತ್ತಾಕಾರದ ಪುಷ್ಪವನ್ನು ಒಂಬತ್ತು ಮೊನಚು ತುದಿಯ ಅಗಲವಾದ ನಕ್ಷತ್ರಾಕಾರದ ಚೌಕಟ್ಟಿನಲ್ಲಿ ಕೆತ್ತಿದೆ. ಬಾಗಿಲ ಪಕ್ಕದ ಅರೆಗಂಬ ಮತ್ತು ಇಂತಹ ಕಂಬಗಳನ್ನು ಕಾಕತೀಯರ ಕಾಲದ ತೋರಣಗಳಲ್ಲಿ[೨೬] ಮತ್ತು ದೇವಾಲಯಗಳಲ್ಲಿ[೨೭] ಕಾಣುತ್ತೇವೆ. ಆದುದರಿಂದ ಈ ಬಾಗಿಲನ್ನು ಹದಿಮೂರನೇ ಶತಮಾನದ ಅಂತ್ಯದಲ್ಲಿ ಕಟ್ಟಲಾಗಿದೆ ಎಂದು ಹೇಳಬಹುದು. ಬಾಗಿಲ ಹತ್ತಿರ ಬಂಡೆಯ ಮೇಲಿರುವ ಶಾಸನವು ಇದನ್ನು 'ಕಲ್ಲಗುಸೆ' ಎಂದು ಉಲ್ಲೇಖಿಸುತ್ತದೆ.[೨೮]

ವಿಜಯನಗರ ಪಟ್ಟಣದಿಂದ ಆನೆಗೊಂದಿಗೆ ಬರುವ ದಾರಿ ದಕ್ಷಿಣಾಭಿಮುಖವಾಗಿರುವ ಅಂಬಿಗರ ಬಾಗಿಲಿನ ಮೂಲಕ ಬರುತ್ತದೆ (ಚಿತ್ರ ೨೯೭). ವಿಜಯನಗರ ಮತ್ತು ಆನೆಗೊಂದಿ ಮಧ್ಯದಲ್ಲಿ ತುಂಗಭದ್ರ ನದಿಯಿದೆ. ಅಂಬಿಗರು ಹಾಕುವ ಹರಿಗೋಲಿನಲ್ಲಿ ದಾಟಿದ ಕೂಡಲೆ ಎದುರಿಗೆ ಈ ಬಾಗಿಲು ಕಾಣುತ್ತದೆ. ಹರಿಗೋಲಿನ ಅಪಘಾತದಲ್ಲಿ ಮುಳುಗುವ ಜನರನ್ನು ರಕ್ಷಿಸಲು ತಮ್ಮ ಪ್ರಾಣವನ್ನು ತ್ಯಾಗ ಮಾಡಿದ ನಾಲ್ವರು ಅಂಬಿಗರ ಎರಡು ವೀರಗಲ್ಲುಗಳು ಈ ಬಾಗಿಲ ಮುಂದಿವೆ. ಒಂದರ ಮೇಲೆ ಎಡಭಾಗದಲ್ಲಿರುವ ಅಂಬಿಗನು ಮೇಲೆತ್ತಿದ ಬಲಗೈಯಲ್ಲಿ ಹರಿಗೋಲು ಹಾಕುವಾಗ ಉಪಯೋಗಿಸುವ ಹುಟ್ಟನ್ನು ಹಿಡಿದಿದ್ದಾನೆ. ಹುಟ್ಟು

ಈಗಿನ ಕ್ರಿಕೆಟ್ ಬ್ಯಾಟಿನಂತಿದೆ. ಆದರೆ ಹುಟ್ಟಿನ ಹಿಡಿ ಬ್ಯಾಟಿನ ಹಿಡಿಗಿಂತ ಉದ್ದವಾಗಿದೆ. ಬಲಭಾಗದಲ್ಲಿರುವ ಅಂಬಿಗನು ಬಲಗೈಯನ್ನು ಮೇಲೆತ್ತಿ ಎದೆ ಮಟ್ಟಕ್ಕೆ ಎತ್ತಿದ ಎಡಗೈಯಲ್ಲಿ ಹುಟ್ಟನ್ನು ಕೆಳಮುಖವಾಗಿ ಹಿಡಿದಿದ್ದಾನೆ. ಇನ್ನೊಂದು ವೀರಗಲ್ಲಿನ ಮೇಲಿನ ಎಡಭಾಗದ ಅಂಬಿಗನು ಎಡಗೈಯನ್ನು ಮೇಲೆತ್ತಿ ಬಲಗೈಯಲ್ಲಿರುವ ಹುಟ್ಟನ್ನು ನೆಲಕ್ಕೆ ತಾಗಿಸಿ ಹಿಡಿದಿದ್ದಾನೆ. ಬಲಭಾಗದಲ್ಲಿಯ ಅಂಬಿಗನು ಎಡಗೈಯಲ್ಲಿಯ ಹುಟ್ಟನ್ನು ಭುಜದ ಮೇಲಿಟ್ಟಿದ್ದಾನೆ. ಅಂಬಿಗರೊಂದಿಗೆ ನಿಕಟ ಸಂಪರ್ಕ ಹೊಂದಿದ ಈ ಬಾಗಿಲನ್ನು ಅಂಬಿಗರ ಬಾಗಿಲೆಂದು ಕರೆಯುತ್ತಾರೆ. ಎರಡು ಚೌಕಾಕಾರದ ಕೊತ್ತಳಗಳ ಮಧ್ಯದಲ್ಲಿರುವ ಬಾಗಿಲ ಮುಂಭಾಗದ ಕಪೋತವನ್ನು ನಾಲ್ಕು ಪುಷ್ಪ ಬೋದಿಗೆಗಳು ಹೊತ್ತಿವೆ (ಚಿತ್ರ ೨೯೭). ಬಾಗಿಲ ಚೌಕಟ್ಟು ಸ್ವಲ್ಪ ಹಿಂದಕ್ಕೆ ಇರುವುದರಿಂದ ಪಕ್ಕದ ಭಾಗವು ಇನ್ನೆರಡು ಕೊತ್ತಳಗಳಂತೆ ಮುಂದೆ ಚಾಚಿದೆ. ಬಾಗಿಲಿಗಿಂತ ಮುಂದಿರುವ ಈ ಚಾಚಿದ ಭಾಗದ ಪ್ರವೇಶದ ಮೇಲೆ ಅಲಂಕಾರಮಯವಾದ ಒಳಮಾಳಿಗೆಯಿದೆ. ಪಕ್ಕದ ಗೋಡೆಗಳಿಂದ ಚಾಚಿದ ಪುಷ್ಪ ಬೋದಿಗೆಗಳ ಮೇಲಿರುವ ಒಳಮಾಳಿಗೆಯನ್ನು ಎರಡು ಚೌಕಟ್ಟುಗಳಲ್ಲಿ ನಿರ್ಮಿಸಿದೆ. ಒಂದು ಚೌಕಟ್ಟಿನೊಳಗಿನ ಮಧ್ಯಭಾಗವನ್ನು ದುಂಡನೆಯ ಹೂವಿನಿಂದ ಮತ್ತು ಅದರ ಸುತ್ತ ನಾಲ್ಕು ಮೂಲೆಗಳನ್ನು ಆನೆ ಮತ್ತು ವ್ಯಾಳಗಳ ದೊಡ್ಡ ಉಬ್ಬು ಶಿಲ್ಪಗಳಿಂದ ಅಲಂಕರಿಸಿದೆ (ಚಿತ್ರ ೨೯೯). ಮತ್ತೊಂದು ಚೌಕಟ್ಟಿನೊಳಗಿನ ಮಧ್ಯದ ಭಾಗವನ್ನು ದುಂಡಗಿರುವ ಹೂ ಮತ್ತು ಅದರ ಸುತ್ತಲು ಎಂಟು ವ್ಯಾಳಗಳಿಂದ ಅಲಂಕರಿಸಿದೆ . ಸರಳವಾದ ಶಾಖೆಗಳ ಬಾಗಿಲ ಚೌಕಟ್ಟಿನ ಮೇಲೆ ಗಜಲಕ್ಷ್ಮಿ ಮತ್ತು ಅದರ ಮೇಲ್ಭಾಗದಲ್ಲಿ ಗಣೇಶನ ಶಿಲ್ಪಗಳಿವೆ. ಪ್ರವೇಶದ ಪಕ್ಕದಲ್ಲಿಯ ಕಟ್ಟೆಗಳ ಅಧಿಷ್ಠಾನದ ಮೇಲೆ ಸಿಂಹ, ನೃತ್ಯಗಾರ ಮತ್ತು ಮೀನಿನ ಮೇಲೆ ಕುಳಿತ ಮನುಷ್ಯನ ಶಿಲ್ಪಗಳಿವೆ. ಕಟ್ಟೆಯ ಮೇಲೆ ಚೌಕಾಕಾರದ ಎರಡು ವಿಧದ ದಪ್ಪ ಕಂಬಗಳಿವೆ (ಚಿತ್ರ ೨೯೮). ಒಂದು ವಿಧದ ಕಂಬಗಳಲ್ಲಿ ಮೂರು ಚೌಕಾಕಾರದ ಮತ್ತು ಎರಡು ಅಷ್ಟಭುಜಾಕಾರದ ಭಾಗಗಳಿದ್ದರೆ ಮತ್ತೊಂದು ವಿಧದ ಕಂಬಗಳಲ್ಲಿ ಎರಡು ಚೌಕಾಕಾರದ, ಒಂದು ಅಷ್ಟಭುಜಾಕಾರದ ಮತ್ತು ಕುಂಭದ ಭಾಗಗಳಿವೆ. ಎರಡನೇ ವಿಧದ ಕಂಬಗಳ ಎತ್ತರ ಕಡಿಮೆ ಇರುವುದರಿಂದ ಅವುಗಳನ್ನು ಎತ್ತರವಾದ ಪೀಠಗಳ ಮೇಲಿಡಲಾಗಿದೆ. ಈ ಬಾಗಿಲಿನ ಕಾಲ ಹದಿನಾಲ್ಕನೆಯ ಶತಮಾನದ ಉತ್ತರಾರ್ಧ ಭಾಗ. ಬಾಗಿಲಿನ ಮೇಲೆ ಮೊದಲನೆಯ ಮಹಡಿಯಿದೆ. ಸರಳವಾದ ಕಂಬ ಮತ್ತು ಅತಿ ಚಿಕ್ಕ ಕಲ್ಲುಗಳಿಂದ ಕಟ್ಟಿದ ಈ ಮಹಡಿಯ ಮುಂಭಾಗದ ಗೋಡೆಯಲ್ಲಿ ಕಮಾನುಗಳು ಮತ್ತು ಬಂದೂಕು ಕಿಂಡಿಗಳಿವೆ. ಇದನ್ನು ಹದಿನೆಂಟನೇ ಶತಮಾನದಲ್ಲಿ ಕಟ್ಟಲಾಗಿದೆ.



೩೦೦. ಆನೆಗೊಂದಿ. ಪಶ್ಚಿಮ ಬೆಟ್ಟದ ಮೇಲ್ಭಾಗದ ಕೋಟೆಯ ಮೂರನೇ ಬಾಗಿಲು



೩೦೧. ಆನೆಗೊಂದಿ. ಪಶ್ಚಿಮ ಬೆಟ್ಟದ ಮಧ್ಯದ ಕೋಟೆಯ ಮೊದಲನೇ ಬಾಗಿಲು

ಊರಿನ ಪಶ್ಚಿಮಕ್ಕಿರುವ ಬೆಟ್ಟದ ಮೇಲಿನ ಕೋಟೆಯನ್ನು ಬೆಟ್ಟದ ಎತ್ತರಕ್ಕನುಗುಣವಾಗಿ ಮೇಲಿನ ಕೋಟೆ, ಮಧ್ಯದ ಕೋಟೆ, ಮತ್ತು ಕೆಳಗಿನ ಕೋಟೆಗಳೆಂದು ವಿಂಗಡಿಸಬಹುದು. ಮೇಲಿನ ಕೋಟೆಗೆ ಪೂರ್ವದಿಕ್ಕಿನಿಂದ ಹೋಗುವ ದಾರಿಯಲ್ಲಿ ಮೂರು ಬಾಗಿಲುಗಳಿವೆ. ಮೊದಲನೇ ಬಾಗಿಲು ಚಿಕ್ಕದಾಗಿದೆ. ಚಿಕ್ಕ ಕಲ್ಲುಗಳಿಂದ ಕಟ್ಟಿದ ಈ ಬಾಗಿಲಿನ ಸಾಧಾರಣವಾದ ಚೌಕಟ್ಟಿನ ಮೇಲೆ ಚತ್ರ ಹಿಡಿದು ನಿಂತ ದ್ವಾರಪಾಲರ ಉಬ್ಬು ಶಿಲ್ಪಗಳಿವೆ. ಈ ಬಾಗಿಲನ್ನು ಹದಿನೆಂಟನೇ ಶತಮಾನದಲ್ಲಿ ಕಟ್ಟಲಾಗಿದೆ. ಎರಡನೇ ಬಾಗಿಲಿನ ಕಟ್ಟಡ ಉಳಿದಿಲ್ಲ. ಪಕ್ಕದಲ್ಲಿಯ ಆಯತಾಕಾರದ ಕೊತ್ತಳದ ಭಾಗ ಮಾತ್ರ ಕಾಣುತ್ತದೆ. ಮೂರನೆಯ ಬಾಗಿಲು ಸುಸ್ಥಿತಿಯಲ್ಲಿದೆ. ಈ ಬಾಗಿಲಿಗೆ ಎರಡು ಬದಿಗಿರುವ ಅರ್ಧವೃತ್ತಾಕಾರದ ಕೊತ್ತಳಗಳು ರಕ್ಷಣೆ ನೀಡುತ್ತವೆ (ಚಿತ್ರ ೩.೦೦). ಸರಳವಾದ ಬಾಗಿಲ ಚೌಕಟ್ಟಿನ ಉತ್ತರಂಗ (lintel)ದ ಮಧ್ಯದಲ್ಲಿ ಗಣೇಶನ ಶಿಲ್ಪವಿದೆ. ಅದರ ಬದಿಗಳಲ್ಲಿ ಸೂರ್ಯಚಂದ್ರರಿದ್ದಾರೆ. ಉತ್ತರಂಗದ ಮೇಲಿನ ಉದ್ದವಾದ ಕಲ್ಲಿನ ಮೇಲೆ ಮಧ್ಯದಲ್ಲಿ ಮಾನವ ರೂಪದಲ್ಲಿ ಹಾರುವ ಭಂಗಿಯಲ್ಲಿರುವ ಗರುಡನ ಶಿಲ್ಪವಿದೆ. ಬಲಕ್ಕೆ ಮು[illegible]ಮಾಡಿದ ಗರುಡನ ಎದುರಿಗೆ ಹಾವಿದೆ. ಗರುಡ ಹಿಂಭಾಗದಲ್ಲಿ ಒಂದು [illegible]ವಿದೆ. ಬಾಗಿಲ ಮೇಲ್ಭಾಗದಲ್ಲಿ ನಾಲ್ಕು ಪುಷ್ಪ ಬೋದಿಗೆಗಳ ಮೇಲೆ ಮುಂಚಾಚು (projecting balcony) ಇದೆ. ಇಟ್ಟಿಗೆ ಮತ್ತು ಗಾರೆಯಿಂದ ಕಟ್ಟಿದ ಮುಂಚಾಚಿನ ಮುಂಭಾಗದಲ್ಲಿ ಮೂರು ಕಮಾನುಗಳಿವೆ. ಕಮಾನುಗಳ ಪಕ್ಕದಲ್ಲಿ ಗಾರೆಯಲ್ಲಿ ಮಾಡಿದ ಹೂಬಳ್ಳಿಯ ಉಬ್ಬು ಚಿತ್ರಗಳಿವೆ. ಮೇಲಿನ ಕೈಪಿಡಿಯಲ್ಲಿ ಅದೇ ರೀತಿ ಮಾಡಿದ ಬಳ್ಳಿ, ಎಲೆ ಮತ್ತು ಹೂವಿನ ವಿನ್ಯಾಸಗಳಿವೆ. ಬಾಗಿಲ ಕೈಪಿಡಿ ಗೋಡೆಯ ಮೇಲೆ ಇಟ್ಟಿಗೆ ಗಾರೆಯ ತೆನೆಗಳ ಚಿಕ್ಕ ಅಲಂಕಾರಗಳಿದ್ದವು. ಅವುಗಳಲ್ಲಿ ಈಗ ಒಂದು ಮಾತ್ರ ಉಳಿದಿದೆ. ಇದರಲ್ಲಿ ಬಂದೂಕಿಗಾಗಿ ಮಾಡಿದ ರಂಧ್ರಗಳಿವೆ. ಪ್ರವೇಶದ ಪಕ್ಕದಲ್ಲಿ ಕಟ್ಟೆಗಳಿವೆ. ಪ್ರತಿ ಕಟ್ಟೆಯ ಮೇಲೆ ಎರಡು ಕಂಬಗಳ ಮೂರು ಅಂಕಣಗಳಿವೆ. ಪ್ರವೇಶದ ಮೇಲಿನ ಒಳಮಾಳಿಗೆಯಲ್ಲಿ ಹೂವಿನ ಚಿತ್ರವಿದೆ. ಬಾಗಿಲ ಮೇಲೆ ಮೊದಲನೇ ಮಹಡಿಯಲ್ಲಿ ಒಂದು ಕೊಠಡಿಯಿದೆ.

ಮಧ್ಯದ ಕೋಟೆಗೆ ಈಶಾನ್ಯದಿಂದ ಎರಡು ಬಾಗಿಲುಗಳಿವೆ. ಮೊದಲನೆಯ ಬಾಗಿಲನ್ನು ಚಿಕ್ಕ ಕಲ್ಲು, ಇಟ್ಟಿಗೆ ಮತ್ತು ಗಾರೆಯಿಂದ ಕಟ್ಟಿದೆ (ಚಿತ್ರ ೩.೦೧). ಸರಳವಾದ ಬಾಗಿಲ ಚೌಕಟ್ಟಿನ ತೋಳಿನ ಕೆಳಭಾಗದಲ್ಲಿ ವೈಷ್ಣವ ದ್ವಾರಪಾಲರಿದ್ದಾರೆ ಮತ್ತು ಉತ್ತರಂಗದ ಮಧ್ಯದಲ್ಲಿ ಚೌಕಾಕಾರದ ಹೂವಿದೆ. ಕೈಪಿಡಿ ಗೋಡೆಯ ಮೇಲ್ಭಾಗದಲ್ಲಿ ತೆನೆಗಳಿವೆ. ಕೈಪಿಡಿ ಗೋಡೆ ಮತ್ತು ತೆನೆಗಳಲ್ಲಿ ಬಂದೂಕು ಕಿಂಡಿಗಳಿವೆ. ಪ್ರವೇಶದ ಪಕ್ಕದಲ್ಲಿಯ ಪ್ರತಿ ಕಟ್ಟೆಯ ಮೇಲೆ ಒಂದು ಅಂಕಣವಿದೆ. ಬಲಭಾಗದ ಕಟ್ಟೆಯ ಅಧಿಷ್ಠಾನದ ಮೇಲೆ ಮೀನಿನ ಶಿಲ್ಪವಿದೆ.



೩೦೨. ಆನೆಗೊಂದಿ. ಪಶ್ಚಿಮ ಬೆಟ್ಟದ ಮಧ್ಯದ ಕೋಟೆಯ ಎರಡನೇ ಬಾಗಿಲು



೩೦೩. ಆನೆಗೊಂದಿ. ಪಶ್ಚಿಮ ಬೆಟ್ಟದ ಮಧ್ಯದ ಕೋಟೆಯೊಳಗಿನ ದೊಡ್ಡ ಕಣಜ









೩೦೪. ಆನೆಗೊಂದಿ, ದೊಡ್ಡ ಕಣಜ

ಪ್ರವೇಶದ ಮೇಲಿನ ಒಳಮಾಳಿಗೆಯಲ್ಲಿ ಹೆಡೆ ಬಿಚ್ಚಿದ ಉದ್ದವಾದ ಹಾವಿನ ಶಿಲ್ಪವಿದೆ. ಎರಡನೆಯ ಬಾಗಿಲನ್ನು ಸರಳವಾದ ಕಂಬ ತೊಲೆಗಳಿಂದ ಕಟ್ಟಿದೆ. ಇದರಲ್ಲಿ ಬಾಗಿಲ ಚೌಕಟ್ಟು ಇಲ್ಲ (ಚಿತ್ರ ೩೦.೨). ಪ್ರವೇಶದ ಪಕ್ಕದ ಪ್ರತಿ ಕಟ್ಟೆಯ ಮೇಲೆ ಎರಡು ಅಂಕಣಗಳಿವೆ. ಮಧ್ಯದ ಮತ್ತು ಕೆಳ ಕೋಟೆಗಳ ಮಧ್ಯದಲ್ಲಿ ನೈರುತ್ಯ ದಿಕ್ಕಿನಲ್ಲಿ ನದಿಯ ಕಡೆಯಿಂದ ಬರುವ ದಾರಿಯಲ್ಲಿ ಎರಡು ಬಾಗಿಲುಗಳಿವೆ. ಸರಳವಾದ ಕಂಬ ತೊಲೆಗಳಿಂದ ಕಟ್ಟಿದ ಈ ಬಾಗಿಲುಗಳಿಗೆ ಚೌಕಟ್ಟುಗಳಿಲ್ಲ. ಪ್ರವೇಶದ ಪಕ್ಕದ ಪ್ರತಿ ಕಟ್ಟೆಯ ಮೇಲೆ ಎರಡು ಅಂಕಣಗಳಿವೆ. ಕೆಳ ಕೋಟೆಯ ಆಗ್ನೇಯಕ್ಕೆ ಮತ್ತು ಅಂಬಿಗರ ಬಾಗಿಲ ಪಶ್ಚಿಮಕ್ಕೆ ಇದೇ ರೀತಿಯ ಒಂದು ಚಿಕ್ಕ ಬಾಗಿಲಿದೆ. ಪ್ರವೇಶದ ಪಕ್ಕದ ಪ್ರತಿ ಕಟ್ಟೆಯ ಮೇಲೆ ಒಂದು ಅಂಕಣವಿದೆ. ಪ್ರವೇಶದಲ್ಲಿ ಒಂದು, ಕಟ್ಟೆಗಳ ಮೇಲೆ ಎರಡು, ಒಟ್ಟಿಗೆ ಮೂರು ಅಂಕಣಗಳಿವೆ.

## ಕೊತ್ತಳಗಳು

ಆನೆಗೊಂದಿ ಕೋಟೆಯಲ್ಲಿ ಚೌಕಾಕಾರ ಮತ್ತು ಅರ್ಧವೃತ್ತಾಕಾರದ ಕೊತ್ತಳಗಳಿವೆ. ಊರ ಸುತ್ತಲಿರುವ ಕೋಟೆಯಲ್ಲಿ ಚೌಕಾಕಾರದ ಕೊತ್ತಳಗಳಿವೆ. ಇವನ್ನು ಹೊನ್ನಗಸೆ ಮತ್ತು ಅಂಬಿಗರ ಬಾಗಿಲ ಬದಿಗಳಲ್ಲಿ ಮತ್ತು ಇತರ ಕಡೆ ನೋಡಬಹುದು. ಇವು ವಿಜಯನಗರ ಕಾಲದಲ್ಲಿ ಹದಿನಾಲ್ಕರಿಂದ ಹದಿನಾರನೇ ಶತಮಾನಗಳಲ್ಲಿ ನಿರ್ಮಾಣವಾಗಿವೆ. ಬೆಟ್ಟದ ಮೇಲಿನ ಕೋಟೆಯಲ್ಲಿ ಚೌಕಾಕಾರದ ಮತ್ತು ಅರ್ಧವೃತ್ತಾಕಾರದ ಕೊತ್ತಳಗಳಿವೆ. ಮೇಲಿನ ಕೋಟೆಯ ಮೂರನೇ ಬಾಗಿಲ ಪಕ್ಕದಲ್ಲಿರುವ ಅರ್ಧವೃತ್ತಾಕಾರದ ಕೊತ್ತಳಗಳನ್ನು ಕಲ್ಲು ಮತ್ತು ಗಾರೆಯಿಂದ ಕಟ್ಟಿದೆ. ಗೋಡೆಯಲ್ಲಿ ಬಂದೂಕು ಕಿಂಡಿಗಳಿವೆ. ಕೈಪಿಡಿ ಗೋಡೆಯಲ್ಲಿ ಚಿಕ್ಕ ಕಲ್ಲು ಮತ್ತು ಗಾರೆಯಿಂದ ಕಟ್ಟಿದ ತೆನೆಗಳಿವೆ. ತೆನೆಗಳ ಮೇಲ್ಭಾಗ ವೃತ್ತಾಕಾರವಾಗಿದ್ದು ಇವುಗಳಲ್ಲಿ ಬಂದೂಕು ಕಿಂಡಿಗಳಿವೆ. ಈ ಕೊತ್ತಳಗಳಲ್ಲಿ ಮುಸ್ಲಿಮ್ ಶೈಲಿಯ ಅರ್ಧವೃತ್ತಾಕಾರದ ವಿನ್ಯಾಸ ಮತ್ತು ಬಂದೂಕು ಕಿಂಡಿಗಳಿರುವುದರಿಂದ ಇವುಗಳನ್ನು ವಿಜಯನಗರದ ಪತನದ ನಂತರ ಹದಿನೇಳನೇ ಶತಮಾನದಲ್ಲಿ ಕಟ್ಟಿದೆ.

## ಕಾವಲು ಗೋಪುರಗಳು

ಕೋಟೆ ಗೋಡೆಯ ಮೇಲೆ, ಕೋಟೆಗೋಡೆಯ ಪಕ್ಕದ ಎತ್ತರವಾದ ಬಂಡೆಯ ಮೇಲೆ ಮತ್ತು ಬೆಟ್ಟದ ತುದಿಯ ಬಂಡೆಗಳ ಮೇಲೆ ವೃತ್ತಾಕಾರದ ಕಾವಲು ಗೋಪುರಗಳಿವೆ. ಇವುಗಳಿಗೆ ಚಿಕ್ಕದಾದ ಬಾಗಿಲ ಚೌಕಟ್ಟಿದೆ. ಅತಿ ಚಿಕ್ಕ ಕಲ್ಲು ಮತ್ತು ಗಾರೆಯಿಂದ ಕಟ್ಟಿದ ಗೋಡೆಗಳಲ್ಲಿ ಬಂದೂಕು ಕಿಂಡಿಗಳಿವೆ. ಊರ ಪಶ್ಚಿಮಕ್ಕಿರುವ

ಬೆಟ್ಟದ ಮೇಲಿನ ಕೋಟೆಗೋಡೆಯ ಮೇಲೆ ವಿಶಿಷ್ಟವಾದ ರಚನೆಯುಳ್ಳ ವೃತ್ತಾಕಾರದ ಕಾವಲು ಗೋಪುರವಿದೆ. ಗೋಪುರದ ಮಧ್ಯದಲ್ಲಿ ಒಂದು ಮತ್ತು ಸುತ್ತಲಿನ ಗೋಡೆಯ ಬದಿಯಲ್ಲಿ ಎಂಟು ದಿಕ್ಕಿಗೆ ಎಂಟು ಕಂಬಗಳನ್ನು ನಿಲ್ಲಿಸಿದೆ. ಮಧ್ಯದ ಕಂಬದ ಮೇಲಿನ ಅಗಲವಾದ ಚಪ್ಪಡಿಯಿಂದ ಎಂಟು ದಿಕ್ಕಿಗೆಚಾಚಿದ ಎಂಟು ತೊಲೆಗಳು ಸುತ್ತಲಿನ ಕಂಬಗಳ ಮೇಲ್ಭಾಗಕ್ಕೆ ಹೋಗುತ್ತವೆ. ವೃತ್ತಾಕಾರದ ಕಾವಲು ಗೋಪುರಗಳನ್ನು ಹದಿನೇಳು ಮತ್ತು ಹದಿನೆಂಟನೇ ಶತಮಾನಗಳಲ್ಲಿ ಕಟ್ಟಿದೆ (ಚಿತ್ರ ೨೯೦).

### ಕಣಜಗಳು

ಊರಿನ ಪಶ್ಚಿಮಕ್ಕಿರುವ ಬೆಟ್ಟದ ಮೇಲಿರುವ ಮೇಲಿನ ಕೋಟೆಯಲ್ಲಿ ಆರು ಮತ್ತು ಮಧ್ಯದ ಕೋಟೆಯಲ್ಲಿ ಆರು ಕಣಜಗಳಿವೆ (ಚಿತ್ರ ೩೦೬). ಮೇಲಿನ ಕೋಟೆಯಲ್ಲಿ ಮೂರು ವೃತ್ತಾಕಾರದ ಮತ್ತು ಮೂರು ಆಯತಾಕಾರದ ಕಣಜಗಳಿವೆ. ಇವುಗಳನ್ನು ಚಿಕ್ಕ ಕಲ್ಲು, ಇಟ್ಟಿಗೆ ಮತ್ತು ಗಾರೆಯಿಂದ ಕಟ್ಟಿದೆ. ಇವುಗಳ ಬಾಗಿಲು ಎತ್ತರದಲ್ಲಿವೆ. ಕೈಪಿಡಿ ಗೋಡೆಯನ್ನು ಚಿಕ್ಕ ತೆನೆಗಳಿಂದ ಅಲಂಕರಿಸಿದೆ. ಆಯತಾಕಾರದ ದೊಡ್ಡ ಕಣಜದ ಮೇಲೆ ಒಂದು ತೊಲೆಯಿದ್ದು ಅದರ ಮೇಲೆ ಮಾಳಿಗೆಯ ಕಲ್ಲು ಚಪ್ಪಡಿಗಳಿವೆ. ಮಧ್ಯದ ಕೋಟೆಯೊಳಗೆ ಒಂದು ಬಹಳ ದೊಡ್ಡ ಕಣಜವಿದೆ. ಇದನ್ನು ೨೩ x ೩ ಕಂಬಗಳಿಂದ ನಿರ್ಮಿಸಿದೆ (ಚಿತ್ರ ೩೦೩). ಮೇಲಿನಿಂದ ಕೆಳಗಿನವರೆಗೆ ಚೌಕಾಕಾರವಾಗಿರುವ ಬಹಳ ದಪ್ಪ ಮತ್ತು ಎತ್ತರವಿರುವ ಕಂಬಗಳ ಮೇಲೆ ತೊಲೆಗಳು ಮತ್ತು ಚಪ್ಪಡಿಗಳಿವೆ (ಚಿತ್ರ ೩೦೫). ಹೊರಗಿನ ಸಾಲಿನ ಕಂಬಗಳನ್ನು ಸೇರಿಸಿಕೊಂಡು ಚಿಕ್ಕ ಕಲ್ಲುಗಳಿಂದ ಹೊರಗೋಡೆಗಳನ್ನು ಕಟ್ಟಿದೆ. ಕಣಜದ ಒಳಗೆ ಧಾನ್ಯಗಳನ್ನು ಹಾಕಲು ಅನುಕೂಲವಾಗುವಂತೆ ಬಾಗಿಲುಗಳನ್ನು ಎತ್ತರದಲ್ಲಿ ಅಳವಡಿಸಲಾಗಿದೆ. ಹೊರಗಿನಿಂದ ಮೆಟ್ಟಿಲುಗಳನ್ನು ಹತ್ತಿ ಒಳಭಾಗದಲ್ಲಿ ಮೆಟ್ಟಿಲುಗಳನ್ನು ಇಳಿಯಬೇಕು (ಚಿತ್ರ ೩೦೪). ಬೇರೆ ಬೇರೆ ಧಾನ್ಯಗಳನ್ನು ಸಂಗ್ರಹಿಸುವುದಕ್ಕಾಗಿ ಅಡ್ಡ ಗೋಡೆ ಕಟ್ಟಿ ಕಟ್ಟಡವನ್ನು ಮೂರು ಭಾಗಗಳಲ್ಲಿ ವಿಂಗಡಿಸಿದೆ. ಕಟ್ಟಡದ ಮಾಳಿಗೆ ಮೇಲೆ ಹೋಗಲು ಹೊರಗಿನಿಂದ ಮೆಟ್ಟಿಲುಗಳಿವೆ. ಕಟ್ಟಡದ ದಕ್ಷಿಣ ಭಾಗ ಅಪೂರ್ಣವಾಗಿದೆ.ಬಹಳ ದೊಡ್ಡದಾಗಿರುವ ಈ ಕಟ್ಟಡವನ್ನು ಸ್ಥಳೀಕರು ಆನೆಸಾಲೆಂದು ಕರೆಯುತ್ತಾರೆ. ಆನೆಗಳನ್ನು ಬೆಟ್ಟದ ಮೇಲೆ ಕಟ್ಟುತ್ತಿದ್ದಿಲ್ಲ. ಇಲ್ಲಿ ಇನ್ನೊಂದು ಆಯತಾಕಾರದ ಚಿಕ್ಕ ಕಣಜ ಮತ್ತು ವೃತ್ತಾಕಾರದ ನಾಲ್ಕು ಚಿಕ್ಕ ಕಣಜಗಳಿವೆ.



೩೦೫. ಆನೆಗೊಂದಿ, ಪಶ್ಚಿಮ ಬೆಟ್ಟದ ಮಧ್ಯದ ಕೋಟೆಯೊಳಗಿನ ದೊಡ್ಡ ಕಣಜದ ಒಳಭಾಗ



೩೦೬. ಆನೆಗೊಂದಿ, ಪಶ್ಚಿಮ ಬೆಟ್ಟದ ಮೇಲ್ಭಾಗದ ಕೋಟೆಯೊಳಗಿನ ವೃತ್ತಾಕಾರದ ಕಣಜ

## ಬಾವಿ ಮತ್ತು ಕೊಳಗಳು

ಆನೆಗೊಂದಿ ಕೋಟೆ ನದಿಯ ದಂಡೆಯ ಮೇಲಿರುವುದರಿಂದ ನದಿಯೇ ನೀರಿನ ಪೂರೈಕೆಯನ್ನು ಒದಗಿಸುತ್ತಿದೆ. ಅಲ್ಲದೆ ಊರಿನಲ್ಲಿಯೂ ಅನೇಕ ಬಾವಿಗಳಿವೆ. ಬೆಟ್ಟದ ಮೇಲಿನ ಕೋಟೆಗೆ ಕೆಳಗಿನಿಂದ ನೀರನ್ನು ಒಯ್ಯುವುದರ ಬದಲಾಗಿ ಮೇಲೆಯೇ ನೀರಿನ ವ್ಯವಸ್ಥೆ ಮಾಡಿದೆ. ಊರಿನ ವಾಯವ್ಯ ದಿಕ್ಕಿಗಿರುವ ಬೆಟ್ಟದ ಕೋಟೆಯೊಳಗೆ ಎರಡು ಕೊಳಗಳಿವೆ. ಪಶ್ಚಿಮ ದಿಕ್ಕಿನ ಮೇಲಿನ ಕೋಟೆಯೊಳಗೆ ಅಚ್ಚುಕಟ್ಟಾಗಿ ಕಟ್ಟಿದ ಒಂದು ಬಾವಿಯಿದೆ. ಚೌಕಾಕಾರದ ಈ ಬಾವಿಗೆ ಇಳಿಯಲು ಮೊದಲು ಪೂರ್ವದಿಂದ ಪಶ್ಚಿಮಕ್ಕೆ ನಂತರ ಅಲ್ಲಿಂದ ಉತ್ತರಕ್ಕೆ ಮೆಟ್ಟಿಲುಗಳಿವೆ. ಪಶ್ಚಿಮ ದಿಕ್ಕಿನ ಮಧ್ಯದ ಕೋಟೆಯೊಳಗೆ ನಾಲ್ಕು ಕೊಳಗಳಿವೆ.

## ದೇವಾಲಯಗಳು

ಕೋಟೆಯೊಳಗೆ ಅನೇಕ ದೇವಾಲಯಗಳಿವೆ. ಈಶಾನ್ಯ ದಿಕ್ಕಿನಿಂದ ಬರುವ ದಾರಿಯಲ್ಲಿ ಸುಂಕದ ಬಾಗಿಲು ದಾಟಿದ ಮೇಲೆ ಆಂಜನೇಯನ ದೇವಸ್ಥಾನವಿದೆ. ಮುಂದೆ ಮತ್ತೊಂದು ಬಾಗಿಲನ್ನು ದಾಟಿ ಮುಂದೆ ಬಂದಾಗ ವೀರಭದ್ರ ದೇವಾಲಯವಿದೆ. ಅದರ ಬಳಿ ದೇವರಿಲ್ಲದ ಮತ್ತೊಂದು ದೇವಾಲಯವಿದೆ. ಹೊನ್ನಗಸೆ ದಾಟಿ ಊರೊಳಗೆ ಹೋದಾಗ ರಂಗನಾಥ, ಗಣೇಶ ಮತ್ತು ಈಶ್ವರ ದೇವಾಲಯಗಳು ಮತ್ತು ಒಂದು ಜೈನ ಬಸದಿ ಇವೆ. ದಕ್ಷಿಣ ದಿಕ್ಕಿನ ಅಂಬಿಗರ ಬಾಗಿಲ ಹೊರಗೆ ಗಣೇಶ ಮತ್ತು ಆಂಜನೇಯನ ದೇವಾಲಯಗಳಿವೆ. ಪಶ್ಚಿಮ ದಿಕ್ಕಿನ ದಾರಿಯಿಂದ ಬರುವಾಗ ಹೊರಬಾಗಿಲನ್ನು ದಾಟಿ ಮುಂದೆ ಬಂದಾಗ ದಾರಿಯ ದಕ್ಷಿಣಕ್ಕೆ ಗವಿರಂಗನಾಥ ದೇವಾಲಯವಿದೆ. ಊರ ಪಶ್ಚಿಮಕ್ಕಿರುವ ಬೆಟ್ಟದ ಮೇಲಿನ ಮೇಲ್ಭಾಗದ ಕೋಟೆಯ ಎರಡನೇ ಬಾಗಿಲನ್ನು ದಾಟಿದ ಕೂಡಲೆ ದುರ್ಗಾ ದೇವಾಲಯವಿದೆ.

## ಇತರ ಕಟ್ಟಡಗಳು

ಊರೊಳಗೆ ಚಿಂತಾಮಣಿ ಮಠ ಮತ್ತು ಗಗನ್ ಮಹಲ್ ಎಂದು ಕರೆಯಲಾಗುವ ಅರಮನೆಯಂತಹ ಚಿಕ್ಕ ಕಟ್ಟಡಗಳಿವೆ. ಪಶ್ಚಿಮ ದಿಕ್ಕಿನ ಬೆಟ್ಟದ ಮೇಲಿನ ಕೋಟೆಯೊಳಗೆ ಮತ್ತು ವಾಯುವ್ಯ ದಿಕ್ಕಿನ ಬೆಟ್ಟದ ಮೇಲಿನ ಕೋಟೆಯೊಳಗೆ ಕೆಲವು ಕಟ್ಟಡಗಳ ಅವಶೇಷಗಳಿವೆ. ಅಂಬಿಗರ ಬಾಗಿಲಿನಿಂದ ಊರೊಳಗೆ ಬರುವ ದಾರಿಯಲ್ಲಿ ಹುಚ್ಚಪ್ಪಯ್ಯನ ಮಠವಿದೆ.

## ಟಿಪ್ಪಣಿಗಳು

೧. *EC,* VIII, Tirthahalli 157; IX, Bangalore 96; X, Gowribidanur 77; ದೇವರ ಕೊಂಡಾರೆಡ್ಡಿ (ಸಂ), ೨ ,೧೯೯೯, *ಕನ್ನಡ ವಿಶ್ವವಿದ್ಯಾನಿಲಯ ಶಾಸನ ಸಂಪುಟ ೨. ಕೊಪ್ಪಳ ಜಿಲ್ಲೆ,* ಕೊಪ್ಪಳ ತಾಲೂಕ ೧೪೮, ಗಂಗಾವತಿ ತಾಲೂಕು ೧.

೨. *ಅದೇ,* X, Gowribidanur 77.

೩. Sewell Robert, 1982, *A Forgotten Empire,* p. 17.

೪. Sastri K.A. Nilkanta, 1966, *A History of South India,* pp. 23, 234-235.

೫. Sugandha, *History and Archaology of Anegondi,* unpublished thesis submitted to the University of Poona, pp. 37-39,49-50; Sastri K.A.Nilkanta and N.Venkata Ramanayya, *Further Sources of Vijayanagara History,* vol. I, p.18.

೬. ಪಾಟೀಲ ಚನ್ನಬಸಪ್ಪ ಎಸ್.,೧೯೯೯ , *ಕರ್ನಾಟಕ ಕೋಟೆಗಳು,* ಸಂ. ೧, ಪು. ೬೬-೭೦

೭. ವರದರಾಜರಾವ್ ಜಿ., ೧೯೬೬, *ಕುಮಾರರಾಮನ ಸಾಂಗತ್ಯಗಳು,* ಪು. ೨೭೪.

೮. Desai P. B., 1972, "Ballala III and Vijayanagara," *The Hoysala Dynanty,* B. Sheik Ali (Ed), pp. 336-337.

೯. *EC,* VII, Sorab 375.

೧೦. *ಅದೇ,* VI, Chikmagalur 79.

೧೧. *ಅದೇ,*V, Belur 4; 223.

೧೨. ದೇವರಕೊಂಡಾರೆಡ್ಡಿ (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ. ೧ ಬಳ್ಳಾರಿ ಜಿಲ್ಲೆ,* ಕೂಡ್ಲಗಿ ತಾಲೂಕು ೧೦, *SII* , IX ii, No. 685

೧೩. Sugandha, *ಪೂರ್ವೋಕ್ತ,* p. 53; ಕೃಷ್ಣಮೂರ್ತಿ ಪಿ.ವಿ. 2000, "ಆನೆಗೊಂದಿ ಪ್ರಭುಗಳ ಇತಿಹಾಸ ಶಾಸನ ಮತ್ತು ಇತರ ಆಕರಗಳ ಹಿನ್ನೆಲೆಯಲ್ಲಿ ಒಂದು ಪರಿಶೀಲನೆ," *ಸೂರ್ಯಕೀರ್ತಿ : ಡಾ. ಸೂರ್ಯನಾಥ ಕಾಮತರ ಅಭಿನಂದನ ಗ್ರಂಥ,* (ಸಂ) ಪಿ.ವಿ. ಕೃಷ್ಣಮೂರ್ತಿ ಮತ್ತು ವಸಂತಲಕ್ಷ್ಮಿ, ಪು. ೨೪೩-೨೪೭.

೧೪. Sugandha, *ಪೂರ್ವೋಕ್ತ,* pp. 71-104; ಪಾಟೀಲ ಚನ್ನಬಸಪ್ಪ ಎಸ್., *ಪೂರ್ವೋಕ್ತ,* ಪು. ೮೫-೯೦

೧೫. Patil Channabasappa S. and Vinoda C. Patil (Eds),1998, *Inscriptions of Koppal District,* No. 3; *VPR,* 1984-87, No. 166; ದೇವರ ಕೊಂಡಾರೆಡ್ಡಿ (ಸಂ) ೨, ೧೯೯೯ *ಪೂರ್ವೋಕ್ತ*, ಗಂಗಾವತಿ ತಾಲೂಕ ೫೫.

೧೬. ವಾರಂಗಲ್ಲಿನಲ್ಲಿಯ ತೋರಣಗಳು. Dhaky M.A. (Ed), 1996, *Encyclopaedia of Indian Temple Architecture, South India, Upper Dravidadesa, Later phase, A.D. 973-1326*, pl.1535.

೧೭. ಹನುಮಕೊಂಡದ ವೆಯಿಸ್ತಂಭಾಲಗುಡಿ. *ಅದೇ,* pls. 1405-1406, 1416-1419.

೧೮. Patil Channabasappa S. and Vinoda C. Patil, *ಪೂರ್ವೋಕ್ತ,* No. 16; *VPR*, 1984-87, No. 175; ದೇವರಕೊಂಡಾರೆಡ್ಡಿ, ೧೯೯೯, *ಪೂರ್ವೋಕ್ತ,* ಗಂಗಾವತಿ ತಾಲೂಕ ೪೪

## ಅಧ್ಯಾಯ ಆರು

# ಕೋಟೆಗಳ ಕಾಲ ಮತ್ತು ವಿಕಾಸ

ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳಲ್ಲಿಯ ಅತಿ ಪುರಾತನ ಕೋಟೆ ಕುಮ್ಮಟದುರ್ಗದಲ್ಲಿದೆ. ಕುಮ್ಮಟದುರ್ಗದಲ್ಲಿ ಗಲಭೆಯಾದಾಗ ಅದನ್ನು ಚಾಲುಕ್ಯ ಸೋಮೇಶ್ವರನು ಕ್ರಿ.ಶ. ೧೦೫೫ರಲ್ಲಿ ಅಡಗಿಸಿದನು. ಕ್ರಿ.ಶ. ೧೦೫೪ರಲ್ಲಿ ಚಾಲುಕ್ಯ ಚೋಳರ ನಡುವೆ ಕೊಪ್ಪಳ (ಕೊಪ್ಪಂ)ನಲ್ಲಿ ನಡೆದ ಯುದ್ಧದ ನಂತರ ಹಿಂದಿರುಗುವಾಗ ಚೋಳ ಅರಸ ರಾಜೇಂದ್ರ ಕುಮ್ಮಟದುರ್ಗವನ್ನು ವಶಪಡಿಸಿಕೊಂಡಿದ್ದಂತೆ ತೋರುತ್ತದೆ. ಇದನ್ನು ಸೋಮೇಶ್ವರನು ವೈರಿಯಿಂದ ಬಿಡಿಸಿದನು. ಹೊಯ್ಸಳ ಅರಸರಾದ ವಿಷ್ಣುವರ್ಧನ (ಕ್ರಿ.ಶ. ೧೧೦೮-೫೨) ಮತ್ತು ಎರಡನೇ ಬಲ್ಲಾಳ (ಕ್ರಿ.ಶ. ೧೧೭೩-೧೨೨೦) ಗೆದ್ದ ಕೋಟೆಗಳ ಪಟ್ಟಿಯಲ್ಲಿ ಕುಮ್ಮಟವು ಉಲ್ಲೇಖಗೊಂಡಿದೆ. ಕುಮ್ಮಟದ ಈಶಾನ್ಯ ದಿಕ್ಕಿನಲ್ಲಿರುವ ಹೊರಕೋಟೆಯನ್ನು ಬಹಳ ದೊಡ್ಡ ದಿಮ್ಮಿಯಾಕಾರದ ಕಲ್ಲುಗಳಿಂದ ಕಟ್ಟಿದೆ. ಇವುಗಳಲ್ಲಿ ಕೆಲವು ಐದು ಮೀ. ಉದ್ದ ಮತ್ತು ಒಂದು ಮೀ. ದಪ್ಪ ಇವೆ. ಅಚ್ಚುಕಟ್ಟಾಗಿ ಕತ್ತರಿಸಿದ ಕಲ್ಲುಗಳ ಮಧ್ಯದಲ್ಲಿ ಸಂದಿಯುಂಟಾಗದಂತೆ ಕಟ್ಟಿದೆ. ಇದರಲ್ಲಿ ಒಂದು 'L' ಆಕಾರದ ಬಾಗಿಲು ಎರಡು ನೇರ ಬಾಗಿಲುಗಳು ಮತ್ತು ಅನೇಕ ಚೌಕಾಕಾರದ ಕೊತ್ತಳಗಳಿವೆ. ಕೋಟೆಯ ಈ ಭಾಗ ಹನ್ನೊಂದು-ಹನ್ನೆರಡನೇ ಶತಮಾನಗಳದ್ದು.

ಗಬ್ಬೂರಿನ ದಕ್ಷಿಣ ಭಾಗದ ಕೋಟೆಯನ್ನು ಗಟ್ಟಿಯಾದ ಕಪ್ಪು ಗುಂಡುಕಲ್ಲುಗಳಿಂದ ಕಟ್ಟಿದೆ. ಕೆಲವು ಗುಂಡುಕಲ್ಲುಗಳನ್ನು ಹಾಗೆಯೇ ಬಳಸಿದರೆ ಕೆಲವು ಕಲ್ಲುಗಳ ಒಂದು, ಎರಡು, ಮೂರು ಅಥವಾ ನಾಲ್ಕು ಬದಿಗಳನ್ನು ಅವಶ್ಯಕತೆಗನುಗುಣವಾಗಿ ಸಪಾಟಾಗಿ ಕೆತ್ತಿ ಬಳಸಿದೆ (ಚಿತ್ರ ೫೮). ಇಂತಹ ರಚನೆಯ ಕೋಟೆಯನ್ನು ಹೊಯ್ಸಳರ ರಾಜಧಾನಿಯಾಗಿದ್ದ ಹಳೇಬೀಡಿನಲ್ಲಿ ನೋಡಬಹುದು.[೧] ಆದುದರಿಂದ ಈ ಕೋಟೆಯ ಕಾಲ ಹನ್ನೆರಡು-ಹದಿಮೂರನೇ ಶತಮಾನಗಳು.

ರಾಯಚೂರಿನ ಒಳಕೋಟೆಯನ್ನು ಬಹಳ ದೊಡ್ಡ ದಿಮ್ಮಿಯಾಕಾರದ ಕಲ್ಲುಗಳಿಂದ ಅಚ್ಚುಕಟ್ಟಾಗಿ, ಕಲ್ಲುಗಳ ಮಧ್ಯದಲ್ಲಿ ಸಂದಿಗಳುಂಟಾಗದಂತೆ ಕಟ್ಟಿದೆ (ಚಿತ್ರಗಳು ೫೯-೬೦). ಇದರಲ್ಲಿಯ ಬಾಗಿಲುಗಳನ್ನು ಮರೆ ಮಾಡಲು ಮುಂದೆ L ಆಕಾರದ ಗೋಡೆಯನ್ನು ಕಟ್ಟಿದೆ (ಚಿತ್ರ ೬೧). ಇದರಲ್ಲಿಯ ಕೊತ್ತಳಗಳು ಚೌಕಾಕಾರವಾಗಿವೆ. ಈ ಕೋಟೆಯನ್ನು ಕಾಕತೀಯ ಪ್ರತಾಪರುದ್ರನ ಕಾಲದಲ್ಲಿ ವಿಠಲನಾಥನು ಕ್ರಿ.ಶ.

೧೨೯೪ರಲ್ಲಿ ಕಟ್ಟಿಸಿದ್ದು ಕೋಟೆಯ ಮೇಲಿನ ಶಾಸನದಿಂದ ತಿಳಿಯುತ್ತದೆ. ಇದೇ ತರಹದ ದೊಡ್ಡ ದಿಮ್ಮಿಯಾಕಾರದ ಕಲ್ಲುಗಳನ್ನು ಬಳಸಿ ಇದೇ ಶೈಲಿಯಲ್ಲಿ ಕಟ್ಟಿದ ಕೋಟೆ ಮಲಿಯಾಬಾದಿನಲ್ಲಿದೆ (ಚಿತ್ರಗಳು ೪೦-೪೭). ಆದುದರಿಂದ ಮಲಿಯಾಬಾದ ಕೋಟೆಯನ್ನು ಸಹ ಹದಿಮೂರನೇ ಶತಮಾನದ ಅಂತ್ಯದಲ್ಲಿ ಕಟ್ಟಿದೆ. ರಾಯಚೂರು ಮತ್ತು ಮಲಿಯಾಬಾದ ಕೋಟೆಗಳ ಬಾಗಿಲುಗಳನ್ನು ಎರಡು ಚೌಕಾಕಾರದ ಕೊತ್ತಳಗಳ ಮಧ್ಯದಲ್ಲಿ ಕಟ್ಟಿದೆ. ಆನೆಗೊಂದಿಯ ಕಲ್ಲಗಸೆಯಲ್ಲಿ ಬಹಳ ಎತ್ತರವಾದ ಚೌಕಾಕಾರದ ಕಂಬಗಳಿವೆ. ಬಾಗಿಲ ಚೌಕಟ್ಟಿನ ಪಕ್ಕದಲ್ಲಿ ಅಗಲವಾದ ಅರೆಗಂಬವಿದೆ (ಚಿತ್ರ ೨೯೬). ಇಂತಹ ಕಂಬ ಮತ್ತು ಅರೆಗಂಬಗಳನ್ನು ಕಾಕತೀಯರ ಕಾಲದ ಕೋಟೆಯ ಬಾಗಿಲುಗಳಲ್ಲಿ,[೨] ತೋರಣಗಳಲ್ಲಿ,[೩] ಮತ್ತು ದೇವಾಲಯಗಳಲ್ಲಿ[೪] ನೋಡಬಹುದು. ಆದುದರಿಂದ ಕಲ್ಲಗಸೆಯನ್ನು ಸಹ ಹದಿಮೂರನೇ ಶತಮಾನದ ಕೊನೆಯಲ್ಲಿ ಕಟ್ಟಿದೆ.

ಕುಮ್ಮಟದುರ್ಗದ ಈಶಾನ್ಯ ಭಾಗದ ಹೊರಕೋಟೆಯನ್ನು ಬಿಟ್ಟು ಉಳಿದ ಕೋಟೆಯನ್ನು ಸುಮಾರಾಗಿ ಚೌಕಾಕಾರದ ದಪ್ಪ ಕಲ್ಲುಗಳಿಂದ ಕಟ್ಟಿದೆ (ಚಿತ್ರಗಳು ೨೪೬-೨೪೯). ಇದರಲ್ಲಿಯ ಕೊತ್ತಳಗಳು ಚೌಕಾಕಾರವಾಗಿವೆ. ಬೊಲ್ಲನ ಗುಡ್ಡ ಮತ್ತು ಕಾಟಪ್ಪನ ಗುಡ್ಡಗಳ ಮಧ್ಯದಲ್ಲಿ ಒಂದು ತೆನೆ ನೆಲದ ಮೇಲೆ ಬಿದ್ದಿದೆ. ಮುಕ್ಕಾಲು ವೃತ್ತಾಕಾರದಲ್ಲಿರುವ ತೆನೆಯನ್ನು ಒಂದೇ ಕಲ್ಲಿನಲ್ಲಿ ಮಾಡಿದೆ. ಕೋಟೆಯ ಕೈಪಿಡಿ ಗೋಡೆಯಲ್ಲಿರಬೇಕಾದ ತೆನೆ ಕೆಳಗೆ ಬಿದ್ದಿದೆ. ಇಲ್ಲಿಯ ಕೆಲವು ಬಾಗಿಲುಗಳು ವೈರಿಗೆ ಕಾಣದಂತೆ ಮಾಡಲು ಬಾಗಿಲ ಮುಂದೆ 'L' ಆಕಾರದ ಗೋಡೆಯನ್ನು ಕಟ್ಟಿದೆ. ನೇರ ಪ್ರವೇಶವಿಲ್ಲದ ಬಾಗಿಲಿನ ಮುಂದಿನ ಆವರಣದಲ್ಲಿ ನೆರೆದ ಶತ್ರುಗಳು ಕೋಟೆಯ ಮೇಲಿನ ರಕ್ಷಕರಿಂದ ಸುಲಭವಾಗಿ ಹತರಾಗುತ್ತಿದ್ದರು. ಪ್ರವೇಶವನ್ನು ಇನ್ನೂ ಕಷ್ಟದಾಯಕವನ್ನಾಗಿ ಮಾಡಲು ಒಂದು ಬಾಗಿಲಿನ ಮುಂದಿನ ಆವರಣದಲ್ಲಿ ಹೆಚ್ಚು ತಿರುವುಗಳನ್ನು ಮಾಡಿದೆ. ಇದು ಸುಮಾರಾಗಿ 'Z' ಆಕಾರದಲ್ಲಿದೆ. ಶತ್ರುಗಳು ಕೋಟೆಯ ಹತ್ತಿರ ಬರುವುದಕ್ಕಿಂತ ಮೊದಲೇ ಹತರಾಗುವಂತೆ ಕೋಟೆಯ ಪ್ರದೇಶಕ್ಕೆ ಬರುವ ದಾರಿಯಲ್ಲಿರುವ ಬೆಟ್ಟಗಳ ಮಧ್ಯದಲ್ಲಿ ಕುದುರೆಕಲ್ಲುಗಳನ್ನು ನೆಡಲಾಗಿದೆ (ಚಿತ್ರಗಳು ೨೫೦-೨೫೧). ಕುದುರೆಗಳು ಈ ಕಲ್ಲುಗಳನ್ನು ದಾಟುವಾಗ ಮುಗ್ಗರಿಸಿ ಬೀಳುತ್ತಿದ್ದವು. ಆಗ ಗೊಂದಲಕ್ಕೀಡಾದ ಶತ್ರುಗಲು ಬೆಟ್ಟದ ಮೇಲೆ ಕುಳಿತ ರಕ್ಷಣಾ ಪಡೆಯಿಂದ ಹತರಾಗುತ್ತಿದ್ದರು. ಈ ಕೋಟೆಯನ್ನು ಕಂಪಿಲರಾಯನ ಕಾಲದಲ್ಲಿ ಹದಿನಾಲ್ಕನೇ ಶತಮಾನದ ಆರಂಭದ ವರ್ಷಗಳಲ್ಲಿ ಕಟ್ಟಿದೆ. ಕಂಪಿಲರಾಯ ಮತ್ತು ದಿಲ್ಲಿ ಸುಲ್ತಾನನ ಸೈನ್ಯಗಳ ನಡುವೆ ಕ್ರಿ.ಶ. ೧೩೧೭ರಲ್ಲಿ ಇಲ್ಲಿ ಯುದ್ಧ ನಡೆದದ್ದು ಇಲ್ಲಿಯ ಎರಡು ವೀರಗಲ್ಲುಗಳ ಮೇಲಿನ ಶಾಸನಗಳಿಂದ ತಿಳಿಯುತ್ತದೆ (ಚಿತ್ರಗಳು ೨೭೩-೨೭೪).

ಆನೆಗೊಂದಿಯ ಹೊನ್ನಗಸೆಯನ್ನು ಎರಡು ಚೌಕಾಕಾರದ ಕೊತ್ತಳಗಳ ಮಧ್ಯದಲ್ಲಿ ಕಟ್ಟಿದೆ. ಇದರ ಕಂಬಗಳು ದಪ್ಪವಾಗಿದ್ದು ಚೌಕಾಕಾರವಾಗಿವೆ. ಬಾಗಿಲ ತೋಳುಗಳು ಅಗಲವಾಗಿದ್ದು ವಿವಿಧ ಶಾಖೆಗಳನ್ನು ಹೊಂದಿವೆ. ಬಾಗಿಲ ಮೇಲೆ ಅರ್ಧ ವೃತ್ತಾಕಾರದ ಮೇಲ್ಭಾಗವುಳ್ಳ ಏಕಶಿಲೆಯ ಒಂದು ತೆನೆಯಿದೆ. ಆನೆಗೊಂದಿ ವಿಜಯನಗರ ಅರಸರ ಮೊದಲ ರಾಜಧಾನಿಯಾಗಿತ್ತು. ಈ ಬಾಗಿಲನ್ನು ವಿಜಯನಗರ ಸಾಮ್ರಾಜ್ಯದ ಆರಂಭದ ವರ್ಷಗಳಲ್ಲಿ ಅಂದರೆ ಕ್ರಿ.ಶ.೧೩೩೬ ರಿಂದ ೧೩೫೦ರ ಮಧ್ಯದಲ್ಲಿ ಕಟ್ಟಿದೆ. ಚೌಕಾಕಾರದ ದಪ್ಪ ಕಂಬಗಳ ಮತ್ತು ಅಲಂಕಾರಮಯವಾದ ಒಳಮಾಳಿಗೆಯುಳ್ಳ ಅಂಬಿಗರ ಬಾಗಿಲನ್ನು ಹದಿನಾಲ್ಕನೇ ಶತಮಾನದ ಉತ್ತರಾರ್ಧದಲ್ಲಿ ಕಟ್ಟಿದೆ. ಈ ಬಾಗಿಲು ಸಹ ಎರಡು ಚೌಕಾಕಾರದ ಕೊತ್ತಳಗಳ ಮಧ್ಯದಲ್ಲಿದೆ. ಆನೆಗೊಂದಿ ಕೋಟೆಯಲ್ಲಿ ಮೂರು ತರಹದ ರಚನೆಯ ಗೋಡೆಗಳಿವೆ. ಚೌಕಾಕಾರದ ದಪ್ಪ ಕಲ್ಲುಗಳನ್ನು ಬಳಸಿ, ಬದಿಗಳಲ್ಲಿ ಸಂದಿಗಳಿಲ್ಲದಂತೆ ಅಚ್ಚುಕಟ್ಟಾಗಿ ಜೋಡಿಸಿ ಕಟ್ಟಿದ ಕೋಟೆಗೋಡೆ ಹದಿನಾಲ್ಕನೇ ಶತಮಾನದ್ದು. ಇದೇ ಅಳತೆಯ ಕಲ್ಲುಗಳನ್ನು ಬಳಸಿದ್ದರೂ ಬದಿಗಳಲ್ಲಿ ಸಂದಿಗಳಿದ್ದು ಅವುಗಳಲ್ಲಿ ಕಲ್ಲಿನ ಚಕ್ಕೆಗಳನ್ನು ಇಟ್ಟು ಕಟ್ಟಿದ ಕೋಟೆಗೋಡೆ ವಿಜಯನಗರ ಉಚ್ಛ್ರಾಯ, ಅಂದರೆ ಹದಿನೈದರಿಂದ ಹದಿನಾರನೇ ಶತಮಾನದ ಮೊದಲ ಪಾದದ ಮಧ್ಯದ ಕಾಲದಲ್ಲಿ ಕಟ್ಟಿದ್ದು.

ವಿಜಯನಗರ ಕಾಲದಲ್ಲಿ ಉಪಯೋಗಿಸಿದ ಕಲ್ಲುಗಳು ಹೊರಭಾಗದಲ್ಲಿ ಚೌಕಾಕಾರವಾಗಿ ಕಂಡರೂ, ಅವು ಗೋಡೆಯಲ್ಲಿ ಆಳವಾಗಿ ಒಳಗೆ ಸೇರಿರುವುದರಿಂದ ಗೋಡೆಗೆ ಹೆಚ್ಚಿನ ಭದ್ರತೆಯನ್ನು ನೀಡುತ್ತವೆ. ಒಳಗಿನ ತುದಿ ಚೌಕಾಕಾರವಾಗಿರದೆ ಬೆಣೆಯಾಕಾರದಲ್ಲಿ ಚೂಪಾಗಿರುತ್ತದೆ. ಈ ವಿಶಿಷ್ಟ ಆಕಾರದಿಂದಕಲ್ಲಿನ ಭಾರ ಕಡಿಮೆಯಾಗುತ್ತದೆ. ಎರಡು ತುದಿಗಳು ಚೌಕಾಕಾರವಾಗಿ ದಪ್ಪಗಿದ್ದರೆ ಭಾರ ಹೆಚ್ಚಾಗುತ್ತದೆ. ಕಡಿಮೆ ಭಾರದ ಕಲ್ಲುಗಳನ್ನು ಸಾಗಿಸುವುದು ಮತ್ತು ಕೋಟೆಯ ಮೇಲ್ಭಾಗಕ್ಕೆ ಎತ್ತುವುದು ಸುಲಭ. ಗೋಡೆಯ ಒಳ ಭಾಗದಲ್ಲಿ ಇಂತಹ ಕಲ್ಲುಗಳ ಮಧ್ಯದಲ್ಲಿ ಉಂಟಾಗುವ ಸಂದಿಗಳನ್ನು ಚಿಕ್ಕ ಚಿಕ್ಕ ಕಲ್ಲು ಮತ್ತು ಮಣ್ಣಿನಿಂದ ತುಂಬಿದೆ. ಗೋಡೆಯ ಒಳಮೈಯನ್ನು ಚಿಕ್ಕ ಕಲ್ಲುಗಳಿಂದ ಕಟ್ಟಿದೆ. ವಿಜಯನಗರ ಪೂರ್ವ ಮತ್ತು ವಿಜಯನಗರ ಕಾಲದಲ್ಲಿ ಕಟ್ಟಿದ ಬಾಗಿಲುಗಳು ಒಂದು ಶೈಲಿಯಲ್ಲಿ ಕಂಬ ಮತ್ತು ತೊಲೆಗಳಿಂದ ನಿರ್ಮಾಣ ಗೊಂಡಿವೆ.

ಜಲದುರ್ಗದ ಕೋಟೆಯನ್ನು ಉದ್ದವಾದ ದಿಮ್ಮಿಯಾಕಾರದ ಕಲ್ಲುಗಳಿಂದ ಕಟ್ಟಿದೆ. ಈ ಕೋಟೆಯನ್ನು ನಂತರ ಚೌಕಾಕಾರದ ದಪ್ಪ ಕಲ್ಲುಗಳಿಂದ ದುರಸ್ತಿ ಮಾಡಿದೆ. ಹನ್ನೆರಡು-ಹದಿಮೂರನೇ ಶತಮಾನಗಳಲ್ಲಿ

ಕಟ್ಟಿದ ಕೋಟೆಯನ್ನು ಹದಿನೈದು-ಹದಿನಾರನೇ ಶತಮಾನದಲ್ಲಿ ದುರಸ್ತಿಮಾಡಿ ಬಲಪಡಿಸಿದೆ. ಕಮಾನು ಮತ್ತು ಗುಮ್ಮಟಾಕಾರದ ಒಳಮಾಳಿಗೆಯ ಬಾಗಿಲುಗಳು ಕೋಟೆಯು ಮುಸ್ಲಿಮ್ ಅರಸರ ವಶದಲ್ಲಿದ್ದಾಗ ಕಟ್ಟಿದೆ.[1]

ವಿಜಯನಗರ ಕಾಲದ ದಪ್ಪ ಚೌಕಾಕಾರದ ಕಲ್ಲಿನ ಗೋಡೆ ಮತ್ತು ಚೌಕಾಕಾರದ ಕೊತ್ತಳಗಳನ್ನು ಮುದುಗಲ್ಲು, ರಾಯಚೂರು, ಕೊಪ್ಪಳ ಮತ್ತು ಮಾಸ್ಕಿ ಕೋಟೆಗಳಲ್ಲಿ ನೋಡುತ್ತೇವೆ. ಹಿಂದು ಶೈಲಿಯಲ್ಲಿ ಕಟ್ಟಿದ ಈ ಕೋಟೆಗಳು ಮುಸ್ಲಿಮ್ ಶೈಲಿಯ ಪ್ರಭಾವಕ್ಕೆ ಒಳಗಾಗಿವೆ. ಬಹಮನಿ ಮತ್ತು ಆದಿಲ್ ಶಾಹಿ ಅರಸರ ವಶದಲ್ಲಿದ್ದಾಗ ಅವರು ಸಹ ಈ ಕೋಟೆಗಳ ಕೆಲವು ಭಾಗಗಳನ್ನು ಕಟ್ಟಿಸಿದ್ದಾರೆ. ಮತ್ತು ಕೆಲವು ಭಾಗಗಳನ್ನು ದುರಸ್ತಿ ಮಾಡಿದ್ದಾರೆ.

ಮುದುಗಲ್ಲು ಕೋಟೆಯಲ್ಲಿ ವಿಜಯನಗರ ಅರಸ ನರಸನಾಯಕನ ಕಾಲದಲ್ಲಿ ಸಾಳುವ ತಿಮ್ಮಯ್ಯನು ಕ್ರಿ.ಶ. ೧೪೦೨ರಲ್ಲಿ ಒಂದು ಬಾವಿ ಮತ್ತು ಅದೇ ಕಾಲದಲ್ಲಿ ಎರಡು ಕೊತ್ತಳಗಳನ್ನು ಕಟ್ಟಿಸಿದ್ದನ್ನು ಶಾಸನಗಳು ತಿಳಿಸುತ್ತವೆ (ಚಿತ್ರ ೧೮೮). ಚೌಕಾಕಾರವಾಗಿರುವ ಈ ಕೊತ್ತಳಗಳ ಮೇಲೆ ವಿಜಯನಗರದ ರಾಜ ಲಾಂಛನವಾದ ವರಾಹದ ಚಿತ್ರಗಳಿವೆ. ರಾಯಚೂರಿನ ಹೊರಕೋಟೆಯಲ್ಲಿ ಅನೇಕ ಚೌಕಾಕಾರದ ಕೊತ್ತಳಗಳಿವೆ.

ಕೃಷ್ಣದೇವರಾಯ ರಾಯಚೂರು ಕೋಟೆಯನ್ನು ಕ್ರಿ.ಶ. ೧೫೨೦ರಲ್ಲಿ ಗೆದ್ದಾಗ ಈಗ ನವರಂಗ್ ದರ್ವಾಜ ಎಂದು ಕರೆಯುವ ಬಾಗಿಲನ್ನು ಕಟ್ಟಿಸಿದ್ದಾನೆ. ಈ ಬಾಗಿಲ ಸಂಕೀರ್ಣದಲ್ಲಿ ನಾಲ್ಕು ಬಾಗಿಲುಗಳಿವೆ. ಇವು ಬೇರೆ ಬೇರೆ ದಿಕ್ಕುಗಳಿಗೆ ಅಭಿಮುಖವಾಗಿರುವುದರಿಂದ ಪ್ರವೇಶ ಮಾರ್ಗದಲ್ಲಿ ಹಲವು ತಿರುವುಗಳುಂಟಾಗುತ್ತವೆ. ಬಾಗಿಲು ಮತ್ತು ಕೈಸಾಲೆಯಲ್ಲಿ ಕಮಾನುಗಳಿವೆ. ಕಂಬಗಳು, ಕಮಾನುಗಳು ಮತ್ತು ಗೋಡೆಯ ಮೇಲ್ಭಾಗದಲ್ಲಿ ರಾಮಾಯಣ, ಭಾಗವತ ಸನ್ನಿವೇಶಗಳ ಶಿಲ್ಪಗಳಲ್ಲದೆ ವಿಜಯನಗರ ಶೈಲಿಯ ಉಡುಗೆ ತೊಡುಗೆಯ ಅರಸನ ಶಿಲ್ಪಗಳೂ ಇವೆ. ಗೋಡೆಯ ಮೇಲ್ಭಾಗದಲ್ಲಿ ಬೋದಿಗೆಗಳ ಮೇಲೆ ನಿಂತಿರುವ ಮುಂಚಾಚು (projecting balcony)ಗಳಿವೆ. ಈ ಬಾಗಿಲನ್ನು ಹಿಂದು ಮತ್ತು ಮುಸ್ಲಿಮ್ ಶೈಲಿಯಲ್ಲಿ ಕಟ್ಟಿದೆ (ಚಿತ್ರಗಳು ೧೯-೨೨). ಹಿಂದು ಶೈಲಿಯ ಕೋಟೆಯ ಬಾಗಿಲ ಸಂಕೀರ್ಣದಲ್ಲಿ ಒಂದೇ ಬಾಗಿಲಿದ್ದು ಅದರ ಮುಂದೆ ಒಂದು, ಎರಡು ಅಥವಾ ಮೂರು ತಿರುವುಗಳ ಪ್ರವೇಶ ಮಾರ್ಗವಿರುತ್ತದೆ. ಒಂದು ಬಾಗಿಲ ಸಂಕೀರ್ಣದಲ್ಲಿ ಒಂದಕ್ಕಿಂತ ಹೆಚ್ಚು ಬಾಗಿಲುಗಳಿರುವುದಿಲ್ಲ. ಒಂದು ಬಾಗಿಲ ಸಂಕೀರ್ಣದಲ್ಲಿ ಒಂದಕ್ಕಿಂತ ಹೆಚ್ಚು ಬಾಗಿಲುಗಳಿದ್ದು ಹೆಚ್ಚು ತಿರುವುಗಳಿರುವುದು ಹೆಚ್ಚಿನ ಭದ್ರತೆ ನೀಡುತ್ತದೆ. ಬಾಗಿಲ ಮುಂದಿನ ತಿರುವು ಮತ್ತು ಆವರಣಗಳ ಮಧ್ಯ

ಸಿಕ್ಕಿಹಾಕಿಕೊಂಡ ಶತ್ರು ರಕ್ಷಣೆ ಪಡೆಯಿಂದ ತಪ್ಪಿಸಿಕೊಳ್ಳುವುದು ಕಷ್ಟಕರ. ಇಂತಹ ಹಲವು ಬಾಗಿಲುಗಳ ಸಂಕೀರ್ಣಗಳನ್ನು ಬಹಮನಿ, ಆದಿಲ್‌ಶಾಹೀ ಮತ್ತು ಬರೀದ್ ಶಾಹೀ ಅರಸರು ಕಟ್ಟಿಸಿದ ಗುಲಬರ್ಗ, ಬಿಜಾಪುರ ಮತ್ತು ಬೀದರ ಕೋಟೆಗಳಲ್ಲಿ ನೋಡಬಹುದು.[೫] ಕಮಾನುಗಳು ಮತ್ತು ಅವುಗಳನ್ನು ಹೊತ್ತ ಹಲವು ದಪ್ಪ ಕಲ್ಲುಗಳಿಂದ ನಿರ್ಮಿತ ಕಂಬಗಳು, ಮುಂಚಾಚುಗಳು ಸಹ ಮುಸ್ಲಿಮ್ ಶೈಲಿಯವು. ಮುದುಗಲ್ಲು ಕೋಟೆಯ ಕಾಟೀ ದರ್ವಾಜ ಸಂಕೀರ್ಣದಲ್ಲಿರುವ ಮೊಗಸಾಲೆಯನ್ನು ವಿಜಯನಗರ ಅರಸ ರಾಮರಾಯನ ಕಾಲದಲ್ಲಿ ಕ್ರಿ.ಶ. ೧೫೬೦ ಪೆಂಗಳಪ್ಪ ನಾಯಕ ಕಟ್ಟಿಸಿದನೆಂದು ಅಲ್ಲಿಯ ಶಾಸನಗಳಿಂದ ತಿಳಿಯುತ್ತದೆ. ಎರಡು ಚೌಕಾಕಾರದ ಕೊತ್ತಳಗಳ ಮಧ್ಯದಲ್ಲಿರುವ ಈ ಬಾಗಿಲು ಕಂಬ ತೊಲೆಗಳಿಂದ ನಿರ್ಮಾಣವಾಗಿದೆ. ಕಂಬಗಳು ವಿಜಯನಗರ ಶೈಲಿಯಲ್ಲಿ ಶಿಲ್ಪಗಳಿಂದ ಅಲಂಕೃತಗೊಂಡಿವೆ. ಬಾಗಿಲ ತೋಳುಗಳ ಮೇಲೆ ದ್ವಾರಪಾಲರಿದ್ದಾರೆ (ಚಿತ್ರ ೧.೨೬). ಕೊತ್ತಳಗಳ ಮೇಲೆ ಮುಂಚಾಚುಗಳಿವೆ (ಚಿತ್ರ ೧.೩೧). ಪ್ರವೇಶದ ಪಕ್ಕ ಕಟ್ಟೆಯ ಮೇಲಿನ ಅಂಕಣಗಳಲ್ಲಿ ಕಂಬಗಳ ಮೇಲಿನ ಎರಡು ಬೋದಿಗೆಗಳನ್ನು ಕ್ರಮೇಣವಾಗಿ ಮುಂದೆ ಚಾಚಿ, ಕಮಾನುಗಳನ್ನು ನಿರ್ಮಿಸಿದೆ. ಮೇಲಿನ ತೊಲೆಯ ಕೆಳಭಾಗವನ್ನು ಕಮಾನಿನಾಕಾರದಲ್ಲಿ ಕತ್ತರಿಸಿ ಮೂರು ವಲಯಗಳ (trefoil) ಕಮಾನುಗಳನ್ನು ನಿರ್ಮಿಸಿದೆ. ಮುಸ್ಲಿಮ್ ಶೈಲಿಯ ನೆತ್ತಿಗಲ್ಲು (Keystone) ಇಲ್ಲದೆ ಕಂಬ ತೊಲೆಗಳಿಂದ ಕಮಾನುಗಳನ್ನು ನಿರ್ಮಿಸಿರುವುದು ವಿಶೇಷವಾಗಿದೆ (ಚಿತ್ರ ೧.೨೭). ಬಾಗಿಲ ಮೇಲ್ಭಾಗದಲ್ಲಿ ಕಾವಲುಗಾರರಿಗಾಗಿ ಕಟ್ಟಿದ ಕೊಠಡಿಯಿದೆ (ಚಿತ್ರ ೧.೩೨).

ಬಹಮನಿ ಮತ್ತು ಆದಿಲ್ ಶಾಹಿ ಅರಸರು ರಾಯಚೂರು, ಮಾನ್ವಿ, ಮುದುಗಲ್ಲು ಮತ್ತು ಕೊಪ್ಪಳ ಕೋಟೆಗಳ ಕೆಲವು ಭಾಗಗಳ ನಿರ್ಮಾಣ ಮತ್ತು ಕೆಲವು ಭಾಗಗಳ ದುರಸ್ತಿಮಾಡಿದ್ದು ಕೋಟೆಗಳ ಶಾಸನಗಳಲ್ಲಿ ದಾಖಲಾಗಿದೆ. ಗುಲ್ಬರ್ಗದ ಬಹಮನಿ ಅರಸ ಫಿರೋಜ್ ಶಾಹನು ಮಾನ್ವಿ ಕೋಟೆಯನ್ನು ಕ್ರಿ.ಶ. ೧೪೦೬-೦೭ರಲ್ಲಿ ದುರಸ್ತಿ ಮಾಡಿದ. ಅದೇ ವಂಶದ ಮೂರನೇ ಮಹಮ್ಮದ್ ಶಾಹನು ರಾಯಚೂರು ಕೋಟೆಯ ಕಾಟೀ ದರ್ವಾಜ ಸಂಕೀರ್ಣದ ಕಮಾನಿ ದರ್ವಾಜವನ್ನು ಕ್ರಿ.ಶ. ೧೪೬೮-೬೯ರಲ್ಲಿ ಮತ್ತು ಮಕ್ಕಾ ದರ್ವಾಜವನ್ನು ಕ್ರಿ.ಶ. ೧೪೬೯-೭೦ರಲ್ಲಿ ಕಟ್ಟಿಸಿದ.

ಬಿಜಾಪುರದ ಆದಿಲ್ ಶಾಹಿ ವಂಶದ ಇಸ್ಮಾಯಿಲ್ ಆದಿಲ್ ಶಾಹನ ಕಾಲದಲ್ಲಿ ರಾಯಚೂರಿನ ಹೊರಕೋಟೆಯ ಬುರ್ಜ್ ಅಲ್ ಫತ್‌ನ್ನು ಕ್ರಿ.ಶ. ೧೫೧೫ರಲ್ಲಿ ಕಟ್ಟಲಾಯಿತು. ಒಂದನೇ ಇಬ್ರಾಹಿಮ್ ಆದಿಲ್ ಶಾಹನ ಕಾಲದಲ್ಲಿ ಅದೇ ಕೋಟೆಯ ಮಲ್ಲು ಆದಿಲ್ ಖಾನ್ ಮತ್ತು ಇಸ್ಮಾಯಿಲ್ ಹೆಸರುಗಳುಳ್ಳ

ಶಾಸನದ ಬುರುಜನ್ನು ಕ್ರಿ.ಶ. ೧೫೩೪-೩೫ರಲ್ಲಿ, ಬುರ್ಜ್-ಇ-ಹಮಲ್ ಬುರುಜನ್ನು ಕ್ರಿ.ಶ. ೧೫೪೬-೪೭ರಲ್ಲಿ ಮತ್ತೊಂದು ಬುರುಜನ್ನು ಕ್ರಿ.ಶ. ೧೫೪೮-೪೯ರಲ್ಲಿ, ಕಾಟೀ ದರ್ವಾಜವನ್ನು ಕ್ರಿ.ಶ.೧೫೫೦ರಲ್ಲಿ ಮತ್ತು ೧೫೫೧ರಲ್ಲಿ ಕೆರೆ (ಸರೋವರ)ಯ ಬಾಗಿಲನ್ನು ಕಟ್ಟಿಸಲಾಯಿತು. ಒಂದನೇ ಅಲಿ ಆದಿಲ್‌ಶಾಹನ ಕಾಲದಲ್ಲಿ ಅದೇ ಕೋಟೆಯ ಶಾಹ ಬುರುಜನ್ನು ಕ್ರಿ.ಶ.೧೫೬೬ರಲ್ಲಿ ಮತ್ತು ತಾಹಿರ್‌ಖಾನ್ ಬುರುಜನ್ನು ಕ್ರಿ.ಶ. ೧೫೭೦-೭೧ರಲ್ಲಿ ಕಟ್ಟಿಸಲಾಯಿತು. ಇದೇ ಅರಸರ ಕಾಲದಲ್ಲಿ ಮುದುಗಲ್ಲು ಕೋಟೆಯ ಅಲಿ ಬುರುಜನ್ನು ಕ್ರಿ.ಶ. ೧೫೭೪-೭೫ರಲ್ಲಿ ಕಟ್ಟಲಾಯಿತು. ಈತನ ಕಾಲದಲ್ಲಿ ಪ್ರಾರಂಭವಾದ ಅದೇ ಕೋಟೆಯ ಫತೆ ಜಂಗು ಬುರುಜಿನ ನಿರ್ಮಾಣ ಆತನ ಮರಣದ ನಂತರ ಕ್ರಿ.ಶ. ೧೫೮೯ರಲ್ಲಿ ಪೂರ್ಣಗೊಂಡಿತು. ಎರಡನೇ ಇಬ್ರಾಹಿಮ್ ಆದಿಲ್ ಶಾಹನಕಾಲದಲ್ಲಿ ರಾಯಚೂರು ಹೊರಕೋಟೆಯ ದಿಡ್ಡಿ, ಪರ್‌ಕೋಟ, ಹಿಸಾರ್ ಮತ್ತು ಕಂದಕ ಕ್ರಿ.ಶ. ೧೫೮೨-೮೩ರಲ್ಲಿ, ಒಂದು ಬುರುಜು ಕ್ರಿ.ಶ. ೧೬೦೯ರಲ್ಲಿ ಮತ್ತೊಂದು ಬುರುಜು ಕ್ರಿ.ಶ. ೧೬೧೯ರಲ್ಲಿ ನಿರ್ಮಾಣಗೊಂಡವು. ಇದೇ ಅರಸರ ಕಾಲದಲ್ಲಿ ಕ್ರಿ.ಶ. ೧೬೦೩ರಲ್ಲಿ ಕೊಪ್ಪಳದ ಹೊರ ಕೋಟೆ, ಹೊರಕೋಟೆಯ ಪೂರ್ವ ಬಾಗಿಲು ಮತ್ತು ಬುರುಜುಗಳ ನಿರ್ಮಾಣವಾಯಿತು. ಇದೇ ಅರಸನ ಕಾಲದಲ್ಲಿ ಕ್ರಿ.ಶ. ೧೬೦೩-೦೪ರಲ್ಲಿ ಈತನ ಅಧಿಕಾರಿ ಮಲಿಕ ಮುರಾದನ ಅನೇಕ ಶಾಸನಗಳು ಮುದುಗಲ್ಲು ಕೋಟೆಯ ಮೇಲಿವೆ. ಮಲಿಕ ಮುರಾದನು ಕ್ರಿ.ಶ. ೧೫೯೧ ರಿಂದ ೧೬೧೧ರ ಮಧ್ಯದಲ್ಲಿ ಮುದುಗಲ್ಲು ಕೋಟೆಯ ಫತೆ ದರ್ವಾಜ, ದಿಡ್ಡಿ, ಅನೇಕ ಬುರುಜು ಮತ್ತು ನಿಟುಗಳನ್ನು ಕಟ್ಟಿಸಿದ್ದನ್ನು ಈ ಶಾಸನಗಳು ಉಲ್ಲೇಖಿಸುತ್ತವೆ. ಮಹಮ್ಮದ್ ಆದಿಲ್ ಶಾಹನ ಕಾಲದಲ್ಲಿ ರಾಯಚೂರು ಹೊರಕೋಟೆಯ ಕಾಟೀ ದರ್ವಾಜ ಸಂಕೀರ್ಣದ ಒಂಬತ್ತು ಕಮಾನುಗಳು ಮತ್ತು ಅವುಗಳ ಮೇಲಿನ ಕೊಠಡಿ (ಅರಮನೆ) ಮತ್ತು ಅಂಬರ್‌ಖಾನ ಕ್ರಿ.ಶ. ೧೬೨೨-೨೩ರಲ್ಲಿ ಮತ್ತು ಖಾದೀರಿಯ ಬುರುಜು ಕ್ರಿ.ಶ. ೧೬೨೯-೩೦ರಲ್ಲಿ ನಿರ್ಮಾಣ ಗೊಂಡವು. ಎರಡನೇ ಅಲಿಆದಿಲ್ ಶಾಹನ ಕಾಲದಲ್ಲಿ ಮುದುಗಲ್ ಕೋಟೆಯಲ್ಲಿ ಗಗನ್ ಮಹಲ್‌ನ ನಿರ್ಮಾಣ ಕ್ರಿ.ಶ. ೧೬೪೩ರಲ್ಲಿ ಮತ್ತು ರಾಯಚೂರು ಹೊರಕೋಟೆಯ ಖಿಶ್ರಾ ಬುರುಜಿನ ನಿರ್ಮಾಣ ಕ್ರಿ.ಶ. ೧೬೭೦-೭೧ರಲ್ಲಿ ಆಯಿತು. ಸಿಕಂದರ್ ಆದಿಲ್ ಶಾಹನ ಕಾಲದಲ್ಲಿ ಕ್ರಿ.ಶ. ೧೬೭೩-೭೪ರಲ್ಲಿ ರಾಯಚೂರು ಒಳಕೋಟೆಯ ಬಾಗಿಲನ್ನು ಕಟ್ಟಿಸಲಾಯಿತು.

ಬಹಮನಿ ಮತ್ತು ಆದಿಲ್‌ಶಾಹಿ ಅರಸರ ಕಾಲದಲ್ಲಿ ಕಟ್ಟಿದ ಕೋಟೆಗಳಲ್ಲಿಯ ಬಾಗಿಲುಗಳು ಕಮಾನಿನಾಕಾರದಲ್ಲಿವೆ. ಇವುಗಳಲ್ಲಿ ಕೆಲವಕ್ಕೆ ಬಾಗಿಲ ಚೌಕಟ್ಟುಗಳಿದ್ದು ಮೇಲೆ ಕುರುಡು (blind) ಕಮಾನುಗಳಿವೆ. ಪ್ರವೇಶದ ಪಕ್ಕದ ಕಟ್ಟೆಗಳ ಮೇಲೆ ಕಂಬಗಳನ್ನು ಅನೇಕ ದಪ್ಪ ಕಲ್ಲುಗಳಿಂದ ಕಟ್ಟಿದೆ. ಒಳ

ಮಾಳಿಗೆ ಕಮಾನಿನಾಕಾರ (vault) ಅಥವಾ ಗುಮ್ಮಟಾಕಾರದಲ್ಲಿವೆ. ಬಾಗಿಲುಗಳು ಮತ್ತು ಅವುಗಳ ಮುಂದಿನ ಆವರಣ ಸೇರಿ ದೊಡ್ಡ ಸಂಕೀರ್ಣಗಳಾಗಿವೆ. ಪ್ರತಿ ಬಾಗಿಲ ಸಂಕೀರ್ಣದಲ್ಲಿ ಎರಡು, ಮೂರು ಅಥವಾ ನಾಲ್ಕು ಬಾಗಿಲುಗಳಿವೆ. ಇವು ಒಂದರ ಮುಂದೆ ಮತ್ತೊಂದು ಬೇರೆ ಬೇರೆ ದಿಕ್ಕುಗಳಿಗೆ ಅಭಿಮುಖವಾಗಿವೆ (ಚಿತ್ರಗಳು ೧೫, ೧೮, ೧೨೧, ೧೩೩ ). ಇದಕ್ಕೂ ಹಿಂದೆ ಕಂಬ-ತೊಲೆಗಳಿಂದ ಹಿಂದು ಶೈಲಿಯಲ್ಲಿ ಕಟ್ಟಿದ ಬಾಗಿಲುಗಳಿಂದ ಇವು ತೀರ ಭಿನ್ನವಾಗಿವೆ. ಮುದುಗಲ್ಲು ಕೋಟೆಯಲ್ಲಿ ವಿಜಯನಗರ ಅರಸರ ಕಾಲದಲ್ಲಿ ಕಟ್ಟಿದ ಮೊಗಸಾಲೆಯಲ್ಲಿ ಬೋದಿಗೆ ಮತ್ತು ತೊಲೆಗಳಿಂದ ಕಮಾನು ರಚಿಸಿದ್ದನ್ನು ಈಗಾಗಲೇ ಗಮನಿಸಿದ್ದೇವೆ (ಚಿತ್ರ ೧೨೭). ಅದೇ ರೀತಿ ಆದಿಲ್ ಶಾಹಿ ಅರಸರ ಕಾಲದಲ್ಲಿ ರಾಯಚೂರಿನಲ್ಲಿ ಕಟ್ಟಿಸಿದ ಪರಕೋಟ ದರ್ವಾಜದಲ್ಲಿ ಗೋಡೆಯ ಕಲ್ಲುಗಳನ್ನು ಕ್ರಮೇಣವಾಗಿ ಮುಂದೆ ಚಾಚಿ, ಮೇಲೆ ತೊಲೆಯನ್ನು ಹಾಕಿ ಕಮಾನನ್ನು ನಿರ್ಮಿಸಿದೆ. ತೊಲೆಯ ಕೆಳಭಾಗವನ್ನು ಚಿಕ್ಕದಾದ ಕಮಾನಿನ ಆಕಾರದಲ್ಲಿ ಕತ್ತರಿಸಿದೆ (ಚಿತ್ರ ೩೨). ಈ ಎರಡು ಬಾಗಿಲುಗಳ ಕಮಾನುಗಳಲ್ಲಿ ಮುಸ್ಲಿಮ್ ಶೈಲಿಯಲ್ಲಿ ಕಡ್ಡಾಯವಾಗಿ ಇರುವ ನೆತ್ತಿಗಲ್ಲು (Keystone) ಇಲ್ಲದಿರುವುದು ಇರುವುದು ವಿಶೇಷವಾಗಿದೆ. ಆಯತಾಕಾರದ ಬಾಗಿಲುಗಳು ಕಮಾನಿನಾಕಾರ ಹೊಂದುವ ಎರಡು ಹಂತಗಳ ಮಧ್ಯದ ಹಂತವನ್ನು ಇವು ಸೂಚಿಸುತ್ತವೆ. ಬಾಗಿಲನ್ನು ವೈರಿಯ ಕಣ್ಣಿನಿಂದ ಮರೆ ಮಾಡಲು ಹಿಂದೆ ಕಟ್ಟುತ್ತಿದ್ದ 'L' ಆಕಾರದ ಗೋಡೆ ಈ ಕಾಲದಲ್ಲಿ ವೃತ್ತಾಕಾರವಾಗಿದೆ (ಚಿತ್ರ ೧೪೦).

ವಿಜಯನಗರದ ಕಾಲದವರೆಗಿನ ಕೋಟೆಗಳಲ್ಲಿ ಚೌಕಾಕಾರ ಅಥವಾ ಆಯತಾಕಾರದ ಕೊತ್ತಳಗಳಿವೆ. ಬಹಮನಿ ಮತ್ತು ಆದಿಲ್ ಶಾಹಿ ಕಾಲದಲ್ಲಿ ಕಟ್ಟಿದ ಕೋಟೆಗಳಲ್ಲಿ ವೃತ್ತಾಕಾರದ (ಚಿತ್ರಗಳು ೧೦, ೧೨, ೨೪, ೧೧೪, ೧೧೭, ೨೦೯, ೨೧೧) ಮತ್ತು ಬಹುಭುಜಾಕೃತಿಯ ಕೊತ್ತಳ ಅಥವಾ ಬುರುಜುಗಳಿವೆ. ಬಹುಭುಜಾಕೃತಿಯ ಕೊತ್ತಳಗಳು ಕೊಪ್ಪಳದಲ್ಲಿವೆ. ಈ ಕೋಟೆಗಳಲ್ಲಿ ತೋಪುಗಳನ್ನು ಹೆಚ್ಚಾಗಿ ಉಪಯೋಗಿಸಿರುವುದರಿಂದ ಕೊತ್ತಳಗಳ ಮೇಲೆ ತೋಪುಗಳಿಗಾಗಿ ವೇದಿಕೆಗಳನ್ನು ನಿರ್ಮಿಸಿದೆ (ಚಿತ್ರ ೧೫೭). ವೃತ್ತಾಕಾರದ ಬುರುಜುಗಳು ಇನ್ನೂ ಅಭಿವೃದ್ಧಿ ಹೊಂದಿ ಒಂದರಲ್ಲೇ ಅನೇಕ ವೃತ್ತಾಕಾರದ ವಲಯಗಳುಂಟಾಗಿ ಬಹುವಲಯಗಳ (lobed) ವೃತ್ತಾಕಾರವಾಗುತ್ತದೆ. ಇಂತಹ ಕೊತ್ತಳಗಳನ್ನು ಅಹಮದಾಬಾದಿನ ಕೋಟೆಯಲ್ಲಿ ನೋಡಬಹುದು.[೬] ಕೊಪ್ಪಳ ಕೋಟೆಯ ಜೋಗಿ ಬಂಡೆಯ ಬುರುಜು ಈ ಮಾದರಿಯದಾಗಿದೆ. ಕೋಟೆಗೋಡೆಗೆ ರಕ್ಷಣೆ ನೀಡಲು ಹೊರಭಾಗದಲ್ಲಿ ಅದಕ್ಕೆ ಸಮಾನಾಂತರದಲ್ಲಿ ಮತ್ತೊಂದು ಕಡಿಮೆ ಎತ್ತರದ ಗೋಡೆಯನ್ನು

ರಾಯಚೂರು (ಚಿತ್ರಗಳಲು ೯, ೧೧) ಮತ್ತು ಮುದುಗಲ್ಲು (ಚಿತ್ರಗಳು ೧೧೪-೧೧೬). ಕೋಟೆಗಳಲ್ಲಿ ಕಟ್ಟಿದೆ. ಇಂತಹ ಜೋಡಿ ಗೋಡೆಗಳು ಗುಲಬರ್ಗ ಕೋಟೆಯಲ್ಲಿವೆ.[೭]

ಕೋಟೆ ಗೋಡೆಯ ಮೇಲೆ ತೆನೆಗಳಲ್ಲಿ ಗಮನೀಯವಾದ ವಿಕಾಸವನ್ನು ಕಾಣುತ್ತೇವೆ. ಕೈಪಿಡಿಗೋಡೆಯ ಮೇಲ್ಭಾಗದಲ್ಲಿ ಸಾಲಾಗಿ ತೆನೆಗಳಂತೆ ತಲೆ ಎತ್ತಿ ನಿಂತ ಭಾಗಗಳನ್ನು ಐಹೊಳೆಯ ಶಾಸನಗಳಲ್ಲಿ[೮] ಮತ್ತು ಸಾಹಿತ್ಯದಲ್ಲಿ[೯] 'ತೆನೆಗಳೆಂದೇ' ಉಲ್ಲೇಖಿಸಿದೆ. ಐಹೊಳೆಯ ಕೋಟೆಯ ಮೇಲಿನ ಶಾಸನಗಳ ಕಾಲ ಒಂಬತ್ತನೇ ಶತಮಾನ. ಶಾಸನಗಳಲ್ಲಿ ಉಲ್ಲೇಖಗೊಂಡ ತೆನೆಗಳು ಕೋಟೆಯ ಪಕ್ಕದಲ್ಲಿ ನೆಲದ ಮೇಲೆ ಬಿದ್ದಿವೆ. ಒಂದು ತೆನೆಯನ್ನು ಒಂದೆ ಕಲ್ಲಿನಲ್ಲಿ ಮಾಡಿದೆ. ಇವುಗಳ ಮೇಲ್ಭಾಗ ಅರ್ಧ ವೃತ್ತಾಕಾರದಲ್ಲಿದೆ. ವೃತ್ತಾಕಾರದ ಕೆಳಗಿನ ಭಾಗ ಕುತ್ತಿಗೆಯಂತಿದೆ. ಇಲ್ಲಿ ಎರಡು ಬದಿಗಳನ್ನು ಸ್ವಲ್ಪ ಕತ್ತರಿಸಿದೆ. ಇಂತಹ ತೆನೆಗಳನ್ನು ಹಾನಗಲ್ಲಿನಲ್ಲಿರುವ ಹನ್ನೆರಡು-ಹದಿಮೂರನೇ ಶತಮಾನಗಳ ವೀರಗಲ್ಲಿನ ಮೇಲಿರುವ ಕೋಟೆಯ ಶಿಲ್ಪದಲ್ಲಿ ನೋಡಬಹುದು.[೧೦] ಇದರಿಂದ ಸ್ವಲ್ಪ ಭಿನ್ನವಾದ ತೆನೆಗಳು ವಾರಂಗಲ್ಲಿನಲ್ಲಿ ಕಾಕತೀಯರು ಕಟ್ಟಿಸಿದ ಹದಿಮೂರನೇ ಶತಮಾನದ ಕೋಟೆಯಲ್ಲಿವೆ. ಈ ತೆನೆಗಳು ಆಯತಾಕಾರದಲ್ಲಿವೆ. ಇವುಗಳ ಮೇಲ್ಭಾಗ ಸಮತಟ್ಟಾಗಿದೆ. ಒಂದೇ ಕಲ್ಲಿನಲ್ಲಿ ಅನೇಕ ತೆನೆಗಳನ್ನು ಸಾಲಾಗಿ ಮಾಡಿದೆ.[೧೧] ತೆನೆಗಳ ಹಿಂದೆ ನಿಂತು ಅವುಗಳ ಮಧ್ಯದ ಸಂದಿಯಿಂದ ಈಟಿಯನ್ನು ಎಸೆಯುವುದು ಮತ್ತು ಬಾಣವನ್ನು ಬಿಡುವುದು ಸುಲಭವಾಗಿತ್ತು. ಕಾಕತೀಯರ ಕಾಲದ ರಾಯಚೂರು ಮತ್ತು ಮಲಿಯಾಬಾದ ಕೋಟೆಗಳ ಮೇಲೆ ತೆನೆಗಳಿಲ್ಲ. ಏಕ ಶಿಲೆಯ ಅರ್ಧ ವೃತ್ತಾಕಾರದ ಮೇಲ್ಭಾಗವುಳ್ಳ ಒಂದು ತೆನೆ ಕುಮ್ಮಟದುರ್ಗದಲ್ಲಿ ನೆಲದ ಮೇಲೆ ಬಿದ್ದಿವೆ. ಇಂತಹ ಒಂದು ತೆನೆ ಆನೆಗೊಂದಿಯ ಹೊನ್ನಗಸೆಯ ಮೇಲಿದೆ. ಬಹಮನಿ ಮತ್ತು ಆದಿಲ್‌ಶಾಹಿ ಕಾಲದ ರಾಯಚೂರು, ಮುದುಗಲ್ಲು ಮತ್ತು ಕೊಪ್ಪಳ ಕೋಟೆಗಳಲ್ಲಿ ತೆನೆಗಳನ್ನು ಒಂದೇ ಕಲ್ಲಿನಲ್ಲಿ ಮಾಡುವುದರ ಬದಲಾಗಿ ಅನೇಕ ಕಲ್ಲುಗಳಿಂದ ಕಟ್ಟಿ ಮಾಡಿದೆ. ಮುದುಗಲ್ಲು ಕೋಟೆಯ ಮೇಲಿನ ಶಾಸನಗಳು ತೆನೆಗಳನ್ನು 'ನಿಟು' ಗಳೆಂದು ಉಲ್ಲೇಖಿಸಿವೆ. ಕೆಲವು ತೆನೆಗಳು ಏಕ ಶಿಲೆಯ ತೆನೆಗಳಂತೆ ಘನವಾಗಿವೆ. ಉಳಿದ ತೆನೆಗಳಲ್ಲಿ ಬಂದೂಕನ್ನು ತೂರಿಸಲು ಚಿಕ್ಕ ಮತ್ತು ತೋಪಿನ ಬಾಯಿಯನ್ನು ತೂರಿಸಲು ಅಗಲವಾದ ಕಿಂಡಿಗಳನ್ನು ಮಾಡಿದೆ. ಕಿಂಡಿಗಳ ಅಳತೆ, ಆಕಾರ ಮತ್ತು ಸಂಖ್ಯೆಗಳಲ್ಲಿ ವೈವಿಧ್ಯತೆಯಿದೆ. ಕೆಲವುಗಳಲ್ಲಿ ಒಳಮೈಯಲ್ಲಿ ಕಿಂಡಿಗಳ ಸಂಖ್ಯೆ ಕಡಿಮೆಯಿದ್ದು ಹೊರಮೈಯಲ್ಲಿ ಹೆಚ್ಚಿಗಿವೆ. ಈ ಕಿಂಡಿಗಳ ಮೂಲಕ ನೇರವಾಗಿ, ಎಡಕ್ಕೆ, ಬಲಕ್ಕೆ, ಕೋಟೆಯ ಹತ್ತಿರ, ದೂರ ಪರಿಸ್ಥಿತಿಗೆ ಅನುಗುಣವಾಗಿ ಗುಂಡುಗಳನ್ನು ಹಾರಿಸಬಹುದು. ವೈರಿ ಎಸೆಯುವ ಆಯುಧ, ಗುಂಡುಗಳಿಂದ ತಪ್ಪಿಸಿಕೊಳ್ಳಲು ಮತ್ತು ಮಳೆ ಬಿಸಿಲಿನಿಂದ

ರಕ್ಷಣೆ ಪಡೆಯಲು ತೆನೆಗಳಲ್ಲಿ ದೊಡ್ಡ ಗೂಡುಗಳನ್ನು ಮಾಡಿದೆ (ಚಿತ್ರ ೧೪೪). ಇನ್ನೂ ಹೆಚ್ಚು ಅನುಕೂಲಕರವಾಗಿ ವೈರಿಯ ಮೇಲೆ ದಾಳಿ ಮಾಡಲು ಗೋಡೆಯಿಂದ ಮುಂದೆ ಚಾಚಿದ ಮುಂಚಾಚು (projecting balcony)ಗಳನ್ನು ನಿರ್ಮಿಸಿದೆ.

ಹದಿನಾರು-ಹದಿನೇಳನೇ ಶತಮಾನಗಳಲ್ಲಿ ಕೋಟೆಗಳನ್ನು ಹಿಂದು-ಮುಸ್ಲಿಮ್ ಮಿಶ್ರ ಶೈಲಿಯಲ್ಲಿ ಕಟ್ಟಿದೆ. ಕಲ್ಲಿನ ಜೊತೆ ಇಟ್ಟಿಗೆ ಗಾರೆಯನ್ನು ಬಳಸಿದೆ. ಕಂಬ ತೊಲೆಗಳ ಬಾಗಿಲುಗಳು; ಕಮಾನಿನಾಕಾರದ ಬಾಗಿಲುಗಳು, ಕಾಕಾರ, ಆಯತಾಕಾರ ಮತ್ತು ವೃತ್ತಾಕಾರದ ಕೊತ್ತಳಗಳು ಈ ಕೋಟೆಗಳಲ್ಲಿವೆ.

ಹದಿನೇಳು-ಹದಿನೆಂಟನೇ ಶತಮಾನಗಳಲ್ಲಿನಿರ್ಮಾಣಗೊಂಡ ಕೋಟೆಗಳು ಹೆಚ್ಚಾಗಿ ಸ್ಥಳೀಯ ಸಂಸ್ಥಾನಿಕರಿಗೆ ಸೇರಿದವು. ಆರ್ಥಿಕವಾಗಿ ಇವರು ಪ್ರಬಲರಾಗಿಲ್ಲದಿದ್ದುದರಿಂದ ಇವರು ಮಧ್ಯಮ ಗಾತ್ರದ ಮತ್ತು ಚಿಕ್ಕ ಕಲ್ಲುಗಳನ್ನು ಉಪಯೋಗಿಸಿ ಚಿಕ್ಕ ಕೋಟೆಗಳನ್ನು ಊರು ಸುತ್ತ ಕಟ್ಟಿದ್ದಾರೆ. ಕೆಲವರು ತಮ್ಮ ಅರಮನೆ ಅಥವಾ ವಾಸಸ್ಥಳಗಳ ಸುತ್ತ ಮಾತ್ರ ಚಿಕ್ಕ ಕೋಟೆಗಳನ್ನು ಕಟ್ಟಿಕೊಂಡಿದ್ದಾರೆ. ಹತ್ತೊಂಬತ್ತನೇ ಶತಮಾನ ಮತ್ತು ಇಪ್ಪತ್ತನೇ ಶತಮಾನದ ಆರಂಭದಲ್ಲಿ ಬಳಕೆಯಲ್ಲಿದ್ದ ಸೈಜುಗಲ್ಲುಗಳಿಂದಲೇ ಕೆಲವು ಕೋಟೆಗಳನ್ನು ಕಟ್ಟಿದೆ. ಇಂತಹ ಕೋಟೆಗಳು ಮುಧೋಳ, ಗುನ್ನಾಳ ಮತ್ತು ಚಿಲಕಮುಖಿಯಲ್ಲಿವೆ. ಚಿಕ್ಕ ಮ್ಯಾಗೇರಿಯಲ್ಲಿಯ ಕೋಟೆಯ ಕೆಳಗಿನ ಸ್ವಲ್ಪ ಭಾಗವನ್ನು ಮಾತ್ರ ಸೈಜುಗಲ್ಲಿನಿಂದ ಕಟ್ಟಿ ಉಳಿದ ಭಾಗವನ್ನು ಮಣ್ಣಿನ ಹೆಳ್ಳೆಗಳಿಂದ ಕಟ್ಟಿದೆ.

ಹದಿನೆಂಟನೇ ಶತಮಾನದ ಕೊನೆ ಭಾಗದಲ್ಲಿ ಹೈದರಾಲಿ ಮತ್ತು ಟೀಪುಸುಲ್ತಾನ ಕಟ್ಟಿಸಿದ ಕೋಟೆಗಳು ತಮ್ಮದೇ ಆದ ವೈಶಿಷ್ಟ್ಯಗಳನ್ನು ಹೊಂದಿವೆ. ಹೈದರಾಲಿಯು ಕೊಪ್ಪಳದ ಬತೇರಿಗಳನ್ನು ಐರೋಪ್ಯ ಶೈಲಿಯಲ್ಲಿ ಕಟ್ಟಿಸಿದ್ದನ್ನು ಅಲ್ಲಿಯ ಶಾಸನ ಉಲ್ಲೇಖಿಸುತ್ತದೆ. ಬಹಾದ್ದೂರ ಬಂಡ ಕೋಟೆಯೂ ಹೈದರಾಲಿಯ ಕಾಲದಲ್ಲಿ ನಿರ್ಮಾಣವಾಗಿದ್ದನ್ನು ಶಾಸನಗಳು ದಾಖಲಿಸಿವೆ. ಈ ಕೋಟೆಗಳಲ್ಲಿ ಗಾರೆಯನ್ನು ಹೇರಳವಾಗಿ ಬಳಸಿದೆ. ಗಾರೆ ಮಾಡಿದ ಕೈಪಿಡಿ ಗೋಡೆಗಳಲ್ಲಿ ತೆನೆಗಳಿಲ್ಲ. ಅವುಗಳ ಬದಲಾಗಿ ಅಗಲವಾದ ಸಂದಿಗಳಲಿವೆ. ಸಂದಿಗಳನ್ನು ತೋಪುಗಳಿಗಾಗಿ ಮಾಡಿದೆ. ಕೈಪಿಡಿಗೋಡೆಯ ತುದಿಯು ಹೊರಮೈ ನೇರವಾಗಿ ಇಳಿಜಾರಾಗಿದೆ. ಇಂತಹ ಭಾಗಕ್ಕೆ ಶತ್ರು ಹಾರಿಸಿದ ಗುಂಡು ತಗಲಿದಾಗ, ಗುಂಡಿನ ಏಟು ಹೆಚ್ಚಿಗೆ ಬೀಳುವುದಿಲ್ಲ. ಅದರ ಬದಲಾಗಿ ಗುಂಡು ತಾಗುವ ಸ್ಥಳ ಇಳಿಜಾರಾಗಿರುವುದರಿಂದ ಗುಂಡು ಜಾರಿ ಹಿಂದಕ್ಕೆ ಬೀಳುವುದು. ಇದೇ ಕಾಲದಲ್ಲಿ

ಕ್ರಿ.ಶ. ೧೭೮೦-೮೧ರಲ್ಲಿ ಹೈದರಾಬಾದಿನ ನಿಜಾಮನ ಕಾಲಕ್ಕೆ ರಾಯಚೂರು ಬೆಟ್ಟದ ಮೇಲೆ ನಿರ್ಮಾಣವಾದ ತಾಜ್ ಬಂಗಲೆಯ ಮೇಲಿನ ತೆನೆಗಳಲ್ಲಿ ಬ್ರಿಟಿಷರ ಪ್ರಭಾವವನ್ನು ನೋಡಬಹುದು. ಆಯತಾಕಾರದ ಈ ತೆನೆಗಳ ಹೊರಮೈ ವಕ್ರಾಕಾರವಾಗಿ ಇಳಿಜಾರಾಗಿದೆ (ಚಿತ್ರ ೬.೫).

ಕೋಟೆಯ ಒಳಗೆ ಅವಶ್ಯಕವಾದಷ್ಟು ಧಾನ್ಯಗಳನ್ನು ಕಣಜಗಳಲ್ಲಿ ಸಂಗ್ರಹಿಸಿಟ್ಟುಕೊಳ್ಳಲಾಗುತ್ತಿತ್ತು. ಸಾಮಾನ್ಯವಾಗಿ ಕಣಜಗಳನ್ನು ಕಲ್ಲು, ತೊಲೆ ಮತ್ತು ಚಪ್ಪಡಿಗಳನ್ನು ಉಪಯೋಗಿಸಿ ಕಟ್ಟಲಾಗುತ್ತಿತ್ತು. ಇಂತಹ ಆಯತಾಕಾರದ ಕಣಜಗಳು ಆನೆಗೊಂದಿ ಮತ್ತು ಕೊಪ್ಪಳ ಕೋಟೆಗಳಲ್ಲಿವೆ. ಇಟ್ಟಿಗೆ ಮತ್ತು ಗಾರೆಯ ಬಳಕೆ ಪ್ರಾರಂಭವಾದ ಮೇಲೆ ವೃತ್ತಾಕಾರದ ಕಣಜಗಳನ್ನು ಕಟ್ಟಲು ಪ್ರಾರಂಭಿಸಲಾಯಿತು. ವೃತ್ತಾಕಾರದ ಕಣಜಗಳು ಆನೆಗೊಂದಿ ಕೋಟೆಯಲ್ಲಿವೆ. ಇದೇ ರೀತಿ ನೀರನ್ನು ಬಾವಿ, ಕೊಳ, ಕೆರೆಗಳಲ್ಲಿ ಸಂಗ್ರಹಿಸಿಟ್ಟು ಕೊಳ್ಳಲಾಗುತ್ತಿತ್ತು. ಈ ವ್ಯವಸ್ಥೆಗೆ ಕೋಟೆಯ ಒಳಗೆ ಬೀಳುವ ಮಳೆಯ ನೀರನ್ನು ಮಾತ್ರ ಆಶ್ರಯಿಸಬೇಕಾಗುತ್ತಿತ್ತು. ಈ ಕೊರತೆಯಿಂದ ಪಾರಾಗಲು ಹೈದರಾಲಿ ಕೊಪ್ಪಳದಲ್ಲಿ ಬೇರೊಂದು ವ್ಯವಸ್ಥೆಯನ್ನು ಮಾಡಿದನು. ಕೋಟೆಯ ಹೊರಗಿರುವ ದೊಡ್ಡ ಕೆರೆಯಿಂದ ಕಾಲುವೆಯನ್ನು ತೋಡಿಸಿ, ನೀರನ್ನು ಕೋಟೆಯೊಳಕ್ಕೆ ತಂದು, ಅಲ್ಲಿಯ ಬಾವಿಗೆ ಬೀಳುವಂತೆ ಮಾಡಿದನು.

ಹನ್ನೊಂದನೇ ಶತಮಾನದಿಂದ ಇಪ್ಪತ್ತನೇ ಶತಮಾನದವರೆಗೆ ಸುಮಾರು ಒಂದು ಸಾವಿರ ವರ್ಷಗಳ ಸುದೀರ್ಘ ಕಾಲದಲ್ಲಿ ಕೋಟೆಗಳ ನಿರ್ಮಾಣದಲ್ಲಿ ಆದ ವಿಕಾಸವನ್ನು ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳಲ್ಲಿ ಕಾಣುತ್ತೇವೆ.

## ಟಿಪ್ಪಣಿಗಳು

೧. ಪಾಟೀಲ ಚನ್ನಬಸಪ್ಪ ಎಸ್., ೧೯೯೯, *ಕರ್ನಾಟಕ ಕೋಟೆಗಳು*, ಪು. ೪೩.

೨. Ramachandra Murthy N.S., 1996, *Forts of Andhra Pradesh*, pls. 3, 5.

೩. Dhaky M.A. (ed), 1996, *Encylopaedia of Indian Temple Architecture, SouthIndia, Upper Dravidadesa*, Later phase, A. D. 973-1326, pl. 1535.

೪. *ಅದೇ*, pls. 1405-1406, 1416-1419.

೫. ಪಾಟೀಲ ಚನ್ನಬಸಪ್ಪ ಎಸ್., *ಪೂರ್ವೋಕ್ತ*, ಪು. ೧೧೪-೧೧೮, ೧೩೬-೧೪೧, ೧೪೭-೧೫೬.

೬. Toy Sidney, 1957, *The Strongholds of India*, p. 56a.

೭. ಪಾಟೀಲ ಚೆನ್ನಬಸಪ್ಪ ಎಸ್., *ಪೂರ್ವೋಕ್ತ*, ಪು. ೧೧೬, ಚಿತ್ರ ೫೩.

೮. *SII*, XV, Nos. 498-508.

೯. ಬೆಟಗೇರಿ ಕೃಷ್ಣಶರ್ಮ, ೧೯೭೧, *ಕರ್ನಾಟಕ ಜನಜೀವನ*, ಪು. ೯-೧೦, ೧೩.

೧೦. Joshi S.K., 1985, *Defence Architecture in Early Karnataka*, pl.18-19.

೧೧. Ramachandra Murthy N.S., *ಪೂರ್ವೋಕ್ತ*, pl. 15.

# ಅಧ್ಯಾಯ ಏಳು

# ಸಮಾರೋಪ

ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳು ಅನೇಕ ರೀತಿಯಲ್ಲಿ ಮಹತ್ವ ಪಡೆದಿವೆ. ಈ ಪ್ರದೇಶಕ್ಕೆ ಕ್ರಿಸ್ತ ಪೂರ್ವ ಮೂರನೇ ಶತಮಾನದಿಂದ ಕ್ರಿಸ್ತಶಕ ಇಪ್ಪತ್ತನೇ ಶತಮಾನದವರೆಗೆ ಸತತವಾದ ರಾಜಕೀಯ ಇತಿಹಾಸವಿದೆ. ಮಸ್ಕಿ, ಮಾದಿನೂರು ಮತ್ತು ಕುಮ್ಮಟ ಅನುಕ್ರಮವಾಗಿ ಕಲ್ಯಾಣ ಚಾಲುಕ್ಯ, ಕಲಚೂರಿ ಮತ್ತು ಕಂಪಿಲದೇವನ ರಾಜಧಾನಿಗಳಾಗಿದ್ದವು. ಸಾಮಂತ ಅರಸರ, ಪಾಳೆಯಗಾರರ ಮತ್ತು ಸಂಸ್ಥಾನಿಕರ ರಾಜಧಾನಿಗಳು ಇಲ್ಲಿದ್ದವು. ಅನೇಕ ಪ್ರಮುಖ ಯುದ್ಧಗಳು ಇಲ್ಲಿ ನಡೆದಿವೆ. ಚಕ್ರವರ್ತಿಗಳು, ಸಾಮಂತರು, ಪಾಳೆಗಾರರು, ಸಂಸ್ಥಾನಿಕರು ಮತ್ತು ಅನೇಕ ಅಧಿಕಾರಿಗಳು ಈ ಪ್ರದೇಶದ ಕೋಟೆಗಳ ನಿರ್ಮಾಣಕ್ಕೆ ಕಾರಣರಾಗಿದ್ದಾರೆ. ಕೋಟೆಗಳ ನಿರ್ಮಾಣ ಮತ್ತು ಪುನರ್ ನಿರ್ಮಾಣ ಹನ್ನೊಂದನೇ ಶತಮಾನದಿಂದ ಇಪ್ಪತ್ತನೇ ಶತಮಾನದವರೆಗೆ ನಿರಂತರವಾಗಿ ನಡೆದಿದೆ. ಇದನ್ನು ಐತಿಹಾಸಿಕ ಘಟನೆಗಳಿಗಿಂತ ಕೋಟೆಗಳಲ್ಲಿಯ ನೂರಾರು ಶಾಸನಗಳೇ ಹೆಚ್ಚಿಗೆ ದೃಢೀಕರಿಸುತ್ತವೆ.

ಕೋಟೆಗಳಲ್ಲಿ ಮೂರು ಪ್ರಕಾರಗಳಿವೆ. ನೆಲದ ಮೇಲೆ ಕಟ್ಟಿದ ಸ್ಥಲದುರ್ಗಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ಬೆಟ್ಟದ ಮೇಲೆ ಕಟ್ಟಿದ ಗಿರಿದುರ್ಗಗಳ ಸಂಖ್ಯೆ ಗಣನೀಯವಾಗಿದೆ. ಕೆಲವು ಕೋಟೆಗಳ ಅರ್ಧ ಭಾಗವನ್ನು ನೆಲದ ಮೇಲೆ ಮತ್ತು ಅರ್ಧ ಭಾಗವನ್ನು ಬೆಟ್ಟದ ಮೇಲೆ ಕಟ್ಟಿದೆ. ನದಿಯ ನೀರಿನಿಂದ ಸುತ್ತುವರಿದಿರುವ ಜಲದುರ್ಗದ ಹೆಸರು ಸಹ ಜಲದುರ್ಗವೆಂದೇ ಇದೆ. ಅದೇ ರೀತಿ ಕೋಟೆಗಳ ಆಕಾರದಲ್ಲಿ ವೈವಿಧ್ಯತೆ ಇದೆ. ಬಹುಪಾಲು ಕೋಟೆಗಳಿಗೆ ನಿಯಮಿತವಾದ ಆಕಾರವಿಲ್ಲ. ಸ್ಥಳದ ಪರಿಸರಕ್ಕೆ ಅನುಗುಣವಾಗಿ ಕಟ್ಟಿರುವುದರಿಂದ ನಿರ್ದಿಷ್ಟ ಆಕಾರದಲ್ಲಿ ಕಟ್ಟಲು ಸಾಧ್ಯವಾಗಿಲ್ಲ. ಬೆಟ್ಟದ ಮೇಲಿನ ಕೋಟೆಗಳನ್ನು ಕಟ್ಟುವಾಗ ಬೆಟ್ಟದ ಮೇಲಿನ ಭಾಗದ ಆಕಾರವನ್ನು ಅವಲಂಬಿಸಿವೆ. ಮುದಗಲ್ಲಿನಲ್ಲಿರುವ ಕೋಟೆ ಚೌಕಾಕಾರದಲ್ಲಿದೆ. ಕಾಟಾಪುರ, ಕನಕಗಿರಿ, ದೇವದುರ್ಗ, ಹೊನ್ನಳ್ಳಿ, ಹಾಲಬಾವಿ ಕೋಟೆಗಳು ಮತ್ತು ಗುನ್ನಾಳ, ಹನುಮಸಾಗರ, ಶಿವಪುರ ಒಳಕೋಟೆಗಳು ಆಯತಾಕಾರದಲ್ಲಿವೆ. ಎಲ್ಲ ಕೋಟೆಗಳನ್ನು ಕಲ್ಲಿನಿಂದ ಕಟ್ಟಿದೆ. ಆದರೆ ಚಿಕ್ಕ ಮ್ಯಾಗೇರಿ ಕೋಟೆಯ ಕೆಳಗಿನ ಸ್ವಲ್ಪ ಭಾಗವನ್ನು ಮಾತ್ರ ಕಲ್ಲಿನಿಂದ ಕಟ್ಟಿ ಉಳಿದ ಭಾಗವನ್ನು ಮಣ್ಣಿನ ಹೆಳ್ಳೆಗಳಿಂದ ಕಟ್ಟಿದೆ. ದೊಡ್ಡ ಕೋಟೆಗಳನ್ನು ಅನೇಕ ಸುತ್ತುಗಳಲ್ಲಿ ಕಟ್ಟಿದೆ. ಚಿಕ್ಕ ಕೋಟೆಗಳನ್ನು ಒಂದು ಅಥವಾ ಎರಡು ಸುತ್ತುಗಳಲ್ಲಿ

ಕಟ್ಟಿದೆ. ಸಾಮಾನ್ಯವಾಗಿ ಒಳಸುತ್ತಿನಲ್ಲಿ ಪ್ರಮುಖವಾದ ಕೆಲವು ಕಟ್ಟಡಗಳಿವೆ. ಈ ಸುತ್ತನ್ನು ಬಾಲಹಿಸಾರ್, ಕಡೆಗಾಪು ಅಥವಾ ರಾಜವಾಡೆ ಎಂದು ಕರೆಯುವರು.

ಬೆಟ್ಟಗಳಿಂದ ಸುತ್ತುವರಿದ ಕುಮ್ಮಟದುರ್ಗಕ್ಕೆ ಹೋಗುವ ದಾರಿಯಲ್ಲಿರುವ ಕಣಿವೆಗಳಲ್ಲಿ ಕುದುರೆಗಳನ್ನು ತಡೆಯಲು ಕುದುರೆ ಕಲ್ಲುಗಳನ್ನು ನೆಟ್ಟಿದೆ. ಇಂತಹ ಸೈನಿಕ ವಾಸ್ತು ದೇಶದ ಇತರ ಕೋಟೆಗಳಲ್ಲಿ ಇಲ್ಲ. ಇದನ್ನು ಕರ್ನಾಟಕದ ಕೊಡುಗೆ ಎಂದೇ ಹೇಳಬಹುದು.

ಹನ್ನೊಂದರಿಂದ ಇಪ್ಪತ್ತನೇ ಶತಮಾನದವರೆಗೆ ಕೋಟೆಯು ವಿವಿಧ ರೀತಿಯಲ್ಲಿ ವಿಕಾಸ ಹೊಂದಿರುವುದನ್ನು ಇಲ್ಲಿ ಕಾಣುತ್ತೇವೆ. ಕೋಟೆಯ ಗೋಡೆಗೆ ಅತಿದೊಡ್ಡ ಕಲ್ಲುಗಳನ್ನು ಉಪಯೋಗಿಸಿದ್ದನ್ನು ಕಾಕತೀಯರ ಕಾಲದ ರಾಯಚೂರು ಮತ್ತು ಮಲಿಯಾಬಾದ ಕೋಟೆಗಳಲ್ಲಿ ನೋಡುತ್ತೇವೆ. ಮಲಿಯಾಬಾದ ಕೋಟೆಯ ಒಂದು ಕಲ್ಲು ೨೦ ಮೀ. ಉದ್ದ ಮತ್ತು ೧ ಮೀ. ಎತ್ತರವಿದೆ. ಇಂತಹ ದೊಡ್ಡ ಕಲ್ಲುಗಳನ್ನು ಸಾಗಿಸುವ ಅಪರೂಪದ ಚಿತ್ರಗಳನ್ನು ಈ ಕೋಟೆಗಳ ಕಲ್ಲುಗಳ ಮೇಲೆ ಕಾಣುತ್ತೇವೆ. ಇಷ್ಟು ದೊಡ್ಡ ಗಾತ್ರದ ಕಲ್ಲುಗಳು ನಮ್ಮ ದೇಶದ ಬೇರೆ ಯಾವುದೇ ಕೋಟೆಯಲ್ಲಿ ಕಾಣುವುದಿಲ್ಲ. ಕುಮ್ಮಟದುರ್ಗದ ಕೋಟೆಗೆ ದಪ್ಪ ಚೌಕಾಕಾರದ ಕಲ್ಲುಗಳನ್ನು ಉಪಯೋಗಿಸಿದೆ. ಆನೆಗೊಂದಿ, ರಾಯಚೂರು, ಮುದುಗಲ್ಲು, ಮಾನ್ವಿ ಕೋಟೆಗಳಿಗೆ ವಿಜಯನಗರ ಕಾಲದಲ್ಲಿ ಬಳಕೆಯಲ್ಲಿದ್ದ ಬೆಣೆಯಾಕಾರದ ಕಲ್ಲುಗಳನ್ನು ಉಪಯೋಗಿಸಿದೆ. ಮುಂದೆ ದಪ್ಪ ಕಲ್ಲುಗಳು ಮಧ್ಯಮ ಗಾತ್ರಕ್ಕಿಳಿದು, ಕೊನೆಗೆ ಸೈಜುಗಲ್ಲುಗಳಾಗುತ್ತವೆ. ಮೊದಲಿಗೆ ಕಟ್ಟಿದ ಕೋಟೆಗಳಲ್ಲಿದ್ದ ಚೌಕ ಮತ್ತು ಆಯತಾಕಾರದ ಕೊತ್ತಳಗಳು ನಂತರ ಕಟ್ಟಿದ ಕೋಟೆಗಳಲ್ಲಿ ಮುಸ್ಲಿಮ್ ಅರಸರ ಪ್ರಭಾವದಿಂದ ವೃತ್ತಾಕಾರ ಮತ್ತು ಬಹುಭುಜಾಕೃತಿಯನ್ನು ಹೊಂದಿವೆ. ಘನರೂಪದಲ್ಲಿದ್ದ ತೆನೆಗಳ ಸ್ವರೂಪ ಬಂದೂಕುಗಳ ಬಳಕೆಯಿಂದ ಬದಲಾಗಿದೆ. ಬಂದೂಕುಗಳನ್ನು ತೂರಿಸಲು ತೆನೆಗಳಲ್ಲಿ ಕಿಂಡಿಗಳನ್ನು ಮಾಡಿದೆ. ಕೊನೆಯಲ್ಲಿ ತೆನೆಗಳ ಬದಲಾಗಿ ಕೈಪಿಡಿಗೋಡೆಯಲ್ಲಿ ಅಗಲವಾದ ಸಂದಿಗಳನ್ನು ಮಾತ್ರಬಿಟ್ಟಿದೆ. ಇಂತಹ ಕೈಪಿಡಿಗೋಡೆಗಳ ಹೊರಮೈ ಇಳಿಜಾರಾಗಿದೆ. ಹೈದರಾಲಿ ಮತ್ತು ಟೀಪುಸುಲ್ತಾನರ ಕಾಲದ ಇಂತಹ ಕೈಪಿಡಿ ಗೋಡೆಗಳಲ್ಲಿ ಫ್ರೆಂಚರ ಪ್ರಭಾವವಿದೆ. ಮೊದಲಿನ ಕೋಟೆಗಳ ಆಯತಾಕಾರದ ಚೌಕಟ್ಟಿನ ಬಾಗಿಲ ಮುಂದೆ ಒಂದು ಆವರಣವಿದೆ. ನಂತರದ ಬಾಗಿಲುಗಳಲ್ಲಿ ಕಮಾನುಗಳಲ್ಲದೆ, ಒಂದಕ್ಕಿಂತ ಹೆಚ್ಚು ಬಾಗಿಲು ಮತ್ತು ಆವರಣಗಳಿದ್ದು, ಬಾಗಿಲುಗಳು ದೊಡ್ಡ ಸಂಕೀರ್ಣಗಳಾಗಿ ಮಾರ್ಪಡುತ್ತವೆ. ಸಮತಟ್ಟಾದ ಒಳಮಾಳಿಗೆಯು ಕಮಾನು ಮತ್ತು ಗುಮ್ಮಟಾಕಾರವನ್ನು ಹೊಂದುತ್ತವೆ. ಕ್ರಿ.ಶ. ೧೫೬೦ರಷ್ಟು ಹಳೆಯ ಮರದ ಕದಗಳು ಮುದುಗಲ್ಲಿನ ಕೋಟೆಯ

ಬಾಗಿಲಲ್ಲಿವೆ. ತೋಪುಗಳಲ್ಲಿ ಎರಡು ವಿಧಗಳಿವೆ. ಒಂದು ವಿಧದ ತೋಪುಗಳನ್ನು ಕಬ್ಬಿಣದ ಉದ್ದ ಪಟ್ಟಿಗಳು ಮತ್ತು ಅಗಲವಾದ ಬಳೆಗಳ ಎರಡು ಪದರುಗಳಿಂದ ನಿರ್ಮಿಸಿದೆ. ಮತ್ತೊಂದು ತೋಪುಗಳನ್ನು ಎರಕ ಹೊಯ್ದು ತಯಾರಿಸಿದೆ.

ಕೋಟೆಯ ವಿವಿಧ ಭಾಗಗಳನ್ನು ಗುರುತಿಸಲು ಆಗಿನ ಕಾಲದಲ್ಲಿ ಉಪಯೋಗಿಸುತ್ತಿದ್ದ ವಾಸ್ತು ಶಬ್ದಗಳನ್ನು ತಿಳಿಯಲು ರಾಯಚೂರು ಮತ್ತು ಮುದುಗಲ್ಲು ಕೋಟೆಯ ಮೇಲಿನ ಶಾಸನಗಳು ಮಹತ್ವದ ಕೊಡುಗೆಯನ್ನು ನೀಡುತ್ತವೆ. ಮುದುಗಲ್ಲು ಕೋಟೆಯ ಶಾಸನಗಳಲ್ಲಿ ಅಗುಸೆ, ದಿಡ್ಡಿ, ಮೊಗಸಾಲೆ, ಕೊತ್ತಳ, ಬುರುಜು ಮತ್ತು ನಿಟು ಪದಗಳಿವೆ. ರಾಯಚೂರು ಕೋಟೆಯ ಶಾಸನಗಳಲ್ಲಿ ಬುರ್ಜ್, ಕಂದಕ್, ಹಿಸಾರ್ ಮತ್ತು ಪರ್‌ಕೋಟ ಶಬ್ದಗಳನ್ನು ಬಳಸಿದೆ. ಈ ಸಂದರ್ಭದಲ್ಲಿ ಹಂಪಿಯ ಕೋಟೆಯ ಶಾಸನಗಳಲ್ಲಿಯ ಪದಗಳನ್ನು ಗಮನಿಸುವುದು ಅವಶ್ಯಕವಾಗಿದೆ. ವಿಜಯನಗರ ಅರಸರ ರಾಜಧಾನಿಯ ಬಾಗಿಲುಗಳನ್ನು ಗಾತ್ರಕ್ಕನುಗುಣವಾಗಿ ಹೆಬ್ಬಾಗಿಲು, ಬಾಗಿಲು ಮತ್ತು ದಿಡ್ಡಿಗಳೆಂದು ಕರೆದಿರುವುದು ಶಾಸನಗಳಿಂದ ಸ್ಪಷ್ಟವಾಗುತ್ತದೆ. ಅದೇ ರೀತಿ ಮುದುಗಲ್ಲಿನ ಬಾಗಿಲುಗಳನ್ನು ಅಗುಸೆ ಅಥವಾ ಅಗಸೆಗಳೆಂದು ಮತ್ತು ಚಿಕ್ಕ ಬಾಗಿಲುಗಳನ್ನು ದಿಡ್ಡಿಗಳೆಂದು ಕರೆದಿದೆ. ರಾಯಚೂರಿನ ಪರ್ಶಿಯನ್ ಶಾಸನಗಳಲ್ಲಿ ದಿಡ್ಡಿ ಉಲ್ಲೇಖಗೊಂಡಿದ್ದು ವಿಶೇಷವಾಗಿದೆ. ಮುದುಗಲ್ಲಿನ ಕಲ್ಲುಕಂಬಗಳ ಮಂಟಪದಂತಹ ಬಾಗಿಲನ್ನು ಮೊಗಸಾಲೆಯೆಂದು ಉಲ್ಲೇಖಿಸಿದೆ. ವಿಜಯನಗರದಲ್ಲಿ ಕರೆದಂತೆ ಕೊತ್ತಳಗಳನ್ನು ಕೊತ್ತಳಗಳೆಂದು ಕರೆದಿರುವುದಲ್ಲದೆ ಬುರುಜುಗಳೆಂದೂ ಕರೆಗಿದೆ. ಕೊತ್ತಳವನ್ನು ಪರ್ಶಿಯನ್ ಮತ್ತು ಉರ್ದು ಭಾಷೆಗಳಲ್ಲಿ ಬುರ್ಜ್ ಎಂದು ಕರೆಯುವರು. ನಿಟು ಪದವು ಮುದುಗಲ್ಲು ಕೋಟೆಯ ದೇಣಿಗೆ. ತೆನೆಗಳನ್ನು ಇಲ್ಲಿ ನಿಟುಗಳೆಂದು ಕರೆದಿದೆ. ಕೋಟೆಯ ಸುತ್ತಲಿನ ಅಗಳನ್ನು ಸಾಮಾನ್ಯವಾಗಿ ಕಂದಕವೆಂದು ಕರೆಯುತ್ತಾರೆ. ಈ ಪದವು ರಾಯಚೂರು ಕೋಟೆಯ ಪರ್ಶಿಯನ್ ಶಾಸನದಲ್ಲಿ ಕಂದಕ್ ಎಂದು ಉಲ್ಲೇಖಗೊಂಡಿದೆ.

ಯುದ್ಧ ಸಮಯದಲ್ಲಿ ದೊಡ್ಡ ಕೋಟೆಗಳ ವಿವಿಧ ಭಾಗಗಳನ್ನು ಶೀಘ್ರದಲ್ಲಿ ಗುರುತಿಸುವುದು ಅತ್ಯವಶ್ಯಕವಾದುದು. ಆದುದರಿಂದ ಕೋಟೆಯ ಬಾಗಿಲು ಮತ್ತು ಕೊತ್ತಳಗಳನ್ನು ಹೆಸರುಗಳಿಂದ ಗುರುತಿಸುವುದು ರೂಢಿಗೆ ಬಂದಿತು. ಇಂತಹ ಕೆಲವು ಹೆಸರುಗಳು ಈಗಲೂ ಬಳಕೆಯಲ್ಲಿವೆ. ಆದರೆ ಕೆಲವು ಹೆಸರುಗಳು ಮರೆತುಹೋಗಿವೆ. ಆದುದರಿಂದ ಶಾಸನಗಳಲ್ಲಿ ಬರುವ ಇಂತಹ ಹೆಸರುಗಳು ಮಹತ್ವಪೂರ್ಣವಾಗಿವೆ. ರಾಯಚೂರು ಕೋಟೆಯ ಶಾಸನಗಳು ಬಾಬುಲ್‌ಫತ್ ಬಾಗಿಲು, ತವಕ್ಕಲ್ ದಿಡ್ಡಿ, ಖುಶ್ರವೀ ಬುರ್ಜ್,

ಬುರ್ಜ್-ಇ-ಹಮಲ್, ಬುಜ್-ಅಲ್-ಫತ್, ಶಾಹ ಬುರ್ಜ್, ಅಲಿ ಬಿನ್ ಅಬಿತಾಲಿಬ್ ಬುರ್ಜ್ ಮತ್ತು ಕಾದಿರೀಯ್ಯ ಬುರ್ಜ್‌ಗಳನ್ನು ಉಲ್ಲೇಖಿಸುತ್ತವೆ. ಆನೆಗೊಂದಿಯ ಶಾಸನಗಳು ಬಡಗನೆಯ ಬಾಗಿಲು ಮತ್ತು ಕಲ್ಲಗಸೆಗಳನ್ನು ಉಲ್ಲೇಖಿಸುತ್ತವೆ. ಮುದುಗಲ್ಲು ಶಾಸನಗಳು ಬಸವನ ದಿಡ್ಡಿ, ಬಸವನ ಕೊತ್ತಳ, ಬಸವನ ನಿಟು, ಹನುಮಂತನ ಕೊತ್ತಳ, ವಿನಾಯಕನ ದಿಡ್ಡಿ, ವಿನಾಯಕನ ನಿಟು, ಸಾಳುವ ತಿಮ್ಮಯ್ಯನ ಕೊತ್ತಳ, ಕೊಮಾರ ಬುರುಜು, ಅಲಿ ಬುರುಜು, ರಾಮ ಬುರುಜು, ಫತೆ ಜಂಗು ಬುರುಜು ಮುಂತಾದುವುಗಳನ್ನು ಉಲ್ಲೇಖಿಸುತ್ತವೆ. ಕೊಪ್ಪಳದ ಶಾಸನಗಳು ಫತ್ ದರ್ವಾಜ, ಸುಲ್ತಾನ ಬಾಬ್, ಮಕ್ಕಾ ದರ್ವಾಜ, ಬಾಬ್-ಇ-ಅಲೀ ಬಾಗಿಲುಗಳನ್ನು ಮತ್ತು ಮಹಮ್ಮದ್ ಬುರ್ಜ್‌ನ್ನು ಉಲ್ಲೇಖಿಸುತ್ತವೆ. ಬಹಾದ್ದೂರಬಂಡ ಶಾಸನವು ಮಘ್ರಿಬಿ (ಪಶ್ಚಿಮ) ಮತ್ತು ಶಿಮಾಲೀ (ಉತ್ತರ) ಬಾಗಿಲುಗಳನ್ನು ಸೂಚಿಸುತ್ತದೆ.

ಕೋಟೆಯ ಒಳಗಿನ ಕೆಲವು ಕಟ್ಟಡಗಳನ್ನು ಗುರುತಿಸಲು ಶಾಸನಗಳು ಬಹಳ ಉಪಯುಕ್ತವಾಗಿವೆ. ರಾಯಚೂರಿನಲ್ಲಿಯ ಶಾಸನಗಳು ಒಂದು ಕಟ್ಟಡವನ್ನು ಅರಮನೆ ಎಂದು ಮತ್ತೊಂದನ್ನು ತಾಜ್ ಬಂಗಲೆ ಎಂದು ಉಲ್ಲೇಖಿಸುತ್ತವೆ. ಮುದುಗಲ್ಲಿನ ಶಾಸನಗಳು ಒಂದು ಕಟ್ಟಡವನ್ನು ಗಗನ್ ಮಹಲ್ ಮತ್ತು ಸೊಫೆ ಎಂದು ಗುರುತಿಸಲು ಸಹಕಾರಿಯಾಗಿವೆ. ಕೊಪ್ಪಳದ ಶಾಸನಗಳು ಪಾನೀ ಮಹಲ್ ಮತ್ತು ದಿವಾನ್-ಇ-ಖಾಸ್‌ಗಳನ್ನು ಉಲ್ಲೇಖಿಸುತ್ತವೆ.

ಮುದುಗಲ್ಲು ಕೋಟೆಯ ಶಾಸನಗಳು ಅರಸರ ಮತ್ತು ಅಧಿಕಾರಿಗಳ ಹೆಸರುಗಳ ಜೊತೆಗೆ ಅನೇಕ ಬಿರುದುಗಳನ್ನು ತಿಳಿಸುತ್ತವೆ. ಆ ಬಿರುದುಗಳು ಹೀಗಿವೆ. "ಸ್ವಾಮಿಕಾರ್ಯಹೇತು, ಪ್ರಜಾಪಾಲಕ, ಸತ್ಯಸಂಧ, ರಣರಂಗಧೀರ, ಸ್ವಾಮಿದ್ರೋಹರಗಂಡ, ತುರುಕಬಳ ವಿಭಾಡ, ಸಾಹಸ ಭೀಮ, ಅರಿರಾಯ ಮಾನಮರ್ದನ, ಪರದಳಕೆ ಕಾಲಭೈರವ, ಅರಿಗಳ ಹೃದಯಶೂಲ, ಬಹಡವ ಕೇಳುವ ದೊರೆಗಳ ಗಂಡ, ಆಡಿ ತಪ್ಪುವವರ ಮಿಂಡ, ಲೋಭಿವಜೀರರ ಗಂಡ, ಪರದ್ರವ್ಯಕೆ ಆಸೆ ಮಾಡುವ ದೊರೆಗಳ ಗಂಡ, ರಣದೊಳು ಹಿಮ್ಮೆಟ್ಟುವ ಹೇಡಿಗಳರಸ, ಆದಿಲಶಾಹನ ಹಲಾಲಖೋರ ಮತ್ತು ಆದಿಲಶಾಹನ ನೆಚ್ಚಿನ ಬಂಟ". ಇವುಗಳನ್ನು ಕೋಟೆಯ ರಕ್ಷಣಾ ಪಡೆಯ ಯೋಧರು ಓದುತ್ತಿದ್ದುದರಿಂದ ಅವರಲ್ಲಿ ದೇಶಭಕ್ತಿ ಮೂಡುವುದರ ಜೊತೆಗೆ, ಅವರನ್ನು ಚಾಡಿ ಹೇಳದಂತೆ, ಜಿಪುಣರಾಗದಂತೆ, ರಣರಂಗದಿಂದ ಪಲಾಯನ ಮಾಡದಂತೆ ಪ್ರೇರೇಪಿಸುತ್ತಿದ್ದವು.

ಹೀಗೆ ನಾನಾ ಬಗೆಯ ಮಹತ್ವವನ್ನು ಪಡೆದಿರುವ ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳಲ್ಲಿಯ ಕೋಟೆಗಳು ಕರ್ನಾಟಕದ ಅಧ್ಯಯನಕ್ಕೆ ಮಾತ್ರವಲ್ಲ, ಭಾರತದ ಕೋಟೆಗಳ ಅಧ್ಯಯನಕ್ಕೂ ಅತ್ಯವಶ್ಯಕವಾಗಿವೆ.

# ಗ್ರಂಥಸೂಚಿ

## ಗ್ರಂಥಗಳು

ಬಷೀರುದ್ದೀನ್ ಅಹ್ಮದ್; ೧೯೧೬ *ವಾಕೀಯತ್-ಏ-ಮುಮಲಿಕತ್-ತಾರೀಕ್-ಏ ಬಿಜಾಪುರ.*

*ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ,* ೧೯೭೯, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಚಿದಾನಂದಮೂರ್ತಿ ಎಂ., ೧೯೭೯, *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,* ಮೈಸೂರು.

ದೇವರ ಕೊಂಡಾರೆಡ್ಡಿ (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ :* ೨, ಕೊಪ್ಪಳ ಜಿಲ್ಲೆ

ಪಾಟೀಲ ಚನ್ನಬಸಪ್ಪ ಎಸ್., ೧೯೯೯, *ಕರ್ನಾಟಕ ಕೋಟೆಗಳು,* ಸಂ. ೧ ಹಂಪಿ.

ಪಾಟೀಲ ಬಿ.ಸಿ., ೧೯೯೮, *ಕೊಪ್ಪಳ : ಸಾಂಸ್ಕೃತಿಕ ಪರಂಪರೆ,* ಕೊಪ್ಪಳ.

ಬೆಟಗೇರಿ ಕೃಷ್ಣ ಶರ್ಮ, ೧೯೭೧, *ಕರ್ನಾಟಕ ಜನಜೀವನ,* ಧಾರವಾಡ.

ರಾಮಾನುಜ ಅಯ್ಯಂಗರ್ ಎಂ.ಎ. ಪಂಚತಂತ್ರ

ರಾಮಶರ್ಮ ಮೈ. ಹ. ೧೯೬೦, *ರಣಧೀರ ರಾಮನಾಥ,* ಮೈಸೂರು.

ರಾಮಶೇಷನ್ ನೀ. ಕೃ., ೧೯೮೦, *ಕರ್ನಾಟಕದ ಕೋಟೆ ಕೊತ್ತಲಗಳು,* ಬೆಂಗಳೂರು.

ರಡ್ಡೆಪ್ಪ : ರಾಯಚೂರು ಕೋಟೆ.

ವರದರಾಜರಾವ್ ಜಿ., ೧೯೬೬, *ಕುಮಾರರಾಮನ ಸಾಂಗತ್ಯಗಳು,* ಮೈಸೂರು. *ಕುಮ್ಮಟದುರ್ಗ,* ೧೯೮೫, ಬೆಂಗಳೂರು

*ಶರಣಪ್ಪ ಕೊಲ್ಕಾರ್ : ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿ ಶಿಲ್ಪಗಳು.*

Acharya P.K., 1927, *Indian Architecture According to Silpa Sastra,* Allahabad.

1927, *Manasara, an Encyclopeedia of Hindu Architecture,* Allahabad.

*Annual Reports of the Archaeological Department of HEH the Nizam's Dominions.*

*Annual Reports on Indian Epigraphy.*

Annual Reports of the Mysore Archaeological Department.

Chakravarthi P.C., 1941, *Art of warfare in Ancient India.* Dacca

Date G.T., 1929, *Art of war in AncientIndia*, London.

Desai P.B., Shrinivas H. Ritti and B.R. Gopal,1981, *A History of Karnataka,* Dharwad.

Dutta, B.B : *Town planning in Ancient India,*

Epigraphia Indica.

Epigraphia Indica, Arabic and Persion Supplement.

*Epigraphia Indo - Moslemica*

*Epigraphia Carnatica*

Fas Virginia, 1986, *The Forts of India,* Calcutta.

Ganapathi Sastri T., *Nitisara of Kamandaka*

Hayavadana Rao C., 1930, *Mysore Gazetteer,* Bangalore.

*Hyderabad Archaeological Series.*

Joshi S.K., 1985, *Defence Architecture in Early Karnataka,* Delhi.

Kamalapur J.N. 1964, *The Deccan Forts,* Bombay.

Narvane M. S., 1995, *Forts of Maharashtra,* NewDelhi.

Patil Channabasappa S. and Vinoda Patil (Eds)., 1998, *Inscriptions of Koppal District,* Mysore. & 1998, *Inscriptions of Raichur District,* Mysore.

*Raichur District Gazetteer,* 1970.

Ramachandra Murthy N.S.,1996, *Forts of Andhra Pradesh : From the Earliest times upto Sixteenth Century A. D.,* Delhi.

Rangachari K., *Town Planning and House Building in Ancient India.*

Rangarajan L.N., 1987, Kautilya The Arthashastra, Edited Rearranged Translated and Intruduced.

Sarma V. Suguna, 1998, *History and Antiquities of Raichur Fort,* Delhi.

Sastri Shama (Ed),1920, *Abhilashitartha Chintamani,* Mysore.

1958, *Arthasastra of Kautilya,* Mysore.

Sherwani H.K., 1975, *Medieval History of Deccan*, Hyderabad.

Straith H., *Treatise on Fortification and Artillary.*

Sarkar B.S., *Sukraniti.*

Singh A. P., 1987, *Forts and Fortifications in India : With Special Reference to Central India*, Delhi.

*South Indian Inscriptions*

Sugandha, *Archaeology of Anegondi,* Unpublished thesis submitted to the University of Poona, Poona.

Toy Sidney, 1955, A *History of Fortification from 3000 B.C. to 1700 A.D.*, London.

1957, *The Strongholds of India,* London.

1965, *The fortified Cities of India,* London.


## ಲೇಖನಗಳು


ಪಾಟೀಲ ಕಲ್ಲನಗೌಡ ತಿಪ್ಪನಗೌಡ, ೧೯೯೪, "ಇರಕಲ್‌ಗಡ ಕೋಟೆ," *ಇತಿಹಾಸ ದರ್ಶನ,* ಸಂ. ೯, ಪು. ೧೮೩-೧೮೪.

ಪಾಟೀಲ ಚನ್ನಬಸಪ್ಪ ಎಸ್., ೧೯೯೩-೧೯೯೫, "ಮಾತನಾಡುವಕೋಟೆಗಳು," *ದಿಕ್ಸೂಚಿ ವಾರಪತ್ರಿಕೆ,* ಜುಲೈ ೧೯೯೩ರಿಂದ ಜೂನ್ ೧೯೯೫ ರವರೆಗಿನ ಸಂಚಿಕೆಗಳು, ಬೆಂಗಳೂರು.

೧೯೯೪, "ರಾಯಚೂರು ಜಿಲ್ಲೆಯ ಕೋಟೆಗಳು," ಎಡೆದೊರೆನಾಡು ಉತ್ಸವ ಸ್ಮರಣ ಸಂಚಿಕೆ. ರಾಯಚೂರು, ಪು ೧.೧-೧.೧೧.

ಸುಜಾತ ಮಲ್ಲನಗೌಡ, ೧೯೯೮, "ರಾಯಚೂರು ಕೋಟೆಯಲ್ಲಿನ ಕೊತ್ತಳಗಳು," ಇತಿಹಾಸ ದರ್ಶನ, ಸಂ. ೧೩, ಪು. ೮೫-೮೬.

೧೯೯೮, "ಕೃಷ್ಣದೇವರಾಯನ ರಾಯಚೂರು ದಂಡಯಾತ್ರೆ ಮತ್ತು ರಾಯಚೂರು ಕೋಟೆಯ ನವರಂಗ ದರವಾಜ," *ವಿಜಯನಗರ ಅಧ್ಯಯನ,* ಸಂ. ೩, (ಸಂ) ಎಂ. ಎಲ್. ಶಿವಶಂಕರ ಮತ್ತು ಚನ್ನಬಸಪ್ಪ ಎಸ್. ಪಾಟೀಲ, ಮೈಸೂರು, ಪು. ೪೭-೫೧.

ಸುಜಾತಾ ಪಾಟೀಲ, ೧೯೯೯, "ಮುದುಗಲ್ಲು ಕೋಟೆ," *ವಿಜಯನಗರ ಅಧ್ಯಯನ,* ಸಂ. ೪, (ಸಂ)ಎಂ. ವಿ. ಕೃಷ್ಣಪ್ಪ ಮತ್ತು ಚನ್ನಬಸಪ್ಪ ಎಸ್. ಪಾಟೀಲ, ಮೈಸೂರು, ಪು. ೫೯-೬೩.

Patil Channabasappa S., 1991, "Kummata," Vijayanagara : Progress of Research 1987-88, (Eds.) D.V. Devaraj and Channabasappa S. Patil, Mysore, pp. 199-216.

1996, " Mudugal Fort and its bearing on Vijayanagara defence system at Vijayanagara," *Vijayanagara : Progress of Research 1988-91,* (Eds.) D.V. Devaraj and Channabasappa S. Patil, Mysore, pp. 197-211.

Sharma Rama, 1930, "Vestiges of Kummata, " *Quarterly Journal of the Mythic Society,* vol. xx, No. 4, Bangalore, pp. 261-270.

